॥ ಶ್ರೀ ಹರಿಃ ॥ 2251

# ಬ್ರಹ್ಮಚೈತನ್ಯ ಗೊಂದವಲೇಕರ ಮಹಾರಾಜ

## ब्रह्मचैतन्य गोन्दावलेकर महाराज ( कन्नड़ )




ಗೀತಾ ಪ್ರೆಸ್, ಗೋರಖಪುರ್

॥ ಶ್ರೀ ಹರಿಃ ॥

2251

# ಬ್ರಹ್ಮಚೈತನ್ಯ ಗೊಂದವಲೇಕರ ಮಹಾರಾಜ

**ब्रह्मचैतन्य गोन्दावलेकर महाराज – कन्नड़**

ತ್ವಮೇವ ಮಾತಾ ಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ।
ತ್ವಮೇವ ವಿದ್ಯಾ ದ್ರವಿಣಂ ತ್ವಮೇವ
ತ್ವಮೇವ ಸರ್ವಂ ಮಮ ದೇವದೇವ॥

ಮರಾಠಿ ಮೂಲ :

**ದೀಪಕ ಭಾಗವತ್**

ಕನ್ನಡಾನುವಾದ :

**ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್**

**ಗೀತಾ ಪ್ರೆಸ್, ಗೋರಖಪುರ್**

# ಪ್ರಸ್ತಾವನೆ

**''ಜಗಾಚ್ಯಾ ಕಲ್ಯಾಣಾ ಸಂತಾಂಚ್ಯಾ ವಿಭೂತೀ । ದೇಹ ಕಷ್ಟವಿತೀ ಉಪಕಾರೆ ॥''**
(ಜಗತ್ತಿನ ಕಲ್ಯಾಣಕ್ಕಾಗಿ ಸಂತರ ವಿಭೂತಿಗಳು, ಪರ ಉಪಕಾರಕ್ಕಾಗಿ ದೇಹ ದಂಡಿಸುತ್ತಾರೆ) ಇಂತಹ ಸಂತರು ಭಗವಂತನ ವಿಭೂತಿಗಳೇ ಆಗಿದ್ದಾರೆ. ಧರ್ಮ ಸ್ಥಾಪನೆಗಾಗಿ ಅವತರಿಸಿ ಜನ ಸಾಮಾನ್ಯರಿಗೂ ಭಗವತ್ ಪ್ರಾಪ್ತಿಯ ಸುಲಭ ಮಾರ್ಗವನ್ನು ಸಂತರು ತೋರಿಸುತ್ತಿರುತ್ತಾರೆ. ಭಾರತದಲ್ಲಿ ಎಲ್ಲ ಪ್ರಾಂತಗಳಲ್ಲಿ ಇಂತಹ ಅಸಂಖ್ಯ ಸಂತರಾಗಿ ಹೋಗಿದ್ದಾರೆ. ಇಂದು ಅವರು ದೇಹತಃ ಕಾಣದಿದ್ದರೂ ಅವರು ರಚಿಸಿದ ಸಾಹಿತ್ಯ, ಅವರು ತೋರಿದ ಸಾಧನಮಾರ್ಗ, ಅವರು ನಿರ್ಮಿಸಿದ ತೀರ್ಥಕ್ಷೇತ್ರಗಳು ಇದರಿಂದಾಗಿ ಅವರು ಅಜರಾಮರರೇ ಆಗಿದ್ದಾರೆ.

ಇಂತಹ ಸಂತರಲ್ಲಿ ಮಹಾರಾಷ್ಟ್ರದ ಗೊಂದವಲೇಯ ತೀರ್ಥಕ್ಷೇತ್ರದಲ್ಲಿ ಅವತರಿಸಿ ಸಂಸಾರದಲ್ಲಿದ್ದು ಪರಮಾರ್ಥ ಹೇಗೆ ಸಾಧಿಸಬಹುದೆಂದು ಸ್ವಂತ ಉದಾಹರಣೆಯಿಂದ ಲಕ್ಷಾವಧೀ ಭಾವಿಕರ ಎದುರುಗಿಟ್ಟ ಮಹಾನ್ ಸಂತ ಶ್ರೀಬ್ರಹ್ಮಚೈತನ್ಯ ಗೊಂದವಲೇಕರ್ ಮಹಾರಾಜರ ಭಾವಚರಿತ್ರ ಇದಾಗಿದೆ. ಸಿದ್ಧಹಸ್ತ ಲೇಖಕ, ಲೋಕಪ್ರಿಯ ಪ್ರವಚನ ಕಾರ ಮತ್ತು ಭಕ್ತಹೃದಯೀ ಶ್ರೀದೀಪಕ ಭಾಗವತರು ಈ ಚರಿತ್ರವನ್ನು ಲಿಪಿಬದ್ಧ ಮಾಡಿದ್ದಾರೆ.

ಈ ಹಿಂದೆ ಅನೇಕ ಸಂತಚರಿತ್ರಗಳು ನಮ್ಮಿಂದ ಪ್ರಕಾಶನ ಗೊಂಡಂತೆ, ಪ್ರಸ್ತುತ ಚರಿತ್ರದ ವರ್ಣನೆಯು ವಿವಿಧರಸ ಪರಿಪ್ಲುತವಾದ್ದರಿಂದ ಅವರ ಇತರ ಗ್ರಂಥಗಳಂತೆ ಈ ಚರಿತ್ರವು ಓದುಗರಿಗೆ ಮೆಚ್ಚಬಹುದು, ಇದರಲ್ಲಿ ಸಂದೇಹವೇ ಇಲ್ಲ. ಮನೋರಂಜನಾತ್ಮಕ ಕಥೆಗಳಿಂದ ಕೇವಲ ಮನೋರಂಜನೆಯೇ ಆಗುತ್ತದೆ, ಆದರೆ ಸಂತರ ಚರಿತ್ರಗಳನ್ನು ಓದುವಾಗ ಚಿತ್ತ ಸಾತ್ವಿಕತೆಯಿಂದ ತುಂಬಿ ಹೋಗಿ ಅದು ಯಾವಾಗ ಶಾಂತ ವಾಯಿತು ಎಂಬುದು ಓದುಗನಿಗೆ ತಿಳಿಯುವುದೇ ಇಲ್ಲ. ಅವರಿಗೆ ಗೀತಾಪ್ರೆಸ್ಸು ಆಭಾರಿಯಾಗಿದೆ.

ಇಂತಹ ಸಂತಚರಿತ್ರವನ್ನು ಸಂತರೇ ಆದ ಅನುವಾದಕ ಸಿದ್ಧಹಸ್ತರಾದ ಕೀರ್ತನಾಚಾರ್ಯ ಲಕ್ಷ್ಮಣದಾಸ ವೇಲಣಕರ್ ಇವರು ಸರಳ ಸುಂದರ ಕನ್ನಡದಲ್ಲಿ ಅನುವಾದಿಸಿಕೊಟ್ಟಿರುವರು. ಇವರ ಸಾಕಷ್ಟು ಅನುವಾದಿತ ಗ್ರಂಥಗಳು ನಮ್ಮ ಗೀತಾಪ್ರೆಸ್ಸಿನಿಂದ ಪ್ರಕಾಶ ಕಂಡಿವೆ. ಅದರಂತೆ ಈ ಸಂತ ಚರಿತವೂ ವಾಚಕರ ಮನ ಮುಟ್ಟುವುದರಲ್ಲಿ ಸಂದೇಹವೇ ಇಲ್ಲ. ಅವರು ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

ಸಂತರ ಆದರ್ಶ ಜೀವನ, ರಾಮನಾಮ ಪ್ರೇಮ ವಾಚಕರಿಗೂ ಲಭಿಸಲಿ ಎಂದು ಶ್ರೀರಾಮಚಂದ್ರನಲ್ಲಿ ವಿನಮ್ರ ಪ್ರಾರ್ಥನೆ.

**- ಪ್ರಕಾಶಕರು**

# ಇದೇ ಗುರುಗಳ ಸುಬೋಧ

ನಾಮ ಸದಾ ಬೋಲಾವೇ, ಗಾವೇ ಭಾವೇ ಜನಾಂಸಿ ಸಾಂಗಾವೆ ।
ಹಾಚಿ ಸುಬೋಧ ಗುರೂಂಚಾ, ನಾಮಾ ಪರತೇ ನ ಸತ್ಯಮಾನಾವೇ ॥ 1 ॥
ನಾಮಾಂತ ರಂಗುನಿಯಾ ವ್ಯವಹಾರೀ ಸರ್ವ ಭೋಗ ಸೇವಾವೇ ।
ಹಾಚಿ ಸುಬೋಧ ಗುರೂಂಚಾ, ಭೋಗಾಸಂಗೇ ಕುಠೇ ನ ಗುಂತಾವೇ ॥ 2 ॥
ಆನಂದಾಂತ ಅಸಾವೇ, ಆಳಸ ಭಯ ದ್ವೇಷ ದೂರ ತ್ಯಾಗಾವೇ ।
ಹಾಚಿ ಸುಬೋಧ ಗುರೂಂಚಾ, ಅನುಸಂಧಾನಾ ಕಧೀನ ಚುಕವಾವೇ ॥ 3 ॥
ಗೋಡ ಸದಾ ಬೋಲಾವೆ, ನಮ್ರಪಣೆ ಸರ್ವಲೋಕ ಪ್ರಿಯ ವ್ಹಾವೆ ।
ಹಾಚಿ ಸುಬೋಧ ಗುರೂಂಚಾ, ಭಕ್ತಿನೇ ರಘುಪತೀಸ ಆಳವಾವೇ ॥ 4 ॥
ಸ್ವಾಂತರ ಶುದ್ಧ ಅಸಾವೇ, ಕಪಟಾಚರಣಾ ಕಧೀ ನ ವಶವ್ಹಾವೇ ।
ಹಾಚಿ ಸುಬೋಧ ಗುರೂಂಚಾ, ಮನ ಕೋಣಾಚೆ ಕಧೀನ ದುಖವಾವೆ ॥ 5 ॥
ಮಾಝಾ ರಾಮ ಸಖಾ, ಮೀ ರಾಮಾಚಾದಾಸ, ನಿತ್ಯ ಬೋಲಾವೇ ।
ಹಾಚಿ ಸುಬೋಧ ಗುರೂಂಚಾ, ರಾಮಾಪಾಶಿ ಅನನ್ಯ ವಾಗಾವೇ ॥ 6 ॥
ಯತ್ನ ಕಸೂನ ಕರೀನ ಮಿ ಯಶ ದೇ, ರಾಮಾ, ನ ದೇ ತುಝೀ ಸತ್ತಾ ।
ಹಾಚಿ ಸುಬೋಧ ಗುರೂಂಚಾ, ಮಾನಾವಾ ರಾಮ ಸರ್ವಥಾ ಕರ್ತಾ ॥ 7 ॥
ಆಚಾರ ಸಂಯಮಾನೇ ಯುಕ್ತ ಅಸಾ ನೀತಿ ಧರ್ಮ ಪಾಳಾವಾ ।
ಹಾಚಿ ಸುಬೋಧ ಗುರೂಂಚಾ, ಖೇಳಾಐಸಾ ಪ್ರಪಂಚ ಮಾನಾವಾ ॥ 8 ॥
ದಾತಾ ರಾಮ ಸುಖಾಚಾ, ಸಂಸಾರಾ ಮಾನ ತೂ ಪ್ರಭುಸೇವಾ ।
ಹಾಚಿ ಸುಬೋಧ ಗುರೂಂಚಾ, ಸಂತೋಷಾ ಸರ್ವದಾ ಮನೀಠೇವಾ ॥ 9 ॥
ಸ್ವಾರ್ಥ ಖರಾ ಸಾಧಾರೇ, ನಿತ್ಯ ತುಮ್ಹೀ ನಾಮಗಾಯನೀ ಜಾಗಾ ।
ಹಾಚಿ ಸುಬುಧ ಗುರೂಂಚಾ, ಮೀಪಣ ಜಾಳೋನಿಯಾ ಜಗೀವಾಗಾ ॥ 10 ॥
ಅಭಿಮಾನ ಶತ್ರು, ಮೋಠಾ, ಸರ್ವಾಂನಾ ಜಾಚತೋ ಸುಖಾಶೇನೆ ।
ಹಾಚಿ ಸುಬುಧ ಗುರೂಂಚಾ, ಮಾರಾವಾ ತೋ ಸಮುಳ ನಾಮಾನೇ ॥ 11 ॥
ರಾಜ್ಯಾಧಿಕಾರ ಯೇವೋ, ಕಿಂವಾ ಜಾವೋ ಸಮಸ್ತಧನ ಮಾನ ।
ಹಾಚಿ ಸುಬೋಧ ಗುರೂಂಚಾ, ಭಂಗಾವೇ ನ ಕದಾ ಸಮಾಧಾನ ॥ 12 ॥
ಪ್ರೇಮಾಂತ ರಾಮ ರಮತೋ, ಪ್ರೇಮಾಲಾ ಮೋಲ ನಾ ಜಗಾಮಾಜೀ ।
ಹಾಚಿ ಸುಬೋಧ ಗುರೂಂಚಾ, ಗುರುರಾಯಾಲಾ ತಹಾನ ಪ್ರೇಮಾಚೀ ॥ 13 ॥

॥ ಜಾನಕೀ ಜೀವನ ಸ್ಮರಣ ಜಯ ಜಯ ರಾಮ ॥

# ಇದೇ ಗುರುಗಳ ಸುಬೋಧ

## (ಕನ್ನಡಾನುವಾದ)

ನಾಮವನ್ನು ಸದಾ ಹೇಳಬೇಕು. ಭಾವದಿಂದ ಹಾಡಬೇಕು. ಜನರಿಗೆ ಹೇಳಬೇಕು. ನಾಮವಲ್ಲದೆ ಬೇರೆ ಯಾವುದನ್ನೂ ಸತ್ಯವೆಂದು ತಿಳಿಯಬಾರದು. ಇದೇ ಗುರುಗಳ ಸುಬೋಧವಾಗಿದೆ. 1)

ನಾಮದಲ್ಲಿ ತನ್ಮಯನಾಗಿ ವ್ಯವಹಾರದ ಎಲ್ಲ ಭೋಗ ಅನುಭವಿಸಬೇಕು. ಭೋಗಗಳಲ್ಲಿ ಎಲ್ಲಿಯೂ ಒಂದಾಗಬಾರದು. ಇದೇ ಗುರುಗಳ ಸುಬೋಧವಾಗಿದೆ. 2)

ಆನಂದವಾಗಿ ಇರಬೇಕು, ಆಲಸ್ಯ, ಭಯ, ದ್ವೇಷ ದೂರವಿಡಬೇಕು. ದೇವರ ಅನುಸಂಧಾನ ಎಂದೂ ತಪ್ಪಬಾರದು. ಇದೇ ಗುರುಗಳ ಸುಬೋಧವಾಗಿದೆ. 3)

ಮಧುರವಾಗಿ ಮಾತನಾಡಬೇಕು. ವಿನಮ್ರನಾಗಿ ಸರ್ವಜನಪ್ರಿಯರಾಗಬೇಕು. ಭಕ್ತಿಯಿಂದ ರಘುಪತಿಯನ್ನು ಪ್ರಾರ್ಥಿಸಬೇಕು. ಇದೇ ಗುರುಗಳ ಸುಬೋಧವಾಗಿದೆ. 4)

ಒಳ ಹೊರಗೆ ಶುದ್ಧವಾಗಿರಬೇಕು. ಡಾಂಭಿಕತೆಗೆ ಎಂದೂ ವಶವಾಗಬಾರದು. ಯಾರ ಮನಸ್ಸನ್ನು ದುಃಖಿಸಬಾರದು. ಇದೇ ಗುರುಗಳ ಸುಬೋಧವಾಗಿದೆ. 5)

ರಾಮನೇ ನನ್ನ ಸಖನು, ನಾನು ರಾಮದಾಸ ಎಂದು ಸದಾಕಾಲ ಹೇಳಬೇಕು. ರಾಮನಲ್ಲಿ ಅನನ್ಯನಾಗಿ ವರ್ತಿಸಬೇಕು. ಇದೇ ಗುರುಗಳ ಸುಬೋಧವಾಗಿದೆ. 6)

ಮನಃಪೂರ್ವಕ ಪ್ರಯತ್ನ ಮಾಡುವೆನು, ಯಶವನ್ನು ಕೊಡು, ಕೊಡದಿದ್ದರೆ ನಿನ್ನ ಸತ್ತೆಯು, ಸರ್ವಥಾ ಕರ್ತಾ ರಾಮ ಎಂದು ತಿಳಿಯಬೇಕು. ಇದೇ ಗುರುಗಳ ಸುಬೋಧವಾಗಿದೆ. 7)

ಸಂಯಮದಿಂದ ಕೂಡಿದ ಆಚಾರವಿದ್ದು, ನೀತಿ-ಧರ್ಮ ಪಾಲಿಸಬೇಕು. ಲೀಲೆಯಂತೆ ಪ್ರಪಂಚ ತಿಳಿಯಬೇಕು. ಇದೇ ಗುರುಗಳ ಸುಬೋಧವಾಗಿದೆ. 8)

ಸುಖವನ್ನು ರಾಮನು ಕೊಡುವನು, ಸಂಸಾರದಕಾರ್ಯ ಪ್ರಭುಸೇವೆ ಎಂದು ತಿಳಿ, ಮನಸ್ಸಿನಲ್ಲಿ ಸದಾಕಾಲ ಸಂತೋಷವಿರಬೇಕು. ಇದೇ ಗುರುಗಳ ಸುಬೋಧವಾಗಿದೆ. 9)

ನಿಜಸ್ವಾರ್ಥವನ್ನು ಸಾಧಿಸಿರಿ, ನಿತ್ಯ ನಾಮಗಾಯನದಲ್ಲಿ ಬದುಕಬೇಕು. ನಾನೆಂಬುದನ್ನು ಸುಟ್ಟು ಜಗತ್ತಿನಲ್ಲಿ ವರ್ತಿಸಿರಿ, ಇದೇ ಗುರುಗಳ ಸುಬೋಧವಾಗಿದೆ. 10)

ಅಭಿಮಾನ ದೊಡ್ಡ ಶತ್ರು, ಎಲ್ಲರನ್ನು ಸುಖೇಚ್ಛೆಯಿಂದ ಸೆಳೆಯುತ್ತದೆ. ಅಭಿಮಾನವನ್ನು ನಾಮದಿಂದ ಬೇರು ಸಹಿತ ಕೊಲ್ಲಬೇಕು. ಇದೇ ಗುರುಗಳ ಸುಬೋಧವಾಗಿದೆ. 11)

ರಾಜ್ಯಾಧಿಕಾರ ಬರಲಿ, ಅಥವಾ ಹೋಗಲೀ, ಸಮಸ್ತ ಧನ, ಮಾನ - ಸಮ್ಮಾನ, ಸಮಾಧಾನ ಎಂದೂ ಬಿಡಬಾರದು; ಇದೇ ಗುರುಗಳ ಸುಬೋಧವಾಗಿದೆ. 12)

ಪ್ರೇಮದಲ್ಲಿ ರಾಮನು ರಮಿಸುತ್ತಾನೆ. ಪ್ರೇಮವು ಅಮೂಲ್ಯವಾದುದು ಜಗತ್ತಿನಲ್ಲಿ, ಗುರುವಿಗೆ ಪ್ರೇಮದ ಹಸಿವು ಇರುತ್ತದೆ. ಇದೇ ಗುರುಗಳ ಸುಬೋಧವಾಗಿದೆ. 13)

॥ ಜಾನಕೀ ಜೀವನ ಸ್ಮರಣ ಜಯ ಜಯ ರಾಮ ॥

# ಅನುಕ್ರಮಣಿಕೆ

# ಬ್ರಹ್ಮಚೈತನ್ಯ ಗೊಂದವಲೇಕರ ಮಹಾರಾಜ

-: ಒಂದು :-

## ಮಹಾರಾಜರ ಜನ್ಮ

ಮಹಾರಾಷ್ಟ್ರದ ಸಾತಾರಾ ಜಿಲ್ಲೆಯ, ಮಾಣ ತಾಲ್ಲೂಕಿನ ವಾವರಹಿರೆ ಎಂಬ ಊರು, ಈ ಊರು ಗೊಂದವಲೆಯಿಂದ ಎಂಟು ಮೈಲಿನಲ್ಲಿ ಇದೆ. ಈ ವಾವರಹಿರೆ ಊರಿನ ಘುಗರದರೆ ಎಂಬ ಪರಿವಾರ. ಈ ಮನೆತನದವರು ಕುಲಕರ್ಣಿಗಳಾಗಿದ್ದರು. ಅತ್ಯಂತ ನ್ಯಾಯಿಯಾದ ಈ ಕುಲಕರ್ಣಿಯವರು ನಿಃಸ್ವಾರ್ಥಿ ಮತ್ತು ಭೇದಭಾವ ರಹಿತ ವೃತ್ತಿಯಿಂದ ಎಲ್ಲರನ್ನೂ ತಮ್ಮವರನ್ನಾಗಿಸಿಕೊಂಡಿದ್ದರು. ಈ ಘುಗರದರೆ ಶುಕ್ಲ ಯಜುರ್ವೇದಿ ದೇಶಸ್ಥ ಬ್ರಾಹ್ಮಣರು. ಇವರ ಗೋತ್ರ ವಸಿಷ್ಠ. ಈ ಮನೆತನದಲ್ಲಿ ನಿಯಮ ಬದ್ಧ ಪಂಢರಪುರದ ವಾರಿ ಇತ್ತು . ಲಿಂಗೋಪಂತರು ಮಹಾರಾಜರ ಅಜ್ಜ. ಇವರ ಜನ್ಮ ಶಕ 1700 (ಕ್ರಿ.ಶ. 1778)ರಲ್ಲಿ ಆಗಿತ್ತು . ತಮ್ಮ 20ನೇ ವರ್ಷ ವಯಸ್ಸಿನಿಂದ ಇವರು ಕುಲಕರ್ಣಿ ಕಾರ್ಯ ನೋಡಿಕೊಳ್ಳುತ್ತಿದ್ದರು. ಇವರ ಪತ್ನಿ ಹೆಸರು ರಾಧಾಬಾಯಿ. ದಂಪತಿಗಳಿಬ್ಬರೂ ಭಗವದ್ಭಕ್ತ ಮತ್ತು ಪರೋಪಕಾರಿ ವೃತ್ತಿಯವರಾಗಿದ್ದರು. ಈ ವೃತ್ತಿಯಿಂದಲೇ ಇವರು ಮಾಣ ತಾಲ್ಲುಕಿನ ಮುಖ್ಯ ಕುಲಕರ್ಣಿ ಎಂಬ ನಿಯಕ್ತಿಯಾಗಿತ್ತು . ಅವರ ವರ್ತನೆಯಿಂದ ಜನರ ಕಡೆಯಿಂದಲೇ ಅವರ ಸತ್‌ಕೀರ್ತಿ ಸರಕಾರದವರೆಗೆ ತಲುಪುವಷ್ಟು ಲೋಕಪ್ರಿಯರಾಗಿದ್ದರು. ಇದರ ಪಾರಿತೋಷಕವಾಗಿ ಸರಕಾರವು ಇವರಿಗೆ ಸ್ವಲ್ಪ ಭೂಮಿ ಇನಾಮ ಎಂದು ಕೊಟ್ಟಿತ್ತು . ಆವಾಗಿನಿಂದ ಅವರು ಲಿಂಗೋಪಂತ ಇನಾಮದಾರ್ ಆದರು.

ಲಿಂಗೋಪಂತರು ಅತ್ಯಂತ ಶ್ರದ್ಧಾವಂತರಾಗಿದ್ದರು. ಅವರ ನಿತ್ಯಕ್ರಮ ಎಂದೂ ತಪ್ಪಲಿಲ್ಲ. ಬೆಳಗಿನ ಝಾವ ಎದ್ದು ಕೈ ಮುಗಿದು ವಿಟ್ಠಲ ಸ್ಮರಣೆ ಮಾಡುವುದು, ಪ್ರಾತರ್ವಿಧಿ ಮುಗಿಸಿ ಸ್ನಾನಮಾಡಿ ಸಂಧ್ಯೆ ಮಾಡುವುದು, ದೇವರ ಪೂಜೆ ಮಾಡುವುದು, ಪೂಜೆಯ ಬಳಿಕ ಭಗವದ್ಗೀತೆಯ ಒಂದು ಅಧ್ಯಾಯ ಗಟ್ಟಿಯಾಗಿ

ಓದುವುದು, ಅನಂತರ ಕಛೇರಿಯ ಕಾರ್ಯಭಾರ ಪ್ರಾರಂಭಿಸುವುದು. ಮಧ್ಯಾಹ್ನ ಊಟ ಮಾಡಿ, ಸ್ವಲ್ಪ ಹೊತ್ತು ವಾಮಕುಕ್ಷಿ. ವಾಮಕುಕ್ಷಿ ಬಳಿಕ ಪುರಾಣ ಶ್ರವಣ. ಸಾಯಂಕಾಲ ಲಿಂಗೋಪಂತರು ಸಾಯಂ ಸಂಧ್ಯೆ ಮಾಡುತ್ತಿದ್ದರು. ಅನಂತರ ಗಟ್ಟಿಯಾಗಿ ಹರಿಪಾಠ ಹೇಳುತ್ತಿದ್ದರು. ರಾತ್ರೆ ಒಂಭತ್ತರ ಸುಮಾರಿಗೆ ಫಲಾಹಾರ. ಫಲಾಹಾರ ಮುಗಿದಾಗ ವಾರಕರಿಯವರು ಸೇರುತ್ತಿದ್ದರು.ತಾಳ- ವೀಣೆ-ಮೃದಂಗ ನಾದದೊಂದಿಗೆ ಮಧುರವಾಗಿ ಪಂಚಪದಿಯ ಗಾಯನ. ಒಂದಾದ ಬಳಿಕ ಒಂದು ಭಕ್ತಿಭರಿತ ಅಭಂಗ ಭಜನೆ ನಡೆಯುತ್ತಿತ್ತು . ಭಜನೆಯಲ್ಲಿ ತನ್ಮಯರಾಗಿ ಅವರ ಕಣ್ಣುಗಳಿಂದ ಭಾವಾಶ್ರುಗಳು ಹರಿಯುತ್ತಿದ್ದವು.

ಲಿಂಗೋಪಂತರಿಗೆ ಗಂಡು ಮಗು ಹುಟ್ಟಿತು, ಅದಕ್ಕೆ 'ರಾವಜೀ' ಎಂದು ನಾಮಕರಣ ಮಾಡಿದರು. ಸದೈವ ಪಾಂಡುರಂಗ ಸ್ಮರಣೆಯಲ್ಲಿ ಮುಳುಗಿದ ಲಿಂಗೋಪಂತರು ಬಳಲಿಹೋಗಿದ್ದರು. ಶರೀರ ಬಳಲಿತು ಇನ್ನು ಪಂಢರಪುರದ ವಾರಿಗೆ ಹೋಗುವುದು ಅಸಾಧ್ಯವೆಂದು ತೋರಿತು. ಇನ್ನು ಪಂಢರಿಗೆ ಹೋಗಲಾಗುವುದಿಲ್ಲ ಈ ಚಿಂತೆಯಲ್ಲಿ ಗ್ರಸ್ತರಾದರು. ವ್ಯಥಿತ ಅಂತಃಕರಣದಿಂದ ಆ ಭಕ್ತವತ್ಸಲನಿಗೆ ಮೊರೆಯಿಟ್ಟರು. ಬೆಳಗಿನ ಝಾವ ಗಾಢನಿದ್ರೆಯಲ್ಲಿರುವಾಗ ಅವರಿಗೆ ಸ್ವಪ್ನದಲ್ಲಿ ಸಾಕ್ಷಾತ್ ಪಾಂಡುರಂಗನು ಕಾಣಿಸಿಕೊಂಡು ಲಿಂಗೋಪಂತರನ್ನು ಹೊಲದ ಒಂದು ಭಾಗಕ್ಕೆ ಕರೆದುಕೊಂಡು ಹೋಗಿ ಭಗವಂತನು ಪಂತರಿಗೆ ಹೇಳಿದನು - ಪಂತರೇ! ವಯಸ್ಸಿನಿಂದಾಗಿ ಶರೀರ ಬಳಲಿದೆ. ಇನ್ನು ಪಂಢಪುರಕ್ಕೆ ಬರುವ ಕಷ್ಟಪಡಬೇಡಿ. ನಾನೇ ನಿಮ್ಮಲ್ಲಿಗೆ ವಾಸಿಸಲು ಬಂದಿರುವೆನು. ಇಲ್ಲೇ ಅಗೆದು ನೋಡಿ, ಇಲ್ಲಿ ನಾನಿದ್ದೇನೆ; ಭಗವಂತನು ಅಂತರ್ಧಾನನಾದನು.

ಮರುದಿನ ನಸುಕಿನಲ್ಲೇ ಭಕ್ತಮಂಡಳಿಯೊಂದಿಗೆ ಹೊಲದಲ್ಲಿ ಪಾಂಡುರಂಗನು ತೋರಿಸಿದ ಜಾಗಕ್ಕೆ ಹೋದರು. ನೆಲ ಅಗೆಯ ತೊಡಗಿದರು. ಮೂರು - ನಾಲ್ಕು ಅಡಿ ಅಗೆದಾಗ 'ವಿಟ್ಠಲ - ರುಕ್ಮಿಣಿ'ಯರ ಸುಂದರ ಮೂರ್ತಿ ದೊರಕಿತು. ಲಿಂಗೋಪಂತರ ಕಣ್ಣುಗಳಿಂದ ಆನಂದಾಶ್ರುಗಳು ಹರಿದವು. ಭಕ್ತ ಮಂಡಳಿಯು ಜಯ ಜಯ ರಾಮ ಕೃಷ್ಣ ಹರಿ' ಎಂದು ಜಯಘೋಷ ಮಾಡಿದರು. ಮೂರ್ತಿಗಳನ್ನು ಪಲ್ಲಕಿಯಲ್ಲಿಟ್ಟು ಭಜನೆ ಮಾಡುತ್ತಾ ಮನೆಗೆ ತಂದರು. ಮನೆಯ ಪಕ್ಕದಲ್ಲೇ ವಿಟ್ಠಲ ಮಂದಿರ ನಿರ್ಮಾಣವಾಯಿತು. ಮಂದಿರದಲ್ಲಿ ವೇದೋಕ್ತವಾಗಿ ಪ್ರತಿಷ್ಠೆ ಮಾಡಲಾಯಿತು. ಮೂತಿಯು ದೊರಕಿದ ಜಾಗದಲ್ಲೇ ನೀರು ಉಕ್ಕಿಬಂತು. ಅದನ್ನು 'ವಿಟ್ಠಲಬಾವಿ' ಎಂದು ಎಲ್ಲರೂ ಕರೆಯ ತೊಡಗಿದರು. ಯಾವ ಹೊಲದಲ್ಲಿ ಮೂರ್ತಿ

ಸಿಕ್ಕಿತ್ತೋ ಅದು 'ವಿಟ್ಠಲನ ಹೊಲ'ವಾಯಿತು. ಮೂರ್ತಿಯ ಪ್ರತಿಷ್ಠಾಪನೆಯ ಬಳಿಕ ಸಪ್ತಾಹವಿಡೀ ಉತ್ಸವ ನಡೆದು, ಭಜನೆ - ಕೀರ್ತನೆ ಮತ್ತು ಅನ್ನದಾನಾದಿ ಕಾರ್ಯಕ್ರಮಗಳು ನಡೆದವು.

ಲಿಂಗೋಪಂತ ಮತ್ತು ರಾಧಾಬಾಯಿ ಇವರ ಪುತ್ರ ರಾವಜೀ, ಇವನು ಈಶ್ವರ ಭಕ್ತ ಮತ್ತು ಏಕಾಂತ ಪ್ರಿಯನಾಗಿದ್ದ. ಬಾಲ್ಯದಲ್ಲಿ ಅವನು ಆಟಗಳಲ್ಲಿ ರಮಿಸಲಿಲ್ಲ. ದೇವರಪೂಜೆ, ನಾಮಸ್ಮರಣ, ಧ್ಯಾನಧಾರಣಾ ಇವುಗಳಲ್ಲಿ ಅವನಿಗೆ ವಿಲಕ್ಷಣ ಪ್ರೇಮವಿತ್ತು . ದೊಡ್ಡವನಾದಂತೆ ಅವನಿಗೆ ಲಿಂಗೋಪಂತರು ಕುಲಕರ್ಣಿಯ ಕೆಲಸಗಳನ್ನು ಕಲಿಸಿದರು. ಅಪ್ಪನು ನಿಃಶಕ್ತನಾದುದರಿಂದ ರಾವಜೀಯವರು ಕುಲಕರ್ಣಿಕೆಯನ್ನು ಸ್ವೀಕರಿಸಿದರು. ಆದರೆ ಅದನ್ನು ಕರ್ತವ್ಯಕ್ಕಷ್ಟೇ ಮಾಡಿದರು. ಅವರ ಎಲ್ಲ ಸಮಯ ಭಗವತ್ ಸ್ಮರಣೆಯ ಕಡೆಗೇ ಇತ್ತು . ರಾವಜೀಯರು ಎಂದೂ ಯಾರನ್ನೂ ಮೋಸ ಮಾಡಲಿಲ್ಲ. ಪರದ್ರವ್ಯವನ್ನು ಎಂದೂ ಸ್ಪರ್ಶಿಸಲಿಲ್ಲ. ಜೀವನದಲ್ಲಿ ಅವರು ಎಂದಿಗೂ ಸುಳ್ಳಾಡಲಿಲ್ಲ.

ರಾವಜೀಯ ಪತ್ನೀ ಗೀತಾ. ಏಳೆಂಟು ವಯಸ್ಸಿನಲ್ಲೇ ಮದುವೆ ಆಗಿ ಗಂಡನ ಮನೆಗೆ ಬಂದಳು. ಗೀತಾ ಅತ್ತೆ-ಮಾವಂದಿರ ಮುದ್ದಿನ ಸೊಸೆ. ಹಿರಿಯವಳಾಗುವಂತೆ ಮನೆಯ ಒಂದೊಂದು ಹೊಣೆಗಾರಿಕೆ ನಿಭಾಯಿಸಿದಳು. ನಿಧಾನವಾಗಿ ರಾಧಾಬಾಯಿಯ ಬಳಿಕ ಗೀತಾಬಾಯಿ ಮನೆಯ ಯಜಮಾನತಿಯಾದರು. ಗೀತಾಬಾಯಿಯು ಪ್ರೇಮಮಯಿ, ಕಷ್ಟಸಹಿಷ್ಣು, ದಯಾಳು ಆಗಿದ್ದರು. ಆಕೆಯ ಪತಿ ರಾವಜೀಯವರು ವಿರಕ್ತರಾಗಿದ್ದರಿಂದ ಅನೇಕ ವ್ಯವಹಾರ ಗೀತಾಬಾಯಿಯೇ ಮಾಡಬೇಕಾಗಿತ್ತು . ಅವಳ ಮೃದು, ಕಷ್ಟಸಹಿಷ್ಣು ಸ್ವಭಾವದಿಂದಾಗಿ ಅವರು ಇವೆಲ್ಲವನ್ನೂ ಸಹಜವಾಗಿ ನೆರವೇರಿಸಿದರು. ಅವರಲ್ಲಿ ಕರುಣೆ ಅಪಾರವಾಗಿತ್ತು . ಊರಿನಲ್ಲಿ ಯಾರಾದರೂ ಕಾಯಿಲೆ ಬಿದ್ದರೆ ಅವರನ್ನು ಭೇಟ್ಟಿಯಾಗಲು ತಾನೇ ಸ್ವತಃ ಹೋಗುತ್ತಿದ್ದರು. ಬೇಕು - ಬೇಡಗಳನ್ನು ವಿಚಾರಿಸಿ ಅದಕ್ಕನುಗುಣವಾಗಿ ಔಷಧ-ಪಥ್ಯದ ವ್ಯವಸ್ಥೆ ಮಾಡುತ್ತಿದ್ದರು. ಗೀತಾಬಾಯಿಯು ಅನ್ನಪೂರ್ಣೇ ಆಗಿದ್ದರು. ಪ್ರತಿಯೊಂದು ಪದಾರ್ಥ ಉತ್ತಮ ಮತ್ತು ರುಚಿಕಟ್ಟಾಗಿ ಆಗುತ್ತಿತ್ತು . ಜನರು ಗೀತಾಬಾಯಿಯ ಕೈಯ ಪಥ್ಯದ ಪದಾರ್ಥಗಳನ್ನು ಮುದ್ದಾಂ ಸೇವಿಸುತ್ತಿದ್ದರು. ಅದರಿಂದಲೇ ಅವರ ಕಾಯಿಲೆ ದೂರವಾಗಿ ಬೇಗನೇ ಆರೋಗ್ಯವಂತರಾಗುತ್ತಾರೆ ಎಂಬ ಅವರ ಶ್ರದ್ಧೆ ದೃಢವಾಗಿತ್ತು . ಗೀತಾ ಬಾಯಿಯವರೆ! ನಿಮ್ಮ ಕೈಗೆ ದೈವೀಗುಣವಿದೆ, ನಮ್ಮ ಮೇಲೆ ನಿಮ್ಮ ತುಂಬಾ ಉಪಾರವಾಯಿತು,

ನಮಗೂ ಕೂಡ ನಿಮಗೇನಾದರೂ ಮಾಡಬೇಕೆಂದು ಅನಿಸುತ್ತದೆ, ತಾಯಿ! ಹೇಳಿ, ನಿಮಗೆ ಏನು ಕೊಡಬಲ್ಲೆವು ನಾವು? ಹೀಗೆ ಜನರು ಕೃತಜ್ಞತೆಯಿಂದ ಕೇಳುತ್ತಿದ್ದರು. ಬಾಯಿಯವರು ಹೇಳುತ್ತಿದ್ದರು- ಪ್ರಭು ರಾಮಚಂದ್ರನ ಕೃಪೆಯಿಂದ ನನಗೇನೂ ಕೊರತೆ ಇಲ್ಲ. ನನಗಾಗಿ ನಿಮಗೆ ಏನಾದರೂ ಮಾಡಬೇಕೆಂದಿದ್ದರೆ ಶ್ರೀರಾಮ ಸ್ಮರಣೆ ಮಾಡಿ, ಎಲ್ಲವೂ ನನಗೆ ಮುಟ್ಟಿದಂತೆ. ಗೀತಾಬಾಯಿಯ ತವರಿನಲ್ಲಿ ಶ್ರೀರಾಮ ಉಪಾಸನೆ ಇತ್ತು . ಅವರ ಮನೆತನದಲ್ಲೇ ಸಮರ್ಥ ಶ್ರೀರಾಮದಾಸ ಸ್ವಾಮಿಗಳ ಮೇಲೆ ದೃಢ ನಿಷ್ಠೆಯಿತ್ತು . ಬಾಲ್ಯದಿಂದಲೇ ಅವಳು ದಾಸಬೋಧ ಓದುತ್ತಿದ್ದಳು. ರಾಮನಾಮ ಜಪ ಮಾಡುತ್ತಿದ್ದಳು.

ರಾವಜೀ ಮತ್ತು ಗೀತಾಬಾಯಿಯವರು ಸಂಭಾಜೀ ಎಂಬ ದೊಡ್ಡ ಸಾಧಕರ ಬಳಿಗೆ ದರ್ಶನಕ್ಕಾಗಿ ಹೋಗುತ್ತಿದ್ದರು. ಆ ಸಾಧಕ ಸತ್ಪುರುಷರು ಹನ್ನೆರಡು ವರ್ಷ ಮೌನದಿಂದ ಇದ್ದರು. ಒಮ್ಮೆ ಹೀಗೆಯೇ ಈ ದಂಪತಿಗಳು ದರ್ಶನಕ್ಕಾಗಿ ಹೋಗಿದ್ದಾಗ ಆ ಸತ್ಪುರುಷರು ಅವರಿಬ್ಬರಿಗೆ ಒಂದು ತೆಂಗಿನಕಾಯಿ ಪ್ರಸಾದವೆಂದು ಕೊಟ್ಟರು ''ಪರಮಾತ್ಮನು ನಿಮ್ಮ ಶ್ರೇಯಸ್ಸು ಮಾಡಲಿ. ನೀವಿಬ್ಬರೂ ಅವನ ನಾಮ ಸ್ಮರಣೆ ಮಾಡಿ'' ಎಂದು ಇಬ್ಬರಿಗೂ ಆಶೀರ್ವಾದಪರ ಆದೇಶ ಕೊಟ್ಟರು.

ಕೆಲ ಸಮಯ ಸಂದ ಬಳಿಕ ಗೀತಾಬಾಯಿಯವರು ಗರ್ಭವತಿಯಾದರು. ಮಗುವಿನ ಬರುವಿಕೆಯ ಲಕ್ಷಣ ಕಂಡು ಮನಸ್ಸಿನಲ್ಲೇ ಮಾತೃತ್ವದ ಸೆಳೆತ ನಿರ್ಮಾಣವಾಯಿತು. ದಿನಗಳು ಕಳೆದಂತೆ ಅವರಿಗೆ 'ಶ್ರೀರಾಮ' ನಾಮಸ್ಮರಣೆಯ ಸೆಳೆತ ಉಂಟಾಯಿತು. ಮನಸ್ಸಿನಲ್ಲಿ, ವೈಖರಿಯಲ್ಲಿ ಕೇವಲ ಶ್ರೀರಾಮ. ಲಿಂಗೋಪಂತರು ತಮ್ಮ ಸೊಸೆಗೆ ಆಕೆಯ ಇಚ್ಛೆ ಕೇಳಿದರು. ಆಗ ''ನನ್ನ ಮನಸ್ಸಿನಲ್ಲಿ ದಾಸಬೋಧ ಶ್ರವಣಿಸ ಬೇಕೆಂಬ ಬಯಕೆ ನಿರ್ಮಾಣವಾಗಿದೆ'' ಎಂದು ಗೀತಾಬಾಯಿಯು ಹೇಳಿದಳು. ಲಿಂಗೋಪಂತರು ಅದಕ್ಕನುಸಾರ ತಮ್ಮ ವಿಟ್ಠಲ ಮಂದಿರದಲ್ಲಿ ಮ್ಹಾಸುರ್ಣೇಕರ್ ಶಾಸ್ತ್ರಿಗಳನ್ನು ಕರೆಸಿ, ಅವರಿಂದ ದಾಸಬೋಧ ಪಾರಾಯಣ ಮತ್ತು ಪುರಾಣ ನೆರವೇರಿಸಿದರು.

ಗೊಂದವಲೆಯಲ್ಲೇ ಹೆರಿಗೆ ಆಗುವುದು ಎಂದು ನಿಶ್ಚಯವಾಯಿತು. ಗೀತಾಬಾಯಿಯ ತಂದೆ-ತಾಯಿಯರನ್ನು ಗೊಂದವಲೆಗೇ ಕರೆಸಿಕೊಂಡರು. ಗೀತಾಬಾಯಿಯ ಎಂಟನೆ ತಿಂಗಳು ನಡೆಯುತ್ತಿರುವಾಗ ಒಂದು ಸಾಯಂಕಾಲ ತೇಜಃ ಪುಂಜನೋರ್ವ ಗೋಸಾವೀ ಲಿಂಗೋಪಂತರಲ್ಲಿ ರಾತ್ರಿ ಉಳಿಯಲು ಬಂದರು. ಈ ಬೈರಾಗಿಯು ರಾಮೇಶ್ವರಕ್ಕೆ ಹೊರಟಿದ್ದರು. ಅವರ ಕಣ್ಣಿಗೆ ಗರ್ಭಿಣಿಯಾದ

ಗೀತಾಬಾಯಿಯವರು ಬಿದ್ದರು. ಗೀತಾಬಾಯಿಯು ನಮ್ರತೆಯಿಂದ ಆ ಬೈರಾಗಿಗೆ ನಮಸ್ಕರಿಸಿದರು. ಬೈರಾಗಿ ಧನ್ಯರಾದರು, ಅವರೂ ಕೈ ಮುಗಿದು ಉದ್ಗರಿಸಿದರು - ''**ಮೇರೆ ಲಾಲಾ! ತೂಂಯಹಾಂ ಹೈ ! ತೆರೆದರ್ಶನಸೆ ಮೈ ಧನ್ಯಹುವಾ ಹೂಂ! ಮೈ ಅಬ ವಾಪಸ ಮೇರೆ ಘರ ಜಾತಾ ಹೂಂ!**'' (ನನ್ನ ಕಂದಾ! ನೀನು ಇಲ್ಲಿದ್ದೀಯಾ! ನಿನ್ನ ದರ್ಶನದಿಂದ ನಾನು ಧನ್ಯನಾದೆ! ನಾನೀಗ ಮರಳಿ ನನ್ನ ಮನೆಗೆ ಹೋಗುವೆ!) ಅವನಿಗೆ ಇಲ್ಲೇ ಶ್ರೀರಾಮ ಸ್ಥಾಪಿತ ಶಿವಲಿಂಗದ ದರ್ಶನವಾಯಿತು. ಅವರು ಗೊಂದವಲೆಯಿಂದಲೇ ಹಿಂತಿರುಗಿದರು.

ವಿಟ್ಠಲ-ರುಕ್ಮಿಣಿಯರ ಪ್ರತಿಷ್ಠಾಪನೆ ಆದಾಗಿನಿಂದ ಪ್ರತಿ ತಿಂಗಳು ಶುದ್ಧ ಏಕಾದಶಿಗೆ ಅವರ ಮನೆಯಲ್ಲಿ ರಾತ್ರಿಯಿಡೀ ಭಜನೆ ಆಗುತ್ತಿತ್ತು. ಶಕ 1766ರ ಮಾಘಮಾಸದ ಶುದ್ಧ ಏಕಾದಶೀ. ನಿತ್ಯದಂತೆ ಗೀತಾಬಾಯಿಯು ಪಾಂಡುರಂಗನ ಷೋಡಶೋಪಚಾರ ಪೂಜೆ ಮಾಡಿದರು. ಎಲ್ಲರಿಗೆ ತೀರ್ಥ ಕೊಟ್ಟರು. ಸ್ವಲ್ಪ ಫಲಾಹಾರ ಮಾಡಿ ಅವರು ವಿಶ್ರಾಂತಿಗಾಗಿ ಹೋಗುವ ಮೊದಲು ಎಲ್ಲರೂ ಫಲಾಹಾರ ಮಾಡಿದರೋ ಎಂದು ವಿಚಾರಿಸಿಕೊಂಡರು. ಬಳಿಕ ಅವರು ಹಾಸಿಗೆಯಲ್ಲಿ ಮಲಗಿದರು. ಹೊರಗೆ ಏಕಾದಶಿಯ ಭಜನೆ ಪ್ರಾರಂಭವಾಯಿತು. ಗೀತಾಬಾಯಿಯ ಹೊಟ್ಟೆನೋವು ಜೋರಾಯಿತು. ಗಟ್ಟಿಯಾಗಿ ಅವರು ನಾಮಸ್ಮರಣೆ ಮಾಡುತ್ತಿದ್ದರು. ಶಾರೀರಿಕ ವೇದನೆ ಅವರ ಮುಖದಲ್ಲಿ ಕಾಣುತ್ತಿರಲಿಲ್ಲ. ಹೆರಿಗೆಗಿತ್ತಿ ಬಂದರು. ಬಳಿಯಲ್ಲಿ ತಾಯಿ, ಹೆರಿಗೆಗಿತ್ತಿ ಇಬ್ಬರೂ ಇದ್ದರು. ಬೆಳಗಿನ ಝಾವ ಪಾಂಡುರಂಗನ ಆರತಿ ಪ್ರಾರಂಭ ವಾಯಿತು ಮತ್ತು ಮಹಾರಾಜರ ಜನ್ಮವಾಯಿತು. ಮಾಘ ಶುದ್ಧ ದ್ವಾದಶೀ ಶಕ 1766 (ಕ್ರಿ.ಶ. 1845)

□□

-: ಎರಡು :-

# ರಾಮನಾಮದಲ್ಲಿ ತನ್ಮಯ ಬಾಲ್ಯ

ಶ್ರೀಮಹಾರಾಜರ ನಾಮಕರಣ ವೈಭವದಿಂದ ನಡೆದು, 'ಗಣಪತಿ' ಎಂಬ ಹೆಸರಿಡಲಾಯಿತು. ಅಂದು ಅಪಾರ ಅನ್ನದಾನ ನಡೆಯಿತು. ಗಣಪತಿಯು ಗೌರಕಾಯೀ ಸ್ಥೂಲದೇಹೀ ಆಗಿದ್ದರು. ಸುಂದರ ಮೂಗು, ಉತ್ತಮ ಕೇಶರಾಶಿ, ಭವ್ಯ ಹಣೆ, ತೇಜಸ್ವೀ ಕಣ್ಣುಗಳು ಹೀಗೆ ಎಲ್ಲರಿಗೂ ಬೇಕೆಂದು ತೋರುವ ಗಣಪತಿ. ಅಕ್ಕ-ಪಕ್ಕದ ಮನೆಯವರಿಗೂ ಇವನನ್ನು ನೋಡಬೇಕೆಂದು ಅನ್ನಿಸುತ್ತಿತ್ತು. ಅವನನ್ನು ಎತ್ತಿಕೊಳ್ಳಬೇಕು, ಅವನೊಡನೆ ಆಡಬೇಕು ಎಂದು ಬಯಸುತ್ತಿದ್ದರು. ರಾವಜೀಯವರು ಸಂಸಾರದಿಂದ ವಿರಕ್ತರಾಗಿದ್ದರೂ ಗಣಪತಿಯನ್ನು ಪದೇ-ಪದೇ ನೋಡುವ, ಅವನೊಂದಿಗೆ ಆಟವಾಡುವ ಮೋಹ ಉಂಟಾಗುತ್ತಿತ್ತು. ಅವನು ಎಲ್ಲರಿಗೂ ಮುದ್ದಿನವನಾಗಿದ್ದನು.

ಗಣಪತಿಗೆ ತಾಯಿಯ ಸೆಳೆತ ಹೆಚ್ಚಾಗಿತ್ತು. ಇದು ಅತ್ಯಂತ ಸ್ವಾಭಾವಿಕ ವಿಷಯವಾಗಿತ್ತು. ಒಂದು ದಿನ ಗೀತಾಬಾಯಿಗೆ ಬೆಳಗ್ಗೆ ಏಳಲು ಸ್ವಲ್ಪ ತಡವಾಯಿತು. ರಾವಜೀಯವರ ಸ್ನಾನ ಆಗಿತ್ತು. ಅವರ ಸಂಧ್ಯೆಯ, ಪೂಜೆಯ ಸಿದ್ಧತೆ ಮಾಡಬೇಕಾಗಿತ್ತು. ಗಣಪತಿಯನ್ನು ಸೊಂಟದಲ್ಲೆತ್ತಿಕೊಂಡು ಕೆಲಸ ಮಾಡಲಾಗುತ್ತಿರಲಿಲ್ಲ. ಅವರು ಅವನನ್ನು ಕೆಳಗಿಟ್ಟರು ಮತ್ತು ಕೆಲಸಕ್ಕೆ ತೊಡಗಿದಳು. ಗಣಪತಿಯು ಜೋರಾಗಿ ಅಳತೊಡಗಿದ. ಏನು ಮಾಡಿದರೂ ಸುಮ್ಮನಾಗಲಿಲ್ಲ. ಕೊನೆಗೆ ರಾವಜೀಯವರು ಅವನನ್ನು ಎತ್ತಿಕೊಂಡು ಮಂದಿರಕ್ಕೆ ಹೋದರು. ಅವನ ಹಣೆಗೆ ಭಸ್ಮ ಹಚ್ಚಿದರು. ಪಂತರು ಹೇಳಿದರೆ - ''ನಿನಗೆ ಯಾವಾಗಲೂ ತಾಯಿಯೇ ಬೇಕೇನು?'' ಈ ಪ್ರಶ್ನೆಯಿಂದ ಗಣಪತಿ ಅಳು ನಿಲ್ಲಿಸಿದ ಮತ್ತು ಮಧುರವಾಗಿ ನಕ್ಕನು.

ಗಣಪತಿಯು ಅಮ್ಮನ ಹುಚ್ಚ (ಹುಚ್ಚು ಅಂದರೆ ಪ್ರೇಮ) ಇದ್ದಂತೆ ಈಶ್ವರ ಭಕ್ತನೂ ಆಗಿದ್ದನು. ಅವನಿಗೆ ಭಜನೆಯ ವಿಲಕ್ಷಣ ಪ್ರೇಮವಿತ್ತು . ಮನೆಯಲ್ಲಿ ರಾತ್ರೆ ಭಜನೆ ಪ್ರಾರಂಭವಾಗುತ್ತಲೇ ಅಲ್ಲಿಗೆ ಹೋಗಲು ಹಟ ಹಿಡಿಯುತ್ತಿದ್ದ. ಭಜನೆಯ ಜಾಗಕ್ಕೆ ಕೊಂಡು ಹೋದರೆ ಅವನು ಶಾಂತನಾಗುತ್ತಿದ್ದನು. ಅವನಿಗೆ ಆ ಭಜನೆ ಅರ್ಥ ಸಹಿತ ತಿಳಿಯುತ್ತಿತ್ತೋ ಹಾಗಿತ್ತು. ಗಣಪತಿಯು ಅಜ್ಜ-ಅಜ್ಜಿಯವರಿಗೆ ಮುದ್ದಿನವನಾಗಿದ್ದನು. ಗಣಪತಿಗೆ ನಾಲ್ಕು ವರ್ಷವಾಯಿತು. ಅವನಿಗೆ ಅಜ್ಜ ಕಲಿಸಲು ಪ್ರಾರಂಭಿಸಿದರು. ಮೊದಲಿಗೆ ಮರಳಲ್ಲಿ ತಿದ್ದಿ ಅಕ್ಷರಗಳನ್ನು ಕಲಿಸಿದರು. ಗಣಪತಿಯು ಬುದ್ಧಿಯಲ್ಲಿ ತೀಕ್ಷ್ಣನಾಗಿದ್ದನು. ಅವನ ಗ್ರಹಣಶಕ್ತಿ ಅಪ್ರತಿಮವಾಗಿತ್ತು . ಒಂದು ರಾತ್ರಿ ಹನ್ನೊಂದು ಗಂಟೆಯಾದರೂ ಗಣಪತಿಗೆ ನಿದ್ದೆ ಬಾರದು. ಅಜ್ಜನವರು ಗಣಪತಿಯನ್ನು ಪಕ್ಕದಲ್ಲೆ ಮಲಗಿಸಿಕೊಂಡು ಗೀತೆಯ ಒಂಭತ್ತನೆಯ ಅಧ್ಯಾಯದ 22ನೆಯ ಶ್ಲೋಕ ಹೇಳಲು ಪ್ರಾರಂಭಿಸಿದರು -

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಮ್ ॥**

ಗಣಪತಿಯು ಅದೇ ಶ್ಲೋಕವನ್ನು ತನ್ನ ತೊದಲು ಮಾತಿನಿಂದ ಹೇಳಿದ 'ಅರೇ! ಇವನು ಏಕ ಸಂಧಿಗ್ರಾಹಿ ಆಗಿದ್ದಾನೆ' ಎಂದು ಅಜ್ಜ ಉದ್ಗರಿಸಿದರು.

ಗಣಪತಿಯು ಅಜ್ಜನ ಸಹವಾಸದಲ್ಲಿ ಹೆಚ್ಚು ಇರತೊಡಗಿದ. ಅವನಿಗೆ ತಿಳಿದಂತೆ ಅಜ್ಜನವರ ಸೇವೆ ಅವನು ಮಾಡತೊಡಗಿದನು. ಹೀಗಾದಾಗ ಅಜ್ಜನಿಗೆ ಹೃದಯ ಕರಗುತ್ತಿತ್ತು ಮತ್ತು ಅಪ್ಪಿಕೊಳ್ಳುತ್ತಿದ್ದರು. ಅಜ್ಜನ ಹಾಗೇ ಧ್ಯಾನಾಸನದಲ್ಲಿ ಕುಳಿತು ಕೊಳ್ಳುವುದು, ಅವರೊಟ್ಟಿಗೆ ಶ್ಲೋಕ, ಮಂತ್ರ ಹೇಳತೊಡಗಿದ. ರಾತ್ರಿಯ ಭಜನೆಯಲ್ಲಿ ಅಜ್ಜನವರು ತಲ್ಲೀನರಾಗಿ ಪರಮಾನಂದದಿಂದ ಕುಣಿಯ ತೊಡಗುತ್ತಿದ್ದರು. ಗಣಪತಿಯೂ ಆ ಭಜನೆಯಲ್ಲಿ ತನ್ಮಯನಾಗಿ ಕುಣಿಯುತ್ತಿದ್ದನು. ಭಜನೆಯಲ್ಲಿ ರಮಮಾಣನಾದ ಬಾಲರೂಪವನ್ನು ಕಂಡು ಜನರಿಗೆ ವಿಸ್ಮಯವಾಗುತ್ತಿತ್ತು ಮತ್ತು ಆಶ್ಚರ್ಯ ಚಕಿತರಾಗುತ್ತಿದ್ದರು. ಭಜನೆಯಾಗದೆ ಗಣಪತಿಯು ಮಲಗುತ್ತಿರಲಿಲ್ಲ.

ಗಣಪತಿಗೆ ಐದು ವರ್ಷವಾಯಿತು. ಹಿರಿಯರಿಗೆ ಅವನು ಬೇಕೆನಿಸಿದಂತೆ ಸಮವಯಸ್ಕ ಮಿತ್ರರಿಗೂ ಅಷ್ಟೇ ಪ್ರಿಯನಾಗಿದ್ದನು. ಗಣಪತಿಯಿಲ್ಲದೆ ಮಿತ್ರರಿಗೆ ಸಮಾಧಾನವಾಗುತ್ತಿರಲಿಲ್ಲ. ಒಮ್ಮೆ ತನ್ನ ಮೊಮ್ಮಗನನ್ನು ಪರೀಕ್ಷಿಸಬೇಕೆಂದು, ಅವನನ್ನು ಕರೆದು ಕೇಳಿದರು ಮಗು ಗಣಪತಿ ! ನಾನು ನಿನಗೆ ಒಂದು ಹಂಡೆ ತುಂಬಾ ರೊಕ್ಕ ಕೊಟ್ಟರೆ ನೀನು ಏನು ಮಾಡುವೆ? ಗಣಪತಿ ಹೇಳಿದ - ಕುರುಡರು, ಕುಂಟರು,

ಬಡವರು, ಭಿಕ್ಷುಕರು ಇವರೆಲ್ಲರಿಗೆ ಹಂಚಿ ಬಿಡುತ್ತೇನೆ. ಪಂತರು ಅವಾಕ್ಕಾದರು. ಅವರು ಪುನಃ ಕೇಳಿದರು – ನಿನ್ನನ್ನು ರಾಜನನ್ನಾಗಿಸಿದರೆ ನೀನು ಏನು ಮಾಡುವೆ? ಗಣಪತಿ ಉತ್ತರಿಸಿದ – ನನ್ನ ರಾಜ್ಯದಲ್ಲಿ ಯಾರೂ ಭಿಕಾರಿಗಳು ಇರಲಾರರು. ನನ್ನ ಬಾಗಿಲಲ್ಲೇ ಅನ್ನಛತ್ರ ತೆರೆಯುತ್ತೇನೆ. ಇಷ್ಟು ಸಣ್ಣ ವಯಸ್ಸಿನಲ್ಲಿ ಈ ಹುಡುಗನ ಮನಸ್ಸಿನಲ್ಲಿ ಬಡವರ ಬಗ್ಗೆ ಎಷ್ಟೊಂದು ಕಳಕಳಿ ! ಅಜ್ಜನ ಕಣ್ಣುಗಳಿಂದ ಆನಂದಾಶ್ರು ಹರಿಯಿತು. ಗಣಪತಿಯನ್ನು ಪ್ರೇಮದಿಂದ ಅಪ್ಪಿಕೊಂಡು – 'ಇವನು ಯಾರೋ ಮಹಾನ್ ಯೋಗಿ ಆಗಿರಬೇಕೆಂದು' ಉದ್ಗರಿಸಿದರು.

ಗಣಪತಿಯ ಮುಂಜಿಯಾಯಿತು. ಕುಲಗುರು ಸಖಾರಾಮ ಭಟ ಪಾಠಕರವರು ಎರಡು – ಮೂರು ತಿಂಗಳಲ್ಲಿ ಅವನಿಗೆ ಸಂಧ್ಯೆ , ಪೂಜೆ, ವೈಶ್ವದೇವ, ಪವಮಾನ, ರುದ್ರ ಇದನ್ನು ಕಲಿಸಿದರು. ತೀವ್ರ ಗ್ರಹಣ ಶಕ್ತಿಯುಳ್ಳ ಗಣಪತಿಗೆ ಅದೆಲ್ಲ ಕಂಠಪಾಠವಾಯಿತು. ಅವನು ಏಕಪಾಠಿಯೇ ಆಗಿದ್ದನು. ಇದೆಲ್ಲ ಕಲಿತ ಮೇಲೆ ಗಣಪತಿಯು ಕುಲಗುರುಗಳನ್ನು ಕೇಳಿದನು – ಇನ್ನು ಮುಂದೆ ಏನು ಕಲಿಯುವುದು? ಕುಲಗುರು ಹೇಳಿದರು – ಇನ್ನು ಮುಂದೆ ನಾಲ್ಕು ವೇದ, ಆರು ಶಾಸ್ತ್ರ, ಪುರಾಣಗಳು ಹೀಗೆ ಬೇಕಾದಷ್ಟು ಕಲಿಯಲು ಇದೆ. ಗಣಪತಿ ಹೇಳಿದ – ಸರಿ, ನನಗೆ ವೇದ ಕಲಿಸಿರಿ. ಕುಲಗುರು – ಅಪ್ಪಾ ಅದು ಸುಲಭವಲ್ಲ. ಹನ್ನೆರಡು – ಹನ್ನೆರಡು ವರ್ಷ ಒಂದೊಂದು ಶಾಸ್ತ್ರದ ವಿದ್ಯೆ ಕಲಿಯಬೇಕಾದರೆ ತುಂಬಾ ಸಮಯಬೇಕು. ಗಣಪತಿಯು ಸಹಜವಾಗಿ ಇಷ್ಟು ಸಮಯ ಯಾರಿಗಿದೆ? ಎಂದು ಉದ್ಗರಿಸಿದನು. ಕುಲಗುರುಗಳ ತಮ್ಮ ಶಿಷ್ಯೋತ್ತಮನ ಕಡೆಗೆ ಅವಾಕ್ಕಾಗಿ ನೋಡುತ್ತಲೇ ಇದ್ದರು. ಇವನಿಗೆ ಶೀಘ್ರವಾಗಿ ಪರಮೇಶ್ವರನೊಂದಿಗೆ ತಾದಾತ್ಮ್ಯವಾಗುವ ಇಚ್ಛೆ ಇದೆಯೆ? ಎಂಬ ಪ್ರಶ್ನೆ ಕುಲಗರುಗಳ ಮನಸ್ಸಿನಲ್ಲಿ ಉಂಟಾಯಿತು. ಮೂಲತಃ ಶ್ರೀಮಹಾರಾಜರು (ಗಣಪತಿ) ಶ್ರೀಜ್ಞಾನೇಶ್ವರರು ಹೇಳಿದಂತೆ 'ಬಹುತಾ ಸುಕೃತಾಚಿಜೋಡಿ' ಅನೇಕ ಜನ್ಮಗಳ ಪುಣ್ಯ ಸಂಚಯ' ಜೊತೆಗೇ ಎತ್ತಿಕೊಂಡು ಬಂದಿದ್ದರು. ಅವರಲ್ಲಿ ಅವರ ಅಜ್ಜ ಸಂಸ್ಕಾರ ಮೂಲ್ಯಗಳನ್ನು ಬಿತ್ತಿದ್ದರು. ಅಜ್ಜನವರು ಅವರಿಗೆ ಧ್ರುವ, ಪ್ರಹ್ಲಾದ, ದ್ರೌಪದೀ, ಗಜೇಂದ್ರ ಇಂತಹ ಭಗವದ್ಭಕ್ತರ ಕಥೆ ಹೇಳಿ ಅವರ ಮನಸ್ಸಿನಲ್ಲಿ ಭಕ್ತಿಬೀಜ ಬಿತ್ತಿದ್ದರು. ಅದರಿಂದ ಮಜಾರಾಜರು ಹೆಚ್ಚೆಚ್ಚು ಅಂತರ್ಮುಖರಾದರು.

ಮಹಾರಾಜರಿಗೆ ಈಗ ಆರು ವರ್ಷ. ಅರ್ಥಾತ್ ದೇಹದ ಪೂರ್ಣ ಲೌಕಿಕ ವಯಸ್ಸು. ಅವರಲ್ಲಿ ಆಧ್ಯಾತ್ಮಿಕ ಶಕ್ತಿ ಆಳವಾಗಿ ಬೇರೂರಿತ್ತು . ಒಮ್ಮೆ ರಾತ್ರೆ ಅಂದಾಜು

ಒಂದು ಗಂಟೆಗೆ ಅಜ್ಜನವರಿಗೆ ಎಚ್ಚರವಾಯಿತು. ಪಕ್ಕದಲ್ಲಿ ಮಲಗಿದ್ದ ಗಣಪತಿಯ ಕಡೆಗೆ ಗಮನ ಹೋಯಿತು. ಅಲ್ಲಿ ಮೊಮ್ಮಗ ಇಲ್ಲ. ಅವರು ಅವನನ್ನು ಮನೆಯೆಲ್ಲ ಹುಡುಕಿದರು. ಅವರಿಗೆ ಮೊಮ್ಮಗ ಸಿಗಲಿಲ್ಲ. ಅವರು ಘಾಬರಿಗೊಂಡು ಮನೆಯ ಇತರರಿಗೂ ಎಚ್ಚರಿಸಿದರು. ಶ್ರೀಮಹಾರಾಜರು ಮನೆಯಲ್ಲಿ ಇಲ್ಲ. ಅಕ್ಕ-ಪಕ್ಕದ ಮನೆಯವರು ಸೇರಿದರು. ಊರಿನಲ್ಲಿ ಹುಡುಕಿದರೂ ಊರಿನಲ್ಲೂ ಸಿಗಲಿಲ್ಲ. ಎಲ್ಲ ಜನರು ನಿರುಪಾಯರಾಗಿ ಸ್ಮಶಾನಕ್ಕೂ ಹೋದರು. ಅಲ್ಲಿಯ ಒಂದು ಸಣ್ಣ ಗುಹೆಯಲ್ಲಿ ಮಹಾರಾಜರು ಕಂಗಳನ್ನು ಮುಚ್ಚಿ ಧ್ಯಾನಸ್ಥರಾಗಿ ಕುಳಿತ್ತಿದ್ದರು. ಜನರು ಅವನನ್ನು ಅಲುಗಾಡಿಸಿ ಎಚ್ಚರಿಸಿದರು. ಸಮಜಾಯಿಷಿ ಮನೆಗೆ ಕರೆದುಕೊಂಡು ಬಂದರು.

ಪಂತರು ಕೇಳಿದರು - ಮಗು ! ಸ್ಮಶಾನದಲ್ಲಿನ ಗುಹೆಯಲ್ಲಿ ಹೋಗಿ ಕುಳಿತುಬಿಟ್ಟೆಯಲ್ಲ! ಹೀಗೆ ಏಕೆ ಮಾಡಿದೆ?

ಮಹಾರಾಜರು ಹೇಳಿದರು - ಅಲ್ಲಿ ಏಕಾಂತ ಮತ್ತು ಶಾಂತಿ ಇರುತ್ತದೆ. ಧ್ಯಾನಕ್ಕೆ ಬೇಕಾದ ಏಕಾಗ್ರತೆಯು ಅಲ್ಲಿ ಬೇಗನೇ ಪ್ರಾಪ್ತವಾಗುತ್ತದೆ.

ಅಜ್ಜ ಹೇಳಿದರು - ಅಪ್ಪಾ ! ಆದರೆ ರಾತ್ರಿಯ ಸಮಯ. ಕತ್ತಲೆಯಲ್ಲಿ ಹಾವೂ, ಚೇಳು ಇರುತ್ತವೆ.

ಮಹಾರಾಜರು - ಅವು ನಮ್ಮಂತೆ ಜೀವಿಗಳೇ. ಅವಕ್ಕೆ ಏಕೆ ಹೆದರಬೇಕು?

ಪಂತರು ತಮ್ಮ ಮೊಮ್ಮಗನ ಕಡೆಗೇ ನೋಡುತ್ತಲೇ ಇದ್ದರು. ಇಷ್ಟು ಸಣ್ಣ ವಯಸ್ಸಿನಲ್ಲಿ ಏಕಾಂತ ವಾಸ, ಚಿಂತನದ ಇಚ್ಛೆ! ಮುಂದೆ ಇನ್ನೊಂದು ರಾತ್ರೆ ಮಹಾರಾಜರು ಅವರ ಹಾಸಿಗೆಯಲ್ಲಿರಲಿಲ್ಲ. ಈಗ ಮಾತ್ರ ಅಜ್ಜನವರು ಸುಮ್ಮನಿದ್ದರು. ಬೆಳಗಿನ ಝಾವ ಮಹಾರಾಜರು ಮರಳಿ ಬಂದರು.

ಏಳನೆಯ ವರ್ಷದಲ್ಲಿ ಮಹಾರಾಜರನ್ನು ಊರಿನ ಪಾಠಶಾಲೆಗೆ ಸೇರಿಸಿದರು. ಅಣ್ಣಾ ಖರ್ಶೀಕರ ಎಂಬುವರು ಶಾಲೆಯ ಉಪಾಧ್ಯಾಯರಾಗಿದ್ದರು. ಅಣ್ಣಾರವರು ಕಲಿಸಿದ್ದನ್ನೆಲ್ಲ ಮಹಾರಾಜರು ತತ್ಕಾಲ ಗ್ರಹಿಸುತ್ತಿದ್ದರು. ಅವರ ಸ್ಮರಣ ಶಕ್ತಿ ಉತ್ತಮ ವಾಗಿತ್ತು. ಮೋಡಿಲಿಪಿ, ಬಾಳಬೋಧ, ದೇವನಾಗರೀ, ಅಂಕಗಣಿತ ಮುಂತಾದ ವಿದ್ಯೆಗಳಲ್ಲಿ ಮಹಾರಾಜರು ಪಾರಂಗತರಾದರು. ಎರಡು-ಮೂರು ವರ್ಷ ಬೇಕಾಗುವ ಅಭ್ಯಾಸ ಕ್ರಮವನ್ನು ಇವರು ಅಲ್ಪಾವಧಿಯಲ್ಲೇ ಪೂರ್ಣ ಕಲಿತರು. ಸ್ವಚ್ಛ ಉಚ್ಚಾರ, ಸುಂದರ ಅಕ್ಷರವನ್ನು ನೋಡಿ ಉಪಾಧ್ಯಾಯರು ಹರ್ಷಗೊಂಡರು. ಅವರು ಹೇಳಿದರು-ನಿನಗೆ ಕಲಿಯ ಬೇಕಾದುದು ಕಲಿತು ಆಯಿತು.

ಈಗ ಮಹಾರಾಜರಿಗೆ ಆಟ ಮತ್ತು ನಾಮಸ್ಮರಣೆಗಾಗಿ ತುಂಬಾ ಸಮಯ ಸಿಗುತ್ತಿತ್ತು. ಅವರು ಗಿಲ್ಲಿದಾಂಡು ಆಟದಲ್ಲಿ ನಿಷ್ಣಾತರಾಗಿದ್ದರು. ಎಲ್ಲ ಮಿತ್ರರನ್ನು ಸೇರಿಸಿ ನದೀತೀರಕ್ಕೆ ಹೋಗುವುದು, ಗಿಲ್ಲಿದಾಂಡು ಆಡುವುದು. ಮಹಾರಾಜರು ಬಹಳ ದೂರ ಗಿಲ್ಲಿ ಹೊಡೆಯುತ್ತಿದ್ದರು. ಆದರೆ ಸಂಗಡಿಗರು ಬಳಲಿದ್ದಾರೆ ಎಂದು ತಿಳಿದು ಮಹಾರಾಜರು ಸ್ವತಃ ತಾನಾಗಿಯೇ ಸೋತು ಇತರರಿಗೆ ಅವಕಾಶ ಕೊಡುತ್ತಿದ್ದರು. ಗಿಲ್ಲಿದಾಂಡುವಿನಂತೆ ಕುಂಟಬಿಲ್ಲೆ, ಓಡುವುದು, ನೆಗೆಯುವುದು, ಅಶ್ವಾರೋಹಣ, ಈಜುವುದು ಹೀಗೆ ಅನೇಕ ಆಟಗಳಲ್ಲಿ ಮಹಾರಾಜರು ಅಗ್ರೇಸರರಾಗಿದ್ದರು.

ಶ್ರೀಮಹಾರಾಜರು ಮನಃಪೂರ್ವಕ ಇನ್ನೊಂದು ಆಟ ಆಡುತ್ತಿದ್ದರು. ಅವರು ಮೂರು ಸಣ್ಣ - ಸಣ್ಣ ಕಲ್ಲುಗಳನ್ನು ತಂದು ಅವನ್ನು ಸ್ಥಾಪಿಸುವುದು. ಮಧ್ಯದಲ್ಲಿ ಶ್ರೀರಾಮ, ಎಡದಲ್ಲಿ ಸೀತಾದೇವಿ, ಬಲಕ್ಕೆ ಲಕ್ಷ್ಮಣ. ಎದುರಿಗೆ ಇನ್ನೊಂದು ಕಲ್ಲನ್ನಿಟ್ಟು ವಾಯುಪುತ್ರ ಹನುಮಂತ, ಅವರ ಪೂಜೆ ಮಾಡಿ ಆರತಿ ಎತ್ತುವುದು ಮತ್ತೆ ಕಟ್ಟಿಗೆಯ ತುಂಡುಗಳನ್ನು ಕರತಾಳ ಮತ್ತು ಕಲ್ಲುಗಳ ತಾಳ ಮಾಡಿಕೊಂಡು ರಾಗ - ತಾಳ ಬದ್ಧ ರಾಮನಾಮ ಹಾಡುವುದು. ಎಲ್ಲ ಸಂಗಡಿಗರು ರಾಮನಾಮದಲ್ಲಿ ತನ್ಮಯರಾಗುತ್ತಿದ್ದರು. ಅವರು ಶ್ರೀ ಮಹಾರಾಜರಿಗೆ 'ಗಣೂಬುವಾ' ಎಂದು ಹೇಳುತ್ತಿದ್ದರು. ಗಣುಬೂವಾ ಇಲ್ಲದೆ ಅವರಿಗೆ ಮೆಚ್ಚುಗೆ ಆಗುತ್ತಿರಲಿಲ್ಲ. ಪಾಠಶಾಲೆಗೆ ಹೋಗುವ ಬದಲು ಈ ಮಕ್ಕಳು ರಾಮನಾಮದಲ್ಲಿ ತನ್ಮಯರಾಗುತ್ತಿದ್ದರು. ಗಣುಬುವಾರೊಂದಿಗೆ ಅವರು ಹೇಳಿದ ಹಾಗೆ ಆಚರಣ ಪ್ರೇಮದಿಂದ ಮಾಡುತ್ತಿದ್ದರು.

ಹುಡುಗರು ಶಾಲೆಗೆ ಹೋಗುವ ಬದಲು ಗಣುಬುವಾರೊಂದಿಗೆ ಆಟದಲ್ಲಿ ರಮಮಾಣರಾಗುವುದರಿಂದ ಶಾಲೆ ಬರಿದಾಯಿತು. ಉಪಾಧ್ಯಾಯರಿಗೆ ಹೊಟ್ಟೆಯ ಚಿಂತೆ ಉಂಟಾಯಿತು. ಅವರು ಒಂದು ದಿನ ಪಂತರನ್ನು ಭೇಟ್ಟಿಯಾಗಿ ತಮ್ಮ ತೊಂದರೆಯನ್ನು ಹೇಳಿಕೊಂಡರು. ಪಂತರು ಮೊಮ್ಮಗನಿಗೆ ಸಮಜಾಯಿಸಿದರು. ಗಣುಬುವಾ ಪುನಃ ಶಾಲೆಗೆ ಹೋಗತೊಡಗಿದನು. ಎಲ್ಲ ಸಂಗಡಿಗರು ಅವರ ಹಿಂದೆ ಶಾಲೆಗೆ ಹೋಗತೊಡಗಿದರು. ಗುರುಗಳು ಅಕ್ಷರ ತಿದ್ದಲು ಹೇಳಿದರು. ಗಣುಬುವಾ 'ಶ್ರೀರಾಮ ಸಮರ್ಥ' ಎಂದು ತಿದ್ದಲು ಹೇಳುತ್ತಿದ್ದರು. ಹುಡುಗರೂ 'ಶ್ರೀರಾಮ ಸಮರ್ಥ' ಎಂದು ತಿದ್ದುತ್ತಿದ್ದರು. ಇದರಿಂದ ಆ ಮಕ್ಕಳ ಪಾಲಕರು ಪಂತರ ಬಳಿ ತಕರಾರು ತಂದರು. ಪಂತರು ಮೊಮ್ಮಗನಿಗೆ ಬಹಳ ಸಮಜಾಯಿಸಿದರು. ಮಗು! ಕಲಿಯದೆ ಹೇಗೆ ನಡೆಯುವುದು? ನಮ್ಮಲ್ಲಿ ಕುಲಕರ್ಣಿಕೆ ಇದೆ. ವ್ಯವಹಾರ, ಲೆಕ್ಕಪತ್ರ

ಎಲ್ಲವನ್ನು ನೋಡಿಕೊಳ್ಳಬೇಕು. ಮಹಾರಾಜರು ಹೇಳಿದರು - ಅಜ್ಜಾ! ನನಗೆ ಲೆಕ್ಕ ಬರುತ್ತದೆ, ವ್ಯವಹಾರ ಮಾಡಲಾಗುವುದು, ಆದರೆ ರಾಮನಾಮ ಸ್ಮರಿಸದೆ ನನಗೆ ಸಮಾಧಾನ ಆಗುವುದಿಲ್ಲ. ಎಲ್ಲದರ ಸಾರ ಈ ನಾಮದಲ್ಲಿ ಇದೆ ಎಂದು ಅನಿಸುತ್ತಿದೆ. ತಮ್ಮ ಮೊಮ್ಮಗನಿಂದ ಬೇರೆ ಮಕ್ಕಳಿಗೆ ನಷ್ಟಬೇಡ ಎಂದು ಪಂತರು ಮೊಮ್ಮಗನನ್ನು ಶಾಲೆಗೆ ಕಳಿಸುವುದು ನಿಲ್ಲಿಸಿದರು.

ಶಾಲೆ ತುಂಬಿತು. ಮಹಾರಾಜರ ಹತ್ತಿರದ ಮಿತ್ರ ಬಾಪೂ ಫಡತರೆ ಶಾಲೆಯಲ್ಲಿ ಇದ್ದ. ಮಕ್ಕಳಿಗೆ ಅಭ್ಯಾಸ ಹೇಳಿ ಏನೋ ಕೆಲಸಕ್ಕಾಗಿ ಅಣ್ಣಾ ಮನೆಗೆ ಹೋದರು. ಗುರುಗಳು ಇಲ್ಲವೆಂದು ನೋಡಿ ಬಾಪೂ ಫಡತರೆ ಎದ್ದು, ಮಿತ್ರರೇ! ನಾವು ರಾಮನ ಭಜನೆ ಮಾಡುವಾ. ಎಂದು ಹುಡುಗರಿಗೆ ಹೇಳಿದನು. ಮಕ್ಕಳು ಆನಂದದಿಂದ ಒಪ್ಪಿ ರಾಮಭಜನೆ ಮಾಡತೊಡಗಿದರು. ಅಣ್ಣಾ ಕೆಲಸ ಮುಗಿಸಿ ಮರಳಿ ಬಂದು ನೋಡುತ್ತಾರೆ, ನಾನು ಹೇಳಿದ ಅಭ್ಯಾಸ ಮಾಡದೆ ರಾಮಭಜನೆ ನಡೆಯುತ್ತಿದೆ. ಗುರುಗಳಿಗೆ ಸಿಟ್ಟು ಬಂತು. ಕೈಯಲ್ಲಿ ಬೆತ್ತ ಎತ್ತಿಕೊಂಡು ಭಜನೆ ಮಾಡುವವರಿಗೆ ಒಂದೊಂದು ಏಟು ಕೊಟ್ಟರು.

ಸಾಯಂಕಾಲ ಶಾಲೆ ಬಿಟ್ಟಿತು. ಮಕ್ಕಳು ಗಣುಬುವಾ ಹತ್ತಿರ ಬಂದು, ಶಾಲೆಯಲ್ಲಿ ನೆಡದ ವೃತ್ತಾಂತವನ್ನು ತಿಳಿಸಿದರು. ಗಣುಬುವಾ ಹೇಳಿದರು - ಚಿಂತಿಸಬೇಡಿ, ರಾಮದ್ವೇಷಿ ಮನುಷ್ಯನಿಗೆ ಅದರ ಕರ್ಮ ಅನುಭವಿಸಬೇಕಾಗುವುದು. ಮುಂದೆ ಇದೇ ಮಾತು ಸತ್ಯವಾಯಿತು. ಅಣ್ಣಾರವರ ಒಂದು ಪ್ರಕರಣದಲ್ಲಿ ಊರಿನ ಪಟೇಲನೊಂದಿಗೆ ಜಗಳವಾಗಿ ಅಣ್ಣಾರವರಿಗೆ ಊರು ಬಿಡಬೇಕಾಯಿತು. ಅಣ್ಣಾರವರು ಎಲ್ಲ ಸಮಾನು ಎತ್ತಿನ ಬಂಡಿ ತುಂಬಿದರು. ಅಗಸೆ ಬಾಗಿನಿಂದ ಹೊರ ಬಿದ್ದಾಗ ಅವರಿಗೆ ಮಹಾರಾಜರ ಭೇಟ್ಟಿಯಾಯಿತು - ನೀವು ರಾಮನಾಮದ ದ್ವೇಷ ಮಾಡಿದಿರಿ. ಇದು ಒಳ್ಳೆಯದಲ್ಲ. ನನ್ನ ರಾಮನು ದಯಾಳು ಆಗಿದ್ದಾನೆ. ಇನ್ನು ಮುಂದೆ ಅವನ ನಾಮವನ್ನು ಪ್ರೇಮದಿಂದ ಸ್ಮರಿಸಿರಿ, ನಿಮ್ಮ ಶ್ರೇಯಸ್ಸಾಗುವುದು. ಶ್ರೀ ಮಹಾರಾಜರ ಈ ಮಾತಿನಿಂದ ಅಣ್ಣಾರವರ ಕಣ್ಣುಗಳು ತುಂಬಿ ಬಂದವು. ಅವರು ಶ್ರೀರಾಮ-ಶ್ರೀರಾಮ ಎಂದು ಹೇಳತೊಡಗಿದರು. ನೋಡು ನೋಡುತ್ತಾ ಬಂಡಿ ಊರು ಬಿಟ್ಟು ಹೊರಟು ಹೋಯಿತು.

□□

-: ಮೂರು :-

# ಗುರುದರ್ಶನದ ಆಸೆ

ಮಹಾರಾಜರ ಶಾಲೆ ಮುಗಿದಿತ್ತು . ಅವರ ವಯಸ್ಸಿನ ಸಂಗಡಿಗರಾದ ಮಿತ್ರರು, ಶಾಲೆ ತಪ್ಪಿಸಿ ತಮ್ಮ ಸಖನ ಕಡೆಗೆ ಬರುತ್ತಿದ್ದರು. ಗಣುಬುವಾಕಡೆ ಬಂದರೆ ಮತ್ತೇನು ಕೇಳುವುದು? ಮೊದಲಿಗೆ ಮನತುಂಬಿ ಆಡುವುದು, ಯಾರೋ ಮನೆಯ ಹುಣಸೆ ಹಣ್ಣು, ಎಲ್ಲೋ ಪೇರಳೆ, ಎಲ್ಲೊ ಸೀತಾಫಲ ಎಲ್ಲೊ ದಾಳಿಂಬೆ ಕೀಳುತ್ತಿದ್ದರು. ಮರ ಹತ್ತಿ ಕೀಳುವುದು ಇಲ್ಲವೇ ಕಲ್ಲುಗುರಿಯಿಟ್ಟು ಬೀಳಿಸುವುದು, ಕಬ್ಬಿನ ಸಮಯದಲ್ಲಿ ಹೊಲಕ್ಕೆ ನುಗ್ಗಿ, ಕಬ್ಬಿನ ಜಲ್ಲೆ ಕೀಳುವುದು, ಎಲ್ಲರೂ ಕುಳಿತುಕೊಂಡು ತಿನ್ನುವುದು, ಭಾರೀ ಆನಂದವೇ ಆನಂದ ನಡೆಯುತ್ತಿತ್ತು . ಆದರೆ ಜನರ ತಕರಾರು ಬರುತ್ತಿತ್ತು , ಗಣಪತಿ ಮತ್ತು ಅವನ ಸ್ನೇಹಿತರು ನಮ್ಮ ಅಂಗಳದಲ್ಲಿನ ದಾಳಿಂಬೆ ಕದ್ದರು. ಪಂತರು ಮೊಮ್ಮಗನನ್ನು ಬಳಿಗೆ ಕರೆದು - ಮಗು! ಹೀಗೆ ಮಾಡಬಾರದು, ಹೀಗೆ ಮಾಡಿದರೆ ನಮ್ಮ ಕುಲಕ್ಕೆ ಕಳಂಕ ಬಂದೀತು ಎಂದು ಹೇಳಿದರು. ಆಗ ಮಹಾರಾಜರು ಅಜ್ಜ! ನೀವು ಚಿಂತಿಸಬೇಡಿ, ನನ್ನಿಂದಾಗಿ ತಮ್ಮ ಕುಲಕ್ಕೆ ಕೀಳುತನ ಬರಲಾರದು. ನಿತ್ಯದಲ್ಲಿ ಬರುವ ತಕರಾರುಗಳಿಂದ ಗೀತಾಮಾಯಿಗೂ ಬೇಸರ ಬಂತು. ಒಮ್ಮೆ ರಾತ್ರೆ ಹೊತ್ತು ಗಣಪತಿ ಯನ್ನು ಬಳಿಯಲ್ಲಿ ಕುಳ್ಳಿರಿಸಿಕೊಂಡು ಹೇಳಿದಳು - ಗಣುಮಗು ! ನೀನು ಕಲಿಯಬೇಕು, ದೊಡ್ಡವನಾಗಬೇಕು, ನಮ್ಮ ಕುಲಕರ್ಣಿತನವನ್ನು ಕಾಪಾಡಬೇಕು. ಇಷ್ಟೇ ನಮ್ಮ ಅಪೇಕ್ಷೆ ಇದೆಯಪ್ಪ! ನನ್ನ ಮಾತು ಕೇಳುವೆಯಲ್ಲ? ಶ್ರೀ ಮಹಾರಾಜರು ಹೇಳಿದರು - ಅಮ್ಮಾ! ನೀನು ಚಿಂತಿಸಬೇಡ, ನಾನು ನಮ್ಮ ಕುಲಕರ್ಣಿತನವನ್ನು ಸರಿಯಾಗಿ ನಡೆಸುವೆನು. ತಾಯಿಯು ಗಣುವನ್ನು ಅಪ್ಪಿಕೊಂಡು ಪ್ರೀತಿಯಿಂದ ತಲೆ, ಬೆನ್ನು ಸವರಿದಳು.

ಶ್ರೀ ಮಹಾರಾಜರ ಮತ್ತು ಅವರ ಸಂಗಡಿಗರ ತುಂಟತನ ಒಮ್ಮೆಲೆ ನಿಂತಿಲ್ಲ, ಇವನನ್ನು ಎಲ್ಲಾದರೂ ತೊಡಗಿಸಬೇಕು ಎಂದು ಗೀತಾಬಾಯಿಯವರು ಅವನಿಗೆ

ಮನೆಯ ಹಟ್ಟಿಯಲ್ಲಿದ್ದ ಹಸುಗಳ ಜವಾಬ್ದಾರಿ ವಹಿಸಿದರು. ಅನಂತರ ಪ್ರತಿದಿನ ಹಸುಗಳನ್ನು ಮೇಯಿಸಲು ಕಾಡಿಗೆ ಕೊಂಡು ಹೋಗುವ ಹೊಣೆಗಾರಿಕೆ ವಹಿಸಲಾಯಿತು. ಶ್ರೀ ಮಹಾರಾಜರು ನಿತ್ಯ ಬೆಳಿಗ್ಗೆ ಗೋವುಗಳನ್ನು ಅಟ್ಟಿಕೊಂಡು ಊರ ಹೊರಗಿನ ಕಾಡಿಗೆ ಕೊಂಡು ಹೋಗಲು ತೊಡಗಿದರು. ಹಸುಗಳನ್ನು ಮೇಯಲು ಬಿಟ್ಟು, ಇತರ ದನಗಾಹಿಗಳನ್ನು ಸೇರಿಸಿ ಆಟವಾಡುವುದು. ಕೆಲವೇ ದಿನಗಳಲ್ಲಿ ಅವರೆಲ್ಲ ಸ್ನೇಹಿತರಾದರು. ಇತರ ಆಟವಾಡಿದ ಬಳಿಕ ಅವರ ಇಷ್ಟದ ಆಟ ಶುರುವಾಗುತ್ತಿತ್ತು . ದನಮೇಯಿಸಲು ಇರುವ ಕೋಲನ್ನೇ ವೀಣೆಯಂತೆ ಮಹಾರಾಜರು ಹಿಡಿದುಕೊಂಡು, ಇತರ ದನಗಾಹಿಗಳು ತಮ್ಮ ಕೋಲುಗಳೇ ಪತಾಕೆ. ಕಲ್ಲು ಸೇರಿಸಿ ಮಂದಿರ ಕಟ್ಟುವುದು. ಕಲ್ಲಿನ ಗೋಡೆ ಕಟ್ಟಿ ಮೂರು ಕಲ್ಲು ತಂದು ಒಂದು ಶ್ರೀರಾಮ, ಎಡಕ್ಕೆ ಸೀತಾದೇವಿ, ಬಲಕ್ಕೆ ಲಕ್ಷ್ಮಣ, ಮುಂದೆ ಹನುಮಂತ ಎಂದು ತಂದು ಇಡುವುದು. ಸುತ್ತಲಿನ ಕಾಡಿನ ಹೂವು ತಂದು ಪೂಜೆ ಮಾಡುವುದು. ಆರತಿ ಎತ್ತಿ ಮತ್ತೆ ನಾಮ ಸ್ಮರಣ ಮತ್ತು ಭಜನೆ ಶುರು ಆಗುತ್ತಿತ್ತು . ಶ್ರೀಮಹಾರಾಜರು ಕೋಲಿನ ವೀಣೆ ಹಿಡಿದು ಭಜನೆ ಹಾಡುತ್ತಿದ್ದರು; ಇತರ ಹುಡುಗರ ಕೋಲಿನ ಧ್ವಜ ಹಾರಿಸುತ್ತ ಅವರೊಂದಿಗೆ ಭಜನೆ ಹಾಡುತ್ತಿದ್ದರು. ದೊಡ್ಡ ಆನಂದವೇ ಆನಂದವಿತ್ತು .

ಇವರ ಆನಂದ ಪ್ರಾರಂಭವಾಗುತ್ತಲೇ ದನ - ಕರುಗಳೂ ಆನಂದಿತರಾಗುತ್ತಿದ್ದವು. ಅವುಗಳಿಗೆ ಬೇಕಾದಹಾಗೆ ಸ್ವಾತಂತ್ರ್ಯ ಸಿಗುತ್ತಿತ್ತು . ದನ-ಕರುಗಳು ಪಕ್ಕದ ಹೊಲಕ್ಕೆ ನುಗ್ಗಿ ಪೈರು, ತರಕಾರಿ ಮನಸೋಕ್ತ ತಿನ್ನುತ್ತಿದ್ದವು. ಇತ್ತ ಮಹಾರಾಜರು ಸಂಗಡಿಗರಿಗೆ ರಾಮಕಥೆ ಹೇಳುತ್ತಿದ್ದರು, ಅತ್ತ ಹಸು-ಕರುಗಳು ಹೊಲಕ್ಕೆ ನುಗ್ಗುತ್ತಿದ್ದರು. ಇತ್ತ ಮಕ್ಕಳು ರಾಮನಾಮದ ಸಂಕೀರ್ತನದಲ್ಲಿ ತನ್ಮಯರಾಗುತ್ತಿದ್ದರು, ಅತ್ತ ದನಕರುಗಳು ಹೊಲ ಮೇಯುತ್ತಿದ್ದವು. ಈಗ ಅಲ್ಲಿಯ ರೈತರ ತಕರಾರು ಬರತಡೊಗಿದವು. ''ನಮ್ಮ ಪೈರು ನಾಶವಾಯಿತು. ತೆನೆ ಬಿಟ್ಟ ಜೋಳ ಹಸುಗಳು ತಿಂದವು. ತೊಗರಿ ನಷ್ಟವಾಯಿತು. ತಕರಾರಿ ಮುಗಿಸಿದವು.'' ಎಂದು ಗೀತಾಯಿಯವರಲ್ಲಿ ತಕರಾರು ತಂದರು. ಒಂದು ದಿನ ಗೀತಾಬಾಯಿಯವರು ಗಣು ಮೇಲೆ ಸಿಟ್ಟುಕೊಂಡರು. ಅವನು ನಕ್ಕು ಬಿಟ್ಟನು. ಈಗ ಮಾತ್ರ ಅವರು ಕೆರಳಿ ಒಂದು ಕೋಲನ್ನು ಎತ್ತಿಕೊಂಡು ಗಣೂಗೆ ಹೊಡೆಯಲು ಓಡಿದರು. ಚಪಲನಾದ ಗಣು ಓಡಿದ, ಆದರೆ ಗಡಿಬಿಡಿಯಲ್ಲಿ ಗೀತಾಬಾಯಿ ಎಡವಿ ಬಿದ್ದರು. ತಾಯಿಯು ಬಿದ್ದಳು ಎಂದು ನೋಡಿ ಗಣೂ ಬಂದು ತಾಯಿಯನ್ನು ಎಬ್ಬಿಸಿದ. ಅವರ ಕಣ್ಣುಗಳಿಂದ

ಅಶ್ರುಧಾರೆ ಹರಿಯುತ್ತಿದ್ದವು. ತಾಯಿ ಗಣೂಗೆ ಹೇಳಿದಳು – ಮಗು! ನೀನು ಚೆನ್ನಾಗಿ ವರ್ತಿಸಪ್ಪ! ನಾನು ಶ್ರೀರಾಮನ ಒಂದು ಲಕ್ಷ ಬಾರಿ ನಾಮಸ್ಮರಣೆ ಮಾಡುವೆನು. ಗಣೂ ತಾಯಿಗೆ ಹೇಳಿದ–ಅಮ್ಮಾ! ಇನ್ನು ತಕರಾರು ಬರಲಿಕ್ಕಿಲ್ಲ. ನಾನು ಚೆನ್ನಾಗಿ ನಡೆಯುತ್ತೇನೆ. ನೀನು ಮಾತ್ರ ಒಂದು ಲಕ್ಷ ರಾಮನಾಮದ ಸಂಕಲ್ಪ ಪೂರ್ಣ ಮಾಡು.

ಈಗ ಮಹಾರಾಜರ ವೃತ್ತಿಯಲ್ಲಿ ಬದಲಾಯಿತು. ಅವರು ನಿತ್ಯ ಬೆಳಿಗ್ಗೆ ಸ್ನಾನಕ್ಕಾಗಿ ನದಿಗೆ ಹೋಗುತ್ತಿದ್ದರು. ಸ್ನಾನದ ಬಳಿಕ ಎರಡೆರಡು ಗಂಟೆ ಸಂಧ್ಯೆಗಾಗಿ ಕುಳಿತುಕೊಳ್ಳುತ್ತಿದ್ದರು. ಏಕಾದಶೀ ದಿನ ಅವರು ಪೂಜೆ ಮುಗಿಸಿ ಧ್ಯಾನಕ್ಕೆ ಕುಳಿತು ಮುಚ್ಚಿದ ಕಣ್ಣು ಗಂಟೆಗಟ್ಟಲೆ ತರೆಯುತ್ತಿರಲಿಲ್ಲ. ಕೊನೆಗೆ ಅಮ್ಮನೇ ಅವರನ್ನು ಅಲುಗಾಡಿಸಿ ಏಳಿಸುತ್ತಿದ್ದಳು. ಗೊಂದವಲೆ ಊರಿನಲ್ಲಿ ಮಾರುತಿ ಮಂದಿರವಿದೆ. ಮಾರುತಿಯ ಮೇಲೆ ಎಲ್ಲರಿಗೂ ದೃಢ ಶ್ರದ್ಧೆ ಇತ್ತು. ಅನೇಕ ವಿರಕ್ತ , ಸಾಧಕರು, ವಾರಕರೀ, ಯಾತ್ರಿಕರು ಈ ಪವನತನಯನ ದರ್ಶನಕ್ಕೆ ಬರುತ್ತಿದ್ದರು. ಈ ಮಂದಿರವು ಮಹಾರಾಜರ ಮನೆಯ ಹತ್ತಿರಲ್ಲೇ ಇತ್ತು. ಶ್ರೀ ಮಹಾರಾಜರು ಅಲ್ಲಿಗೆ ಹೋಗಿ ವಿರಾಗಿ ಜನರನ್ನು ಭೇಟಿಯಾಗುತ್ತಿದ್ದರು, ತಮ್ಮ ಮನಸ್ಸಿನಲ್ಲಿದ್ದ ಶಂಕೆಗಳನ್ನು ಕೇಳುತ್ತಿದ್ದರು. ಮಾರುತಿ ಮಂದಿರಕ್ಕೆ ಒಮ್ಮೆ ಓರ್ವ ರಾಮದಾಸೀ ಬಂದಿದ್ದರು. ವಯೋವೃದ್ಧರಿದ್ದರು ಅವರು. ಮೂರು ದಿನ ಅವರು ಮಂದಿರದಲ್ಲಿ ತಂಗಿದ್ದರು. ಬೆಳಿಗ್ಗೆ ಎದ್ದು, ಮನಾಚೆ ಶ್ಲೋಕ ಹಾಡುತ್ತಾ ಊರಿನಲ್ಲಿ ತಿರುಗುತ್ತಿದ್ದರು. ಮಧ್ಯಾಹ್ನದವರೆಗೆ ದೇವರಪೂಜೆ, ಆರತಿ, ಮಂತ್ರಪುಷ್ಪ ಬಳಿಕ ಧ್ಯಾನಸಾಧನೆ. ಸಾಯಂಕಾಲ ಊರಿನ ಶ್ರದ್ಧಾಳು ಜನರಿಗೆ ಅವರು ರಾಮಕಥೆ ಹೇಳುತ್ತಿದ್ದರು. ರಾತ್ರೆ ಕೀರ್ತನ. ಹೀಗೆ ಅವರ ದಿನ ಚರ್ಯೆ ಇತ್ತು . ಶ್ರೀ ಮಹಾರಾಜರಿಗೆ ಈ ರಾಮದಾಸೀಬುವಾ ವಿಷಯದಲ್ಲಿ ಕುತೂಹಲ ಉಂಟಾಯಿತು. ಒಂದು ದಿನ ಅವರು ಅವರನ್ನು ಭೆಟ್ಟಿಯಾಗಲು ಹೋದರು. ಅವರ ಚರಣದಲ್ಲಿ ಮಸ್ತಕವನ್ನಿಟ್ಟು ಕೇಳಿದರು – ಮಹಾರಾಜ! ನೀವು ಇಂತಹ ಬಟ್ಟೆ ಏಕೆ ಧರಿಸಿರುವಿರಿ? ರಾಮದಾಸೀ ಬುವಾರವರಿಗೆ ಆಶ್ಚರ್ಯವಾಯಿತು. ಅವರೆಂದರು ಈ ವಸ್ತ್ರಗಳು ವಿರಕ್ತಿಯ ಪ್ರತೀಕವಾಗಿದೆ. ನನಗೆ ದೇವರ ದರ್ಶನ ಆಗಬೇಕೆಂಬ ನನ್ನ ಇಚ್ಛೆಯಾಗಿದೆ. ಮಹಾರಾಜರ ಉತ್ಸುಕತೆ ಹೆಚ್ಚಾಯಿತು. ಅವರು ಕೇಳಿದರು – ದೇವರ ದರ್ಶನ ನಿಮಗೆ ಆಗಿದೆಯೋ? ಬುವಾ ಹೇಳಿದರು – ಇನ್ನೂ ಆಗಿಲ್ಲಪ್ಪ ದರ್ಶನ. ಅದು ಬಹಳ ಕಷ್ಟವಾಗಿದೆ. ಗುರು, ಸಂತರು ಇವರ ಕೃಪೆಯಿಂದ ದೇವರದರ್ಶನ ಸುಲಭವಾಗುತ್ತದೆ. ಮಗು! ಯಾರಾದರೂ ಗುರು, ಯಾರಾದರೂ ಸಂತರು ಸಿಗಬೇಕೆಂದು ನಾನು ಭ್ರಮಣ ಮಾಡುತ್ತಿದ್ದೇನೆ. ಮಹಾರಾಜರಿಗೆ ವಿಸ್ಮಯವಾಯಿತು. ಇಷ್ಟು ತಳಮಳ ಇದ್ದ ವಿರಕ್ತ ಬುವಾರವರಿಗೇ ಇನ್ನೂ ಸದ್ಗುರುಗಳ ಭೇಟ್ಟಿಯಾಗಿಲ್ಲ.

ಈ ಭೆಟ್ಟಿಗಾಗಿಯೇ ಇವರು ಸತತ ಭ್ರಮಣಮಾಡುತ್ತಿದ್ದಾರೆ. ಮೊದಲು ಸದ್ಗುರುಗಳ ಭೆಟ್ಟಿ, ಬಳಿಕ ಈಶ ದರ್ಶನ. ನನಗೂ ಈಶದರ್ಶನದ ಆಸೆ ಇದೆ. ಅದಕ್ಕಾಗಿ ಸದ್ಗುರುಗಳ ಮಾರ್ಗದರ್ಶನ, ಅವರ ಕೃಪಾಪ್ರಸಾದ ಬೇಕು. ಇದು ಮನೆಯಲ್ಲಿ ಕುಳಿತು ಸಾಧ್ಯವಾಗದು. ಇದಕ್ಕಾಗಿ ಗೃಹತ್ಯಾಗ ಅವಶ್ಯಕ. ಗುರು ಶೋಧಕ್ಕಾಗಿ ತಿರುಗಾಡಬೇಕು.

ಶ್ರೀ ಮಹಾರಾಜರು ಗೃಹತ್ಯಾಗ ನಿಶ್ಚಯಿಸಿದರು. ವಾಮನ ಮ್ಹಾಸುರ್ಣೇಕರ್ ಇವನು ಅವರ ಬಾಲಮಿತ್ರ, ಅವರ ಚಿಕ್ಕಪ್ಪನ ಮಗ ದಾಮೋದರ ಇವರಿಗೆ ತನ್ನ ಮನೋಗತ ಹೇಳಿದರು. ಅವರಿಬ್ಬರಿಗೂ ಗಣೂಬುವಾರವರು ಪ್ರಮಾಣರಾಗಿದ್ದರು. ಅವರ ಮಾತು ಅಂತಿಮ ನುಡಿ. ಅವರೀರ್ವರೂ ಗಣೂಬುವಾರೊಂದಿಗೆ ಹೋಗಲು ನಿಶ್ಚಯಿಸಿದರು. ಇದನ್ನು ಮನೆಯವರಿಗೆ ಏನನ್ನೂ ಹೇಳಬಾರದು ಎಂದು ನಿಶ್ಚಯಿಸಿ ದಿನ- ಸಮಯ ನಿಗದಿಯಾಯಿತು. ಆ ದಿನ ಬೆಳಗಿನ ಝಾವ ಮೂರೂವರೆಗೆ ಶ್ರೀಮಹಾರಾಜರು ಮನೆಯಿಂದ ಹೊರಟು ನದೀತೀರಕ್ಕೆ ಬಂದರು. ಸ್ವಲ್ಪ ಹೊತ್ತಿನಲ್ಲೇ ವಾಮನ ಮತ್ತು ದಾಮು ಬಂದರು. ಈ ಒಂಭತ್ತು ಒಂಭತ್ತುವರೆ ವರ್ಷದ ಮಕ್ಕಳು ಹೊರಟರು. ಸದ್ಗುರುವಿನ ಶೋಧ ಒಂದೇ ಧ್ಯೇಯವಿತ್ತು .

ನಡೆಯುತ್ತಾ ಇರುವುದು ಮಧ್ಯಾಹ್ನವಾದಾಗ ಮಾಧುಕರಿ ಬೇಡುವುದು, ಉದರ ಭರಣ ಮಾಡಿ ವಿಶ್ರಾಂತಿ ಪಡೆಯುವುದು. ವಿಶ್ರಾಂತಿಗಾಗಿ ಮಂದಿರದ ಆಸರೆ, ಪುನಃ ಮುಂದಕ್ಕೆ ಹೋಗುವುದು, ರಾತ್ರೆ ಯಾವುದಾದರೂ ಮಂದಿರದಲ್ಲಿ ಧರ್ಮಶಾಲೆಯಲ್ಲಿ ನಿರ್ಮಾನುಷ ಪಡಸಾಲೆಯಲ್ಲಿ ಮಲಗುವುದು. ಈ ಸಣ್ಣ ವಯಸ್ಸಿನ ಮೂರು ಮಕ್ಕಳು ಕಷ್ಟಕರ ಜೀವನ ಅನುಭವಿಸುತ್ತಿದ್ದರು. ಹೀಗೆ ಮಾಡುತ್ತಾ ಮಾಡುತ್ತಾ ಅವರು ಕೊಲ್ಹಾಪುರವನ್ನು ತಲುಪಿದರು. ಮೂವರೂ ಅಂಬಾಬಾಯಿಯ ದರ್ಶನ ಪಡೆದರು. ಹತ್ತಿರದ ಧರ್ಮ ಶಾಲೆಯಲ್ಲಿ ಆಶ್ರಯ ಪಡೆದರು. ಸೊಂಟದಲ್ಲಿ ಕೌಪೀನ, ಮೇಲೊಂದು ಶಲ್ಯ ಹೀಗೆ ಮಹಾರಾಜರ ವೇಶವಿತ್ತು . ಒಂದು ಕಿವಿಯಲ್ಲಿ ಬಂಗಾರದ ಕುಂಡಲ, ಅವರ ಮುಖದಲ್ಲಿ ಆ ವಯಸ್ಸಿನಲ್ಲೇ ಸಾತ್ವಿಕ ತೇಜವಿತ್ತು . ಜನರು ಅವರ ಕಡೆ ನೋಡುತ್ತಿದ್ದರು. ಅವರ ಮನಸ್ಸಿನಲ್ಲಿ ಶ್ರೀ ಮಹಾರಾಜರ ಕುರಿತು ಕೌತುಕಮಿಶ್ರಿತ ಆದರ ಭಾವ ಉಂಟಾಗುತ್ತಿತ್ತು . ಜನರು ಕೈ ಮುಗಿಯುತ್ತಿದ್ದರು ಅಷ್ಟೇ ಅಲ್ಲದೆ ಅವರು ಇವರ ಎದುರಿಗೆ ಮಿಠಾಯಿ, ಹಣ್ಣು, ಹಣ ತಂದು ಇಡುತ್ತಿದ್ದರು. ಅವರ ಕೊರಳಿಗೆ ಹೂವಿನ ಹಾರ ಹಾಕತೊಡಗಿದರು. ದಾಮು ಬೇಸರಗೊಂಡು ಗಣೂಬುವಾರವರ ಅನುಮತಿ ಪಡೆದು ಅವನು ಹಿಂದಕ್ಕೆ ಹೊರಟ.

ಎರಡು ದಿನ ಹಾಗೆಯೇ ಸಂದಿತು. ಶ್ರೀಮಹಾರಾಜರು ಕೊಲ್ಹಾಪುರವನ್ನು ಬಿಟ್ಟು ಮುಂದಕ್ಕೆ ಹೋಗಬೇಕೆಂದು ನಿಶ್ಚಯಿಸಿದರು. ಪುನಃ ಅಂಬಾಬಾಯಿಯ ದರ್ಶನ ಪಡೆದು ಹೊರಟರು. ದಾರಿಯಲ್ಲಿ ಓರ್ವ ಭಿಕ್ಷುಕ ಅವರ ಬೆನ್ನು ಹತ್ತಿದ. ಶ್ರೀ ಮಹಾರಾಜರು ತನ್ನ ಬಳಿಯಲ್ಲಿ ಅವನಿಗೆ ಕೊಡುವಂತಹುದು ಏನೂ ಇಲ್ಲ, ಎಂದು ಪದೇ-ಪದೇ ಅವನಿಗೆ ಹೇಳಿದರೂ ಅವನು ಬೆನ್ನು ಬಿಡಲಿಲ್ಲ. ಮತ್ತೆ ಮಹಾಜರು ತನ್ನ ಕಿವಿಯ ಕುಂಡಲ (ಭೀಕಬಾಳಿ) ಕಿತ್ತು ಆ ಭಿಕ್ಷುಕನ ಕೈಯಲ್ಲಿಟ್ಟರು. ಆ ಭಿಕಾರಿಯು ಎಲ್ಲೋ ಹೊರಟು ಹೋದ. ಕಿವಿಯಿಂದ ರಕ್ತ ಬರುತ್ತಿತ್ತು. ಅದನ್ನು ಒರೆಸಿಕೊಂಡು ವಾಮನ ಮತ್ತು ಅವರು ಹೊರಟರು. ದಾರಿ ಸಾಗುತ್ತಿರುವಾಗ ಅವರ ಎದುರಿಗೆ ಒಂದು ಕುದುರೆಗಾಡಿ ಬಂದು ನಿಂತಿತು. ಆ ಗಾಡಿಯಲ್ಲಿ ಸಿದ್ಧೇಶ್ವರ ಎಂಬ ಗುರುಗಳಿದ್ದರು. ಅವರ ಮನೆತನದ ಮೇಲೆ ಪಾರಮಾರ್ಥಿಕ ಕೃಪೆಯಿತ್ತು. ಅವರಿಗೆ ದೊಡ್ಡ ಜಹಗೀರ ಇತ್ತು. ಅವರು ಪ್ರತಿದಿನ ಅಂಬಾಬಾಯಿಯ ದರ್ಶನಕ್ಕೆ ತಪ್ಪದೆ ಹೋಗುತ್ತಿದ್ದರು. ಅವರು ಇವರಿಬ್ಬರನ್ನೂ ಪ್ರೇಮದಿಂದ ಗಾಡಿಯಲ್ಲಿ ಕುಳ್ಳಿರಿಸಿಕೊಂಡರು, ಹೆಸರು, ಊರು, ಯಾರು, ಎಲ್ಲಿಯವರು ಎಂದು ಕೇಳಿದರು. ವಾಮನನು ಎಲ್ಲವನ್ನೂ ವಿಸ್ತಾರವಾಗಿ ಹೇಳಿದ. ಐವತ್ತು ವರ್ಷದ ಸಾತ್ತ್ವಿಕರಾದ ಸಿದ್ಧೇಶ್ವರರಿಗೆ ಸಂತತಿ ಇರಲಿಲ್ಲ. ಅವರು ಒಬ್ಬ ಒಳ್ಳೆಯ ಹುಡುಗನನ್ನು ದತ್ತಕ ಪಡೆಯುವುದಿತ್ತು ಅವರು ಅದೇ ದೃಷ್ಟಿ ಕೋನದಿಂದ ಶ್ರೀಮಹಾರಾಜರನ್ನು ನೋಡಿ ಆಕೃಷ್ಟರಾಗಿದ್ದರು. ದೇವಿಯ ದರ್ಶನ ಪಡೆದು ಅವರು ಇವರಿಬ್ಬರನ್ನು ತನ್ನ ವಾಡೆಗೆ ಕರೆದುಕೊಂಡು ಬಂದರು. ಶ್ರೀ ಮಹಾರಾಜರನ್ನು ತಾನು ದತ್ತಕ ತೆಗೆದುಕೊಳ್ಳುವೆನೆಂದು ಮನೆಯ ಎಲ್ಲ ಮಂದಿಗೆ ತಿಳಿಸಿದರು. ಶ್ರೀಮಹಾರಾಜರನ್ನು ರಾಜಪುತ್ರನಂತೆ ಮತ್ತು ವಾಮನನಿಗಾಗಿ ಗೋಧೋಡಿ, ಪತ್ರಾವಳಿ ಹೀಗೆ ಆತಿಥ್ಯ ನೋಡಿ ವಾಮನನಿಗೆ ಬೇಸರ ಬಂದು, ಅವನು ಶ್ರೀಮಹಾರಾಜರಿಗೆ ತಿಳಿಸಿ ಗೊಂದವಲೆಗೆ ಹೋಗಲು ಹಿಂತಿರುಗಿದನು.

ಮಹಾರಾಜರು ಮನೆ ಬಿಟ್ಟರು. ಎಂದಿನಂತೆ ಅವನು ಎಲ್ಲಾದರೂ ಧ್ಯಾನಕ್ಕಾಗಿ ಹೋಗಿರಬಹುದು, ಊಟಕ್ಕೆ ಹಿಂತಿರುಗಬಹುದು ಎಂದು ಗೀತಾಬಾಯಿಗೆ ಅನಿಸಿತು. ಊಟದ ಸಮಯ ಕಳೆದು ಹೋದರೂ ಹುಡುಗ ಬರಲಿಲ್ಲ. ರಾವಜೀಯವರು ಮಗನನ್ನು ಹುಡುಕಲು ಊರಿನಲ್ಲಿ ಶೋಧಿಸಿದರು. ತನ್ನ ಮಗನಂತೆ ವಾಮನ ಮತ್ತು ದಾಮೋದರ ಇಬ್ಬರೂ ಕಣ್ಮರೆಯಾಗಿದ್ದರು. ಅವರ ಪಾಲಕರು ಚಿಂತಿತರಾಗಿದ್ದರು. ಗೀತಾಬಾಯಿಯ ಕಣ್ಣುಗಳಿಂದ ಹರಿದ ನೀರಿಗೆ ಸೀಮೆಯೇ ಇರಲಿಲ್ಲ, ಅವರಿಗೆ ತುತ್ತು ಇಳಿಯದು, ಆ ಮೂರು ಕುಟುಂಬದ ಸಂಬಂಧಿಗಳು ಎಲ್ಲೆಡೆ ಹುಡುಕತೊಡಗಿದರು. ಹನ್ನೆರಡನೆಯ

ದಿನ ದಾಮೋದರ ಮನೆಗೆ ಬಂದನು. ಶ್ರೀಮಹಾರಾಜರು ಮತ್ತು ವಾಮನ ಕೊಲ್ಹಾಪುರದ ಅಂಬಾಬಾಯಿಯ ಮಂದಿರದಲ್ಲಿ ಇರುವ ಸುದ್ದಿ ತಿಳಿಯಿತು. ಎರಡು-ಮೂರು ಜನರೊಂದಿಗೆ ರಾವಜೀಯವರು ಕೊಲ್ಹಾಪುರದ ಕಡೆಗೆ ಹೊರಟರು. ದಾರಿಯಲ್ಲಿ ಅವರಿಗೆ ವಾಮನ ಭೇಟ್ಟಿಯಾದ. ಅವನು ಅವರಿಗೆ ಸಿದ್ದೇಶ್ವರ ಮಹಾರಾಜರ ವಿವರ ಹೇಳಿದನು.

ರಾವಜೀಯವರು ಸಿದ್ದೇಶ್ವರ ರಾಜಗುರುಗಳ ವಾಡೆಗೆ ಬಂದು ತಲುಪಿದರು. ಅವರಿಗೆ ತನ್ನ ಪರಿಚಯ ಕೊಟ್ಟರು. ಯಾವ ಹುಡುಗನನ್ನು ತಾನು ದತ್ತಕ ಪಡೆಯಲು ಇಚ್ಛಿಸುತ್ತಿರುವೆನೋ, ಅವನ ತಂದೆಯವರೇ ಬಂದಿರುವುದನ್ನು ನೋಡಿ ಆನಂದ ಉಕ್ಕಿ ಹರಿಯಿತು. ಅವರು ಎಲ್ಲರನ್ನೂ ಸ್ವಾಗತಿಸಿದರು. ತಮ್ಮ ಮನದಿಂಗಿತವನ್ನು ಹೇಳಿದರು. ರಾವಜೀಯವರು ತಮ್ಮ ಗಣಪತಿಯನ್ನು ಅಪ್ಪಿಕೊಂಡರು, ಗಣಪತಿಯರು ತಂದೆಗೆ ಅಂಟಿಕೊಂಡ. ರಾವಜೀಯವರು ರಾಜಗುರುಗಳಿಗೆ ನಕಾರ ಕೊಟ್ಟರು. ರಾಜಗುರು ಮತ್ತು ಅವರ ಪತ್ನೀ ಪದೇ ಪದೇ ವಿನಂತಿಸುತ್ತಿದ್ದರು. ರಾವಜೀಯವರ ನಕಾರ ಕಾಯಂ ಆಗಿತ್ತು . ಆ ಪತಿ ಪತ್ನಿಯರು ರಾವಜೀ ಮತ್ತು ಜೊತೆಗೆ ಬಂದವರನ್ನು ಯಥೋಚಿತ ಆತಿಥ್ಯನೀಡಿದರು. ಮಹಾರಾಜರನ್ನು ರಾಜಗುರು ಮತ್ತು ಅವರ ಪತ್ನಿಯು ಭಾರವಾದ ಅಂತಃಕರಣದಿಂದ ಬೀಳ್ಕೊಟ್ಟರು.

□□

-: ನಾಲ್ಕು :-

# ಸದ್ಗುರು ಭೇಟಿಗಾಗಿ ಆರ್ತತೆ

ಶ್ರೀಮಹಾರಾಜರನ್ನು ಕರೆದುಕೊಂಡು ರಾವಜೀಯವರು ಗೊಂದವಲೆಗೆ ಬಂದರು. ಶ್ರೀಮಹಾರಾಜರು ಮನೆಗೆ ಮರಳಿದರು ನಿಜ, ಆದರೆ ಅವರ ಚಿತ್ತ ಶ್ರೀರಾಮಚಿಂತನದಲ್ಲೇ ಇತ್ತು. ಧ್ಯಾನ ಮಾಡುವುದರಲ್ಲಿ, ನಾಮಸ್ಮರಣೆ ಮಾಡುವುದರಲ್ಲಿ ಅವರ ಹೆಚ್ಚಿನ ಸಮಯ ಸಾಗತೊಡಗಿತು. ಮುಖ್ಯವಾಗಿ ರಾತ್ರಿಯ ಎಲ್ಲ ಸಮಯದಲ್ಲಿ ಅವರು ಧ್ಯಾನಧಾರಣೆ ಮಾಡುತ್ತಿದ್ದರು. ಅವರ ಆಟದ ಸಂಗಡಿಗರು, ಮಿತ್ರರು ಭೇಟ್ಟಿಯಾಗಲು ಬರುತ್ತಿದ್ದರು. ಮಿತ್ರರು ಬಂದಾಗ ಹಾಸ್ಯ ವಿನೋದದಲ್ಲಿ ಭಾಗಿಯಾಗುತ್ತಿದ್ದರೂ ಅದು ಅಷ್ಟೇ ಹೊತ್ತಿಗಾಗಿ. ಬಳಿಕ ಪುನಃ ಅವರು ನಾಮಸ್ಮರಣೆಯಲ್ಲಿ ವ್ಯಸ್ತರಾಗುತ್ತಿದ್ದರು. ಗೀತಾಬಾಯಿ, ರಾವಜೀಯವರಂತೆ ಅಜ್ಜ ಲಿಂಗೋಪಂತ ಇವರಿಗೆ ಚಿಂತೆ ಉಂಟಾಯಿತು. ಮೂವರಲ್ಲಿಯೂ ಗಂಭೀರ ವಿಚಾರ ನಡೆಯಿತು. ಕೊನೆಗೆ ಮಗನ ಲಗ್ನ ಮಾಡಿಬಿಡುವುದು, ಅದರಿಂದ ಇವನು ಪ್ರಪಂಚದಲ್ಲಿ ರಮಿಸಿ ಸ್ಥಿರನಾಗುವನು ಎಂದು ನಿಶ್ಚಯಿಸಿದರು. ಈಗ ಶ್ರೀ ಮಹಾರಾಜರಿಗೆ ಹನ್ನೊಂದನೆಯ ವರ್ಷ ಪ್ರಾರಂಭವಾಗಿತ್ತು.

ಖಾತವಳ ಎಂಬ ಊರಿನ ಕುಲಕರ್ಣಿ ಸಂಭಾಜೀಮಲ್ಹಾರ ಗೋಡಸೆ, ಅವರ ಪತ್ನಿಯ ಹೆಸರು ಭಾಗೀರಥಿ. ಸಜ್ಜನ ಸಾತ್ವಿಕ ದಂಪತಿಗಳೆಂದು ಸುತ್ತಲೂ ಪ್ರಸಿದ್ಧರಾಗಿದ್ದರು. ಅವರ ಎಂಟು – ಒಂಭತ್ತು ವರ್ಷದ ಕನ್ಯೆಯೊಂದಿಗೆ ಶ್ರೀ ಮಹಾರಾಜರ ವಿವಾಹ ವಾಯಿತು. ನವವಧುವಿಗೆ 'ಸರಸ್ವತಿ' ಎಂಬ ಹೆಸರಿಡಲಾಯಿತು. ವಿವಾಹದ ಸಂಭ್ರಮ, ಜನರ ಉತ್ಸಾಹ, ಮಂಗಲವಾದ್ಯಗಳ ಹಿಮ್ಮೇಳ, ಎಲ್ಲ ಆನಂದದ ವಾತಾವರಣವಿತ್ತು. ಶ್ರೀ ಮಹಾರಾಜರು ಮಾತ್ರ ಪ್ರತಿಯೊಂದು ಹೆಜ್ಜೆಗೂ ಅಂತರ್ಮುಖಿಗಳಾಗುತ್ತಿದ್ದರು. ವಿವಾಹದ ಬಂಧನ, ಗೃಹಸ್ಥಾಶ್ರಮ ಹಿರಿದಾದುದು ನಿಜ; ಆದರೆ ದೊಡ್ಡ ದೊಡ್ಡವರು ಬಳಿಕ ಈ ಪ್ರಪಂಚದಲ್ಲಿ ಲಿಪ್ತರಾದರು. ವಂಶವೃದ್ಧಿ ಮಾಡಬೇಕು, ಮಕ್ಕಳಿಗೆ ಸಂಸ್ಕಾರ

ಕೊಡಬೇಕು, ಸಾಧ್ಯವಾದಷ್ಟು ಪರೋಪಕಾರ ಮಾಡಬೇಕು, ಅತಿಥಿಯನ್ನು ದೇವರೆಂದು ತಿಳಿದು ಅವರ ಆತಿಥ್ಯ ಮಾಡಬೇಕು. ಹೀಗೆ ವರ್ತಿಸಿದರೆ ಮತ್ತು ತಂದೆ-ತಾಯಿಯರು ಜೀವಿಸಿ ಇರುವವರೆಗೆ ಪ್ರೇಮದಿಂದ ಅವರ ಸೇವೆ ಮಾಡಿದರೆ ಗೃಹಸ್ಥ-ಗೃಹಿಣಿಯರ ಮಾತೃಋಣ, ಪಿತೃಋಣ ತೀರುತ್ತದೆ ಇದೆಲ್ಲ ಸರಿಯೇ ಆದರೆ...

ವಿವಾಹ ಸಮಾರಂಭ ನೆರವೇರಿತು, ನೆಂಟರಿಷ್ಟರೆಲ್ಲ ಹೋಗಿ ಆಯಿತು. ಲಿಂಗೋಪಂತರು ಶ್ರೀಮಹಾರಾಜ ಮತ್ತು ಸರಸ್ವತಿ ಇವರನ್ನು ಕರೆದುಕೊಂಡು ಭೂವೈಕುಂಠ ಪಂಢರಪುರಕ್ಕೆ ಹೋದರು. ಇವರಿಬ್ಬರನ್ನು ಪಂತರು ವಿಠ್ಠಲನ ಮಡಿಲಿಗೆ ಅರ್ಪಿಸಿದರು. ಪಾಂಡುರಂಗನ ದರ್ಶನದಿಂದ ಧನ್ಯರಾಗಿ ಮೂವರೂ ಮರಳಿ ಗೊಂದವಲೆಗೆ ಬಂದರು. ಸ್ವಲ್ಪ ಸಮಯದಲ್ಲೇ ಮಹಾರಾಜರ ಮೇಲೆ ಎರಡು ಆಘಾತವಾದವು. ಮೊದಲಿಗೆ ಅವರ ಅಜ್ಜಿ ರಾಧಾಬಾಯಿಯವರು ಮತ್ತು ಅನಂತರ ನಾಲ್ಕು ತಿಂಗಳಲ್ಲಿ ಅಜ್ಜ ಲಿಂಗೋಪಂತರ ನಿಜಧಾಮಕ್ಕೆ ತೆರಳಿದರು. ಅತಿಶಯ ಕರ್ತವ್ಯನಿಷ್ಠ ಪರೋಪಕಾರೀ ಮತ್ತು ದೈವಭಕ್ತರಾಗಿದ್ದ, ಗೊಂದವಲೆಯ ಪ್ರೇಮಮಯ ಆಧಾರ ಹೊರಟು ಹೋಯಿತು. ಆಗ ಪಂತರ ವಯಸ್ಸು 85 ಆಗಿತ್ತು. ಜನರ ಜಗಳ ಸೌಹಾರ್ದತೆಯಿಂದ ಬಿಡಿಸಿದ್ದರು. ಊರಿನ ಪ್ರತಿಯೊಬ್ಬನಿಗೂ ಬೇಕೆಂದಿನಿಸುವ ಮನುಷ್ಯನೆಂದರೆ ಲಿಂಗೋಪಂತರು. ಅವರು ಹೊರಟು ಹೋದಾಗ ಇಡೀ ಗೊಂದವಲೆಯ ಜನರು ಕಂಬನಿ ಗರೆದರು. ಅಜ್ಜನವರ ಅನೇಕ ಗುಣಗಳು ಶ್ರೀಮಹಾರಾಜರಲ್ಲಿ ಸಂಕ್ರಮಿಸಿದ್ದವು. ಜನರ ಪ್ರೀತಿ, ಅನೇಕರಿಗೆ ಊಟ ಹಾಕುವುದು, ಯಾರಾದರು ಸಹಾಯ ಬೇಡಿ ಬಂದರೆ ಕರುಣೆಯಿಂದ ಸಹಾಯ ಮಾಡುವುದು, ಯಾರಾದರು ಕಡವಾಗಿ ಕೊಂಡುಹೋದ ಹಣ ಹಿಂತಿರುಗಿಸದಿದ್ದರೂ ಅದರ ಕುರಿತು ಸಿಟ್ಟು-ತಿರಸ್ಕಾರ ಮಾಡದಿರುವುದು, ಯಾರ ಅಂತಃಕರಣವನ್ನೂ ನೋಯಿಸದಿರುವುದು, ಪ್ರಪಂಚವನ್ನು, ಕರ್ತವ್ಯ ದಕ್ಷತೆಯಿಂದ ಮತ್ತು ಪ್ರೇಮದಿಂದ ನಡೆಸುವುದು, ಅಜ್ಜ-ಅಜ್ಜಿ ಮತ್ತು ಸಂಬಂಧಿಕರ ಸ್ವಾಭಾವಿಕವಾಗಿಯೇ ವಿಶೇಷ ಮೈತ್ರಿ ಇದ್ದರೆ, ಅಲ್ಲಿ ವಯಸ್ಸಿನಲ್ಲಿನ ಪ್ರಪಂಚಡ ಕಂದಕ ಮುಗಿದುಹೋಗುತ್ತದೆ. ವೃದ್ಧರು ಮತ್ತು ಬಾಲಕರು ಇವರಲ್ಲಿ ವಿಶೇಷ ಪ್ರೇಮ ಇರುತ್ತದೆ. ಇಬ್ಬರೂ ಹೊರಟುಹೋದ ಬಳಿಕ ಮಹಾರಾಜರಿಗೆ ಅವರ ಕೊರತೆ ಬಹಳ ಕಾಲ ಕಾಡುತ್ತಿತ್ತು. ಮತ್ತೆ ಅವರು ತಮ್ಮ ಹೆಚ್ಚೆಚ್ಚು ಸಮಯವನ್ನು ಈಶ ಧ್ಯಾನದಲ್ಲಿ ಕಳೆಯ ತೊಡಗಿದರು.

ಈಗ ಅವರ ಮನಸ್ಸು ಪ್ರಪಂಚದಲ್ಲಿ ರಮಿಸದಂತಾಯಿತು. ಸದ್ಗುರುವನ್ನು ಶೋಧಿಸಬೇಕಾಗಿತ್ತು. ಆ ಆಸೆ ಮರುಕಳಿಸಿತು. ಸದ್ಗುರುವನ್ನು ಹುಡುಕಲು ಗೃಹತ್ಯಾಗ

ನಿಶ್ಚಯಿಸಿದರು. ಶ್ರೀಮಹಾರಾಜರು ತಂದೆ-ತಾಯಿ, ಪತ್ನೀ ಎಲ್ಲರಿಗೆ ತಿಳಿಸಿ, ಮನೆಯಿಂದ ಹೊರಗೆ ಬಿದ್ದರು. ವಿವಿಧ ವನ, ಪರ್ವತ, ಗುಹೆ, ಮಂದಿರ, ತೀರ್ಥಕ್ಷೇತ್ರ ಹೀಗೆ ಭ್ರಮಣೆ ಪ್ರಾರಂಭವಾಯಿತು. ಆಧ್ಯಾತ್ಮಿಕರು, ಪುರಾಣಿಕರು, ಶಾಸ್ತ್ರೀ, ವೈಧಿಕರು, ಪಂಡಿತ ಮುಂತಾದ ಜನರನ್ನು ಭೆಟ್ಟಿಯಾದರು. ಆ ತೇಜಸ್ವೀ ಹುಡುಗನನ್ನು ಕಂಡು ಅನೇಕ ಯೋಗಿಗಳು ಅವಕ್ಕಾದರು. ಗುರುವಾಗಲು ನಮ್ಮ ಅಧಿಕಾರವಿಲ್ಲ ಎಂದು ಹೇಳುತ್ತಿದ್ದರು. ಅನೇಕ ಪ್ರಕಾರದ ವ್ಯಕ್ತಿಗಳು ಪ್ರಪಂಚದಲ್ಲಿ ಇದ್ದು, ಸಾಧಕ, ಕೆಲವರು ಪರಂಪರಾಗತ ಶುಭ ದೈವತದ ಆರಾಧನೆ ಮಾಡುವವರು, ಕೆಲವರು ತೀರ್ಥಯಾತ್ರೆಯಲ್ಲಿ ಸಮಾಧಾನ ಪಡುವವರು, ಕೆಲವರು ಸಿದ್ಧಿ ಪಡೆಯಬೇಕೆಂದು ಸಾಧನೆ ಮಾಡುವವರು, ಕೆಲವರು ಚಮತ್ಕಾರ ತೋರಿಸಬೇಕೆಂದು ಪ್ರಯತ್ನಿಸುವವರು, ಕೆಲವರು ಸಾಕ್ಷಾತ್ಕಾರದ ಪ್ರತೀಕ್ಷೆ ಮಾಡುವವರು, ಕೆಲವರು ವ್ಯಕ್ತಿತ್ವ ಪ್ರವೀಣರಾದರೆ, ಕೆಲವರು ಡಂಭಾಚಾರಿ, ಕೆಲವರು ಧನದ ಹಸಿವು ಉಳ್ಳವರು, ಕೆಲವರು ಮಾನ - ಸಮ್ಮಾನದ ಇಚ್ಛುಕರು, ಪ್ರವಚನಕಾರರು, ಕೀರ್ತನಕಾರರು, ಹರಿದಾಸರು ಹೀಗೆ ಅನೇಕ ವ್ಯಕ್ತಿಗಳು ಭೆಟ್ಟಿಯಾದರು.

ಭಕ್ತಿ-ಜ್ಞಾನ-ವಿರಕ್ತಿ ಪರಿಪೂರ್ಣ ಉಳ್ಳ ಶ್ರೀಮಹಾರಾಜರು, ಅವರಿಗೆ ಹದಿನಾಲ್ಕು ವಿದ್ಯೆ , ಅರವತ್ತನಾಲ್ಕು ಕಲೆ, ಪೂರ್ವ ಸಂಚಿತದಿಂದ ಪ್ರಾಪ್ತವಾಗಿತ್ತು . ಸಗುಣ ಭಕ್ತಿಯ ಮಾರ್ಗದಿಂದ ನಿರ್ಗುಣ ತತ್ತ್ವದ ಕಡೆಗೆ ಹೊರಟಿದ್ದರು. ದಯೆ, ಶಾಂತಿಯ ಈ ಮೂರ್ತಿ ಸ್ಥಿರ ವೃತ್ತಿಯವರಾಗಿದ್ದರು. ಎಲ್ಲ ಅಲೆದಾಟ ಗುರು ಶೋಧಕ್ಕಾಗಿ ಇತ್ತು . ಕಾಶಿಯಿಂದ ರಾಮೇಶ್ವರ, ಸಪ್ತ ಪುರಿಗಳು, ನಾಲ್ಕುಧಾಮ, ಹನ್ನೆರಡು ಜೋತಿರ್ಲಿಂಗ ಹೀಗೆ ಅನೇಕ ತೀರ್ಥಕ್ಷೇತ್ರ ದರ್ಶಿಸಿದರು. ರಾಮೇಶ್ವರಕ್ಕೆ ಗಂಗೆ ತಲುಪಿಸಿದರು. ಸೇತುವಿನ ಪವಿತ್ರ ಮರಳು ಪ್ರಯಾಗ ಕ್ಷೇತ್ರದಲ್ಲಿ ಅರ್ಪಿಸಿದರು. ರಾಮನಾಮ ಹೇಳುತ್ತಾ ಕಾಲ್ನಡಿಗೆಯಲ್ಲಿ ಪ್ರವಾಸ, ಭಿಕ್ಷೆ ಬೇಡುವುದು, ದೇಹಧಾರಣೆಗಷ್ಟೇ ಆಹಾರ - ಫಲಾಹಾರ, ಮಂದಿರದ ಜಗಲಿಯಲ್ಲೋ , ಧರ್ಮಶಾಲೆಯಲ್ಲೋ ರಾತ್ರಿ ವಿಶ್ರಾಂತಿ ಪಡೆಯುವುದು. ಸೂರ್ಯೋದಯದಲ್ಲಿ ಪ್ರಾತರ್ವಿಧಿ ಮುಗಿಸಿ ಸ್ನಾನ ಮಾಡಿ, ಸೂರ್ಯನಿಗೆ ಅರ್ಘ್ಯ ಕೊಟ್ಟು, ಆ ಊರಿನ ಮಂದಿರಕ್ಕೆ ಹೋಗಿ ದೇವರ ದರ್ಶನ ಪಡೆದು, ನಾಮಸ್ಮರಣೆ ಮಾಡುತ್ತಾ ಮುಂದೆ ಹೊರಡುವುದು.

ಈ ಕಾಲ್ನಡಿಗೆಯಲ್ಲಿ ಅವರಿಗೆ ನಿಜವಾದ ಪರಮಾರ್ಥಿಗಳೂ ಭೆಟ್ಟಿಯಾದರು. ಅವರು ಮಹಾರಾಜರ ಯೋಗ್ಯತೆ ಅರಿತರು. ಇಷ್ಟು ಸಣ್ಣ ವಯಸ್ಸಿನಲ್ಲಿ ಸದ್ಗುರು ಭೆಟ್ಟಿಯ ಆರ್ತತೆ ನೋಡಿ ಅವರು ಈ ಬಾಲಯೋಗಿಯನ್ನು ಕಂಡು ತಲೆದೂಗಿದರು

ಮತ್ತು ಆಶೀರ್ವಾದ ಕೊಟ್ಟರು. ಭ್ರಮಣ ಮಾಡುತ್ತಾ-ಮಾಡುತ್ತಾ ಶ್ರೀಮಹಾರಾಜರು ಹರಿಪುರ ಕ್ಷೇತ್ರಕ್ಕೆ ಬಂದರು. ಈ ಕ್ಷೇತ್ರವು ಕೃಷ್ಣಾ-ವಾರಣಾ ನದಿಗಳ ಪವಿತ್ರ ಸಂಗಮ ತೀರದಲ್ಲಿದೆ. ಅಲ್ಲಿ ರಾಧಾಬಾಯಿ ಎಂಬ ಸಾಧ್ವಿ ಸ್ತ್ರೀ ವಾಸಿಸುತ್ತಿದ್ದಳು. ಅವಳು ನಿತ್ಯ ಭಜನೆ ಮಾಡುತ್ತಿದ್ದಳು, ಬಹಳ ಸಾತ್ವಿಕ ರಾಮಭಕ್ತಳಾಗಿದ್ದಳು. ಅನ್ನದಾನ ಮತ್ತು ಸಂತಸೇವೆಯಲ್ಲಿ ತಾನು ಧನ್ಯಳೆಂದು ತಿಳಿಯುತ್ತಿದ್ದಳು. ಅವಳು ರಾಮಭಜನೆ ಪ್ರಾರಂಭಿಸುತ್ತಲೇ ಸಾಕ್ಷಾತ್ ಶ್ರೀರಾಮನ ಮೂರ್ತಿ ಆನಂದದಿಂದ ತಲೆದೂಗುತ್ತಿತ್ತು. ಶ್ರೀಮಹಾರಾಜರು ರಾಧಾಬಾಯಿಯ ಮನೆಯಲ್ಲಿ ಎರಡು ದಿನ ಇದ್ದರು. ಎರಡು ದಿನ ರಾಮನಾಮದ ಪರಮಾನಂದ. ಎರಡನೆಯ ದಿವಸ ರಾಧಾಬಾಯಿಯು ಮಹಾರಾಜರಲ್ಲಿ ಹೇಳಿದಳು - ಮಗು! ನೀನು ಅಣ್ಣಾಬುವಾಕಡೆಗೆ ಹೋಗು. ಅವರು ಮೀರಜನಲ್ಲಿ ಇರುತ್ತಾರೆ. ದೊಡ್ಡ ಸಿದ್ಧಪುರುಷರಾಗಿದ್ದಾರೆ. ಜನಸಾಮಾನ್ಯರು ಅವರನ್ನು ಹುಚ್ಚ ಎಂದು ಹೇಳುತ್ತಾರೆ. ಆದರೆ ಅವರು ಹುಚ್ಚರಲ್ಲ. ಏನಾದರೂ ಇಚ್ಛೆಯಿಟ್ಟು ಅವರ ಬಳಿಗೆ ಹೋದರೆ, ಭೌತಿಕ ಸುಖದ ಆಸೆಯಿಂದ ಹೋದರೆ ಅವರು ಕೆಟ್ಟದಾಗಿ ಬೈಯ್ಯುತ್ತಿದ್ದರು, ಕಲ್ಲು ಹೊಡೆಯುತ್ತಿದ್ದರು. ಆದರೆ ಯಾರಾದರೂ ಸಾಧನೆಯ ಮಾರ್ಗದರ್ಶನ ಪಡೆಯಲು ಅವರ ಕಡೆ ಹೋದರೆ ಅವರು ಯೋಗ್ಯ ಮಾರ್ಗದರ್ಶನ ಮಾಡುತ್ತಿದ್ದರು. ಶ್ರೀಮಹಾರಾಜರು ರಾಧಾಬಾಯಿಯ ಚರಣಗಳಲ್ಲಿ ಶಿರಚಾಚಿ ಅವರಿಂದ ಬೀಳ್ಕೊಂಡರು.

ಶ್ರೀ ಮಹಾರಾಜರು ಮೀರಜ್‌ಗೆ ಬಂದರು. ಅಣ್ಣಾಬುವಾರವನ್ನು ಹುಡುಕಿದರು. ಅವರು ಒಂದು ಎಂಜಲ ತೊಟ್ಟಿಯ ಬಳಿ ಕುಳಿತ್ತಿದ್ದರು. ಶ್ರೀಮಹಾರಾಜರು ಕಣ್ಣಿಗೆ ಬೀಳುತ್ತಲೇ ಅವರು ಎದ್ದರು, ಓಡಿಬಂದು ಮಹಾರಾಜರನ್ನು ಅಲಿಂಗಿಸಿಕೊಂಡರು. 'ಪರಮಾತ್ಮನು ನಿನ್ನ ಶ್ರೇಯಸ್ಸು ಮಾಡುವನು' ಎಂದು ಆಶೀರ್ವದಿಸಿ ಹೊರಟು ಹೋದರು. ಮಹಾರಾಜರು ಅವರು ಹೋದ ದಿಕ್ಕನ್ನೇ ದಿಟ್ಟಿಸುತ್ತಿದ್ದರು. ಬಳಿಕ ಶ್ರೀ ಮಹಾರಾಜರು ಯಶವಂತ ಮಹಾದೇವ ಭೋಸೆಕರ್ ಹಾಗೂ ದೇವ- ಮಾಮಲೆದಾರ ಇವರನ್ನು ಕಂಡರು. ದೇವಮಾಮಲೆದಾರ ಗೃಸ್ಥಾಶ್ರಮಿಯಾಗಿದ್ದು, ಅವರ ಪತ್ನಿ ಹೆಸರು ಸುಂದರಾಬಾಯಿ ಎಂದಿತ್ತು. ಕುಲಪರಂಪರೆಯಿಂದ ಅವರು ನರಸಿಂಹೋಪಾಸಕ ರಾಗಿದ್ದು, ಅವರ ಪ್ರಪಂಚ ಪರಮಾರ್ಥಮಯವಾಗಿತ್ತು . ಅವರ ವಯಸ್ಸಿನ ಹದಿನಾರರಿಂದ ಇಪ್ಪತ್ತೆಂಟು ವರ್ಷದವರೆ ಪ್ರಾಮಾಣಿಕ, ನಿಷ್ಕಪಟ ಸರಕಾರೀ ನೌಕರಿ ಮಾಡಿದರು, ವೃತ್ತಿಯಿಂದ ಸಂನ್ಯಸ್ತರಾಗಿದ್ದರು. ಅವರ ಮನೆಯಲ್ಲಿ ಎಲ್ಲರಿಗೆ ಮುಕ್ತ ಪ್ರವೇಶವಿತ್ತು . ಬಂದವರಿಗೆ ಏನಾದರು ತಿಂಡಿ ಕೊಡುತ್ತಿದ್ದರು. ಸುಂದರಾಬಾಯಿ

ಅನ್ನಪೂರ್ಣೇ ಆಗಿದ್ದರು. ಮಹಾರಾಜರ ಮತ್ತು ಅವರ ಪ್ರಥಮ ಭೆಟ್ಟಿಯು ಸಟಾನಾ ಎಂಬ ಊರಿನಲ್ಲಾಯ್ತು . ದೇವ ಮಾಮಲೆದಾರ ಮತ್ತು ಅವರ ಪತ್ನೀ ಇಬ್ಬರಿಗೂ ಶ್ರೀಮಹಾರಾಜರ ಗುರು ದರ್ಶನದ ಆರ್ತತೆಯ ಬಗ್ಗೆ ಆದರ ಉಂಟಾಯಿತು. ಅವರಿಗೆ ಈ ಬಾಲಯೋಗಿಯ ಮೇಲೆ ಮಗನಂತೆ ಸ್ನೇಹ ನೆಟ್ಟಿತು. ಮಹಾರಾಜರು ಕಾಶಿಗೆ ಹೋದಾಗಲೆಲ್ಲ ಅವರು ದೇವಮಾವಲೇದಾರ ಮತ್ತು ಸುಂದರಾ ಬಾಯಿಯವರನ್ನು ಭೆಟ್ಟಿಯಾಗಿ ಹೋಗುತ್ತಿದ್ದರು. ಒಂದು ದಿನ ಶ್ರೀಮಹಾರಾಜರು ದೇವ-ಮಾಮಲೆ ದಾರರಲ್ಲಿ ಮಹಾರಾಜರು ಹೇಳಿದರು-ಮಹಾರಾಜ! ತಾವು ನಮಗೆ ಅನುಗ್ರಹ ಮಾಡಬೇಕೆಂದು ಪ್ರಾರ್ಥಿಸಿದರು. ಅದಕ್ಕೆ ಮಾಮಲೆದಾರ ಹೇಳಿದರು-ಇಲ್ಲ ಮಗು! ನಿನಗೆ ಅನುಗ್ರಹ ಮಾಡುವ ಅಧಿಕಾರ ನನಗಿಲ್ಲ. ನಿನ್ನ ಗುರು ಯಾರೋ ಬೇರೆ ಆಗಿದ್ದಾರೆ.

ಶ್ರೀಕ್ಷೇತ್ರ ಅಕ್ಕಲಕೋಟದ ದಿವ್ಯ ವಿಭೂತಿ ಶ್ರೀಸ್ವಾಮಿ ಮಹಾರಾಜರ ದರ್ಶನಕ್ಕಾಗಿ ಶ್ರೀಮಹಾರಾಜರು ಅಕ್ಕಲಕೋಟಕ್ಕೆ ಹೋದರು. ಬೆಳಿಗ್ಗೆ ಒಂಭತ್ತು-ಹತ್ತು ಗಂಟೆಯಿಂದ ಶ್ರೀ ಸ್ವಾಮಿ ಮಹಾರಾಜರು - 'ಅರೇ, ನೋಡು ಅವನು ಬಂದ, ಬಂದ, ಬಂದ, ಹೇಗಿದೆ ನನ್ನ ಮಗು! ಅವನಿಗೆ ಏನಾದರೂ ಹೇಳಿದರೆ ನೆನಪಿಟ್ಟುಕೊಳ್ಳಿ'' ಎಂಬ ಉದ್ಘೋಷ ನಡೆಯುತ್ತಲೇ ಇತ್ತು . ಶ್ರೀಮಹಾರಾಜರು ಶ್ರೀ ಸ್ವಾಮಿ ಮಹಾರಾಜರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಶ್ರೀ ಸ್ವಾಮಿ ಮಹಾರಾಜರು ಅವರನ್ನು ಎತ್ತಿ ಅವರ ಶಿರವನ್ನು ಆಘ್ರಾಣಿಸಿ, ಸ್ನೇಹದ ದೃಢ ಆಲಿಂಗನ ಮಾಡಿದರು. ಇಬ್ಬರ ಕಣ್ಣುಗಳಿಂದಲೂ ಪರಸ್ಪರ ಭೇಟ್ಟಿಯ ಆನಂದದಿಂದ ಅಶ್ರು ಹರಿದವು. ಶ್ರೀಸ್ವಾಮಿ ಮಹಾರಾಜರು ಮಹಾರಾಜರ ಕೈಗೆ ದಾಳಿಂಬೆ ಕಾಳಿನಿಂದ ತುಂಬಿದ ತಟ್ಟೆ ಕೊಟ್ಟರು. ಮಹಾರಾಜರು ನಾಲ್ಕೈದು ಕಾಳು ಪ್ರಸಾದವೆಂದು ತಿಂದು, ಉಳಿದುದನ್ನು ನೆರೆದಿದ್ದ ಭಕ್ತರಿಗೆ ಹಂಚಿಬಿಟ್ಟರು. ಶ್ರೀಸ್ವಾಮಿ ಮಹಾರಾಜರು ಮಹಾರಾಜರ ಬಳಿ ಬಂದು ಹೇಳಿದರು - 'ಮಗೂ! ನಿನ್ನ ಆಸೆಯನ್ನು ಪೂರ್ಣಗೊಳಿಸುವವನು ನಾನಲ್ಲ, ಬೇರೆ ಯಾರೋ ಇದ್ದಾರೆ.'

ಹುಮಣಾಬಾದಿನ ಶ್ರೀಮಾಣಿಕ ಪ್ರಭುಗಳ ಭೇಟ್ಟಿಯ ಕಥೆ ಅಲೌಕಿಕವಾಗಿದೆ. ಶ್ರೀಮಾಣಿಕ ಪ್ರಭುಗಳು ಬಹಳ ದೊಡ್ಡ ಸಿದ್ಧಿಪುರುಷರಿದ್ದರು. ಕುಲಪರಂಪರೆಯಿಂದ ಅವರು ನರಸಿಂಹೋಪಾಸಕರಾಗಿದ್ದು, ಸಾಕ್ಷಾತ್ ದತ್ತಾತ್ರೇಯನು ಅವರನ್ನು ಅನುಗ್ರಹಿಸಿದ್ದನು. ಏಕನಾಥ ಮಹಾರಾಜರಂತೆ ಅವರ ಜೀವನ ಮಹಾರಾಜರಿಗೆ ಶೋಭಿಸುವಂತೆ ವೈಭವೋಪೇತವಾಗಿ ಸಮೃದ್ಧವಾಗಿತ್ತು. ಆದರೆ ಮಾಣಿಕ ಪ್ರಭುಗಳಾದರೋ ಅದರಿಂದ ಪೂರ್ಣ ಅಲಿಪ್ತರಾಗಿದ್ದರು. ಅವರ ಮನೆಯಲ್ಲಿ ನಿತ್ಯ ದೊಡ್ಡ ಪ್ರಮಾಣದಲ್ಲಿ

ಅನ್ನದಾನ ನಡೆಯುತ್ತಿತ್ತು . ಶ್ರೀಮಾಣಿಕ ಪ್ರಭುಗಳ ಕೀರ್ತಿ ಕೇಳಿ ಅವರನ್ನು ಭೆಟ್ಟಿಯಾಗಲು ಶ್ರೀಮಹಾರಾಜರು ಹುಮಣಾಬಾದಿಗೆ ಹೊರಟರು. ಆ ದಿನ ಭೋಜನದ ಸಮಯಕ್ಕೆ ಮೊದಲೇ ಶ್ರೀ ಮಾಣಿಕ ಪ್ರಭುಗಳು ಊರ ಅಗಸೆಬಾಗಿಲಿಗೆ ಬಂದು ನಿಂತರು. ಊಟದ ಹೊತ್ತು ಕಳೆದು ಬಹಳ ಸಮಯ ಕಳೆಯಿತಾದರೂ ಮಾಣಿಕ ಪ್ರಭುಗಳು ಮನೆಗೆ ಬಂದಿಲ್ಲ. ಮನೆಯ ಜನರು ಚಿಂತಿತರಾಗಿ ಅವರನ್ನು ಹುಡುಕುತ್ತಾ ಊರ ಬಾಗಿಲಿಗೆ ಬಂದು ಅವರನ್ನು ಊಟಕ್ಕೆ ಕರೆಯತೊಡಗಿದರು. ಮಾಣಿಕ ಪ್ರಭು ಹೇಳಿದರು – ಇಂದು ನನ್ನ ಪ್ರಿಯ ಬಂಧು ನನ್ನನ್ನು ಭೇಟ್ಟಿಯಾಗಲು ಬರುತ್ತಿದ್ದಾನೆ. ಅವನು ಬಂದ ನಂತರ ಊಟ ಮಾಡೋಣ, ನೀವು ಊಟ ಮಾಡಿಕೊಳ್ಳಿ ಸ್ವಲ್ಪ ಹೊತ್ತಿನಲ್ಲೇ ಮಹಾರಾಜರ ಆಗಮನವಾಯಿತು. ಬಂದವರೇ ಮಾಣಿಕ ಪ್ರಭುಗಳ ಚರಣಗಳಲ್ಲಿ ಮಸ್ತಕವನ್ನಿಟ್ಟರು. ಶ್ರೀ ಮಾಣಿಕ ಪ್ರಭುಗಳು ಅವರನ್ನು ಬಿಗಿಯಪ್ಪಿಕೊಂಡರು. ಮಹಾರಾಜರು ಕೆಲದಿನ ಅಲ್ಲಿ ಇದ್ದರು. ಬೀಳ್ಕೊಳುವಾಗ ಮಾಣಿಕ ಪ್ರಭುಗಳು ಮಹಾರಾಜರಿಗೆ ಹೇಳಿದರು – ನಿನ್ನ ಸದ್ಗುರುಗಳ ಭೆಟ್ಟಿಯ ಆರ್ತತೆ ಬೇಗನೆ ಪೂರ್ಣವಾಗುವುದು.

□□

-: ಐದು :-

# ಸದ್ಗುರು ತುಕಾಮಾಯಿಯ ಭೇಟಿ

ಅಪ್ರತಿಮ ಸೃಷ್ಟಿ ಸೌಂದರ್ಯದ ಅಬೂವಿನ ಪರ್ವತ. ಘನಕಾನನ, ಅದರಲ್ಲಿ ಕ್ರೂರ ಶ್ವಾಪದಗಳು. ಜೀವಭಯದ ಹಂಗನ್ನೇ ತೊರೆದಿರುವ ಮಹಾರಾಜರು ಆ ಘನಕಾಡನ್ನು ಪ್ರವೇಶಿಸಿದರು. ಈ ಕಾಡಿನ ಒಂದು ಗುಹೆಯಲ್ಲಿ ಓರ್ವ ಯೋಗಿರಾಜರು ಇದ್ದಾರೆ ಎಂದು ಅವರಿಗೆ ತಿಳಿಯಿತು. ದಟ್ಟಕಾಡಿನಲ್ಲಿ ಎರಡು ದಿನ ಅವರು ಆ ಯೋಗಿರಾಜರನ್ನು ಹುಡುಕಿದರು. ಮೂರನೆಯ ದಿನ ಆ ಗುಹೆ ಮಹಾರಾಜರ ಕಣ್ಣಿಗೆ ಬಿತ್ತು. ಗುಹೆಯನ್ನು ಹೊಕ್ಕು ಅವರು ಮುಂದುವರಿದರು. ಮುಂದೆ ಒಂದು ಶಿಲೆಯಲ್ಲಿ ಆ ಯೋಗಿರಾಜರು ಧ್ಯಾನಸ್ಥರಾಗಿ ಕುಳಿತಿರುವುದನ್ನು ಕಂಡರು. ಮಹಾರಾಜರು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಕೈ ಮುಗಿದು ಹಾಗೇ ನಿಂತುಕೊಂಡರು; ಸ್ವಲ್ಪ ಹೊತ್ತಿನಲ್ಲಿ ಯೋಗಿರಾಜರು ಧ್ಯಾನಾವಸ್ಥೆಯಿಂದ ಎಚ್ಚರಗೊಂಡರು. ಎದುರಿಗೆ ನೋಡುತ್ತಾರೆ ಈ ಹುಡುಗ ಕೈಮುಗಿದು ನಿಂತಿರುವನು. ಯೋಗಿರಾಜರು ವಿಸ್ಮಯ ಗೊಂಡು ಕೇಳಿದರು - ಮಗು! ಸಣ್ಣವನಾಗಿರುವೆ, ಈ ದಟ್ಟ ಕಾಡಿನಲ್ಲಿ ಹೇಗೆ ಬಂದೆ?

ಮಹಾರಾಜರು ನಮ್ರತೆಯಿಂದ ಹೇಳಿದರು - ನಿಮ್ಮ ದರ್ಶನಕ್ಕಾಗಿ ಬಂದಿರುವೆನು.

ಯೋಗಿರಾಜರು ಈ ತೇಜಸ್ವೀ ಬಾಲಯೋಗಿಯನ್ನು ನೋಡಿ ತಲೆದೂಗಿದರು. ಅವರು ಮಹಾರಾಜರನ್ನು ತಮ್ಮ ಬಳಿಯಲ್ಲಿ ಇಟ್ಟುಕೊಂಡರು. ಆ ಅವಧಿಯಲ್ಲಿ ಮಹಾರಾಜರು ಅವರಿಂದ ಯೋಗ ಶಿಕ್ಷಣ ಪಡೆದರು. ಅಲ್ಲಿಯ ಜ್ಞಾನ ಗ್ರಹಿಸಿ, ಯೋಗಿರಾಜರ ಅನುಮತಿ ಪಡೆದು ಮಹಾರಾಜರು ಕಾಶಿಗೆ ಹೊರಟರು.

ಕಾಶಿಗೆ ಬಂದು ಮಹಾರಾಜರು ಗಂಗಾಸ್ನಾನ ಮಾಡಿದರು, ಮನತುಂಬಿ ಕಾಶೀ ವಿಶ್ವೇಶ್ವರನ ದರ್ಶನ ಪಡೆದರು. ಕಾಶೀಕ್ಷೇತ್ರದಲ್ಲಿ ತೇಲಂಗಸ್ವಾಮಿ ಎಂಬ ಅತಿಶಯ

ಉಚ್ಚ ಪದವಿಗೆ ಮುಟ್ಟಿದ ಯೋಗಿಗಳು ಇದ್ದರು. ಯೋಗಾಭ್ಯಾಸ ಮತ್ತು ವೈರಾಗ್ಯದಿಂದಾಗಿ ಅವರು ಆಧ್ಯಾತ್ಮಿಕ ಉನ್ನತಿಯನ್ನು ಪಡೆದಿದ್ದರು. ತಾಯಿಯ ಮೃತ್ಯುವಿನ ನೆಪವಾಗಿ, ತಾಯಿಯ ಮರಣವಾಯಿತು ಮತ್ತು ತೇಲಂಗ ಸ್ವಾಮಿಗಳು ಸರ್ವಸಂಗ ಪರಿತ್ಯಾಗ ಮಾಡಿದರು. ಅವರು ಅವಧೂತ ಸ್ಥಿತಿಯಲ್ಲೇ ಇರುತ್ತಿದ್ದರು. ತಿಂಗಳು, ಎರಡು ತಿಂಗಳು ಅವರ ಮೌನವ್ರತ ಇರುತ್ತಿತ್ತು . ಈ ಸಮಯದಲ್ಲಿ ಅನ್ನಗ್ರಣವೇನು ಅವರು ನೀರೂ ಕುಡಿಯುತ್ತಿರಲಿಲ್ಲ. ಈ ಕಾಲದಲ್ಲಿ ಅವರ ಎಲ್ಲ ದೇಹಕ್ರಿಯೆಗಳು ನಿಂತು ಹೋಗುತ್ತಿದ್ದವು. ಮಹಾರಾಜರು ತೇಲಂಗ ಸ್ವಾಮಿಯನನ್ನು ಭೆಟ್ಟಿಯಾದರು. ಅವರ ಚರಣಗಳಲ್ಲಿ ತಲೆ ಚಾಚಿದರು. ತಮ್ಮ ಅಲೆದಾಟದ ಉದ್ದೇಶ ತಿಳಿಸಿದರು. ತೇಲಂಗ ಸ್ವಾಮಿಗಳಿಗೆ ಈ ಬಾಲಯೋಗಿಯ ಬಗ್ಗೆ ಆತ್ಮೀಯತೆ ಬೆಳೆಯಿತು. ಅವರು ಕೆಲವು ಕಾಲ ಮಹಾರಾಜರನನ್ನು ತಮ್ಮ ಬಳಿ ಇಟ್ಟುಕೊಂಡರು. ಶ್ರೀಮಹಾರಾಜರು ತಲ್ಲೀನರಾಗಿ ಭಜನೆ ಮಾಡುತ್ತಿದ್ದರು. ಆ ಭಜನೆ ತೇಲಂಗಸ್ವಾಮಿಗಳಿಗೆ ವಿಲಕ್ಷಣ ಮೆಚ್ಚುಗೆಯಾಗುತ್ತಿತ್ತು . ಮಹಾರಾಜರು ಮನಃಪೂರ್ವಕವಾಗಿ ಗಟ್ಟಿಯಾಗಿ ನಾಮಸ್ಕರಣ ಮಾಡುತ್ತಿದ್ದರು, ಆಗ ತೇಲಂಗ ಸ್ವಾಮಿಗಳ ಕಣ್ಣುಗಳಿಂದ ಆನಂದಾಶ್ರುಗಳು ಹರಿಯುತ್ತಿದ್ದವು.

ಈ ತೇಲಂಗ ಸ್ವಾಮಿಗಳ ಜೊತೆಗೆ ಮಹಾರಾಜರು ಇರುವಾಗಿನ ಕಥೆ - ಒಮ್ಮೆ ನಡು ಮಧ್ಯಾಹ್ನ ಸೂರ್ಯನು ನೆತ್ತಿಯ ಮೇಲೆ ಇರುವಾಗ ತೇಲಂಗಸ್ವಾಮಿಗಳು ಅದೇ ಅವಧೂತ ಸ್ಥಿತಿಯಲ್ಲಿ ನದೀತೀರದ ಕಾದ ಮರಳಿನಲ್ಲಿ ಮಲಗಿದ್ದರು. ಮಹಾರಾಜರ ಹೃದಯ ಕರಗಿತು ಅವರು ತೇಲಂಗ ಸ್ವಾಮಿಯವನ್ನು ಎತ್ತಿ ಹೆಗಲಲ್ಲಿ ಹೊತ್ತುಕೊಂಡು ಅವರ ಕೋಣೆಯಲ್ಲಿ ನೆರಳಿನಲ್ಲಿ ತಂದು ಇಟ್ಟರು. ಸ್ವಲ್ಪ ಹೊತ್ತಿನಲ್ಲಿ ನೋಡಿದರೆ ಸ್ವಾಮಿಗಳು ಪುನಃ ಕಾದ ಮರಳಿನಲ್ಲಿ ಮಲಗಿದ್ದರು. ಶ್ರೀಮಹಾರಾಜರು ಪುನಃ ಅವರನ್ನು ಎತ್ತಿಕೊಂಡು ನೆರಳಿನಲ್ಲಿ ಇಟ್ಟರು. ಈ ಸಲ ಅವರು ಕೋಣೆಯಲ್ಲಿಟ್ಟು ಹೊರಗಿನಿಂದ ಬೀಗ ಹಾಕಿದರು. ಸ್ವಲ್ಪ ಹೊತ್ತಿನಲ್ಲಿ ನೋಡಿದರೆ ಕೋಣೆಯ ಹೊರಗಿನಿಂದ ಹಾಕಿದ ಬೀಗ ಹಾಗೆಯೇ ಇದೆ, ತೇಲಂಗಸ್ವಾಮಿಗಳು ಹಿಂದಿನಂತೆ ಕಾದ ಮರಳಿನಲ್ಲಿ ಮಲಗಿದ್ದರು. ಶ್ರೀಮಹಾರಾಜರು ಸ್ವಾಮಿಗಳ ಚರಣಗಳಲ್ಲಿ ಕುಸಿದು ಬಿದ್ದರು. ಸ್ವಾಮಿಗಳು ಮಹಾರಾಜರನ್ನು ಪ್ರೇಮದಿಂದ ಹತ್ತಿರ ಕುಳ್ಳಿರಿಸಿಕೊಂಡು ಉದ್ಗರಿಸಿದರು – ''ನಿನ್ನ ಧ್ಯೇಯ ನಿನ್ನ ಮನಸ್ಸಿನಂತೆ ಪೂರ್ಣವಾಗುವುದು. ಅದಕ್ಕೆ ಮೊದಲು ಗಿರಿರಾಜ ಹಿಮಾಲಯದ ದರ್ಶನ ಅವಶ್ಯವಾಗಿ ಪಡೆ.''

ಕಾಶೀಕ್ಷೇತ್ರದಲ್ಲಿ ಆಗ ಇನ್ನೊಬ್ಬ ಸಂನ್ಯಸ್ತವ್ಯಕ್ತಿ ಇರುತ್ತಿದ್ದರು. ಅವರು ಷಟ್‌ಶಾಸ್ತ್ರ ಮತ್ತು ಮಂತ್ರವಿದ್ಯೆಯಲ್ಲಿ ಪ್ರವೀಣರಾಗಿದ್ದರು. ಶ್ರೀಮಹಾರಾಜರು ಅವರ ಬಳಿಯೂ ಹೋದರು. ಶ್ರೀಮಹಾರಾಜರು ಅವರ ಬಳಿಗೆ ಹೋದಾಗ ಅವರು ತಮ್ಮ ಶಿಷ್ಯರಿಗೆ ಪಾಠ ಮಾಡುತ್ತಿದ್ದರು. ಪಾಠ ಮುಗಿದಾಗ ಮಹಾರಾಜರು ಆ ಯೋಗಿಮಹಾರಾಜರ ಚರಣಗಳಲ್ಲಿ ವಂದಿಸಿಕೊಂಡರು. ಯೋಗೀ ಮಹಾರಾಜರು ಮಹಾರಾಜರನ್ನು ಪ್ರೇಮದಿಂದ ಹತ್ತಿರ ಕುಳ್ಳಿರಿಸಿ, ಅವರನ್ನು ವಿಚಾರಿಸಿದರು. ಶ್ರೀಮಹಾರಾಜರು ಹೇಳಿದರು-ನನಗೂ ಷಟ್‌ಶಾಸ್ತ್ರ ಮತ್ತು ಮಂತ್ರವಿದ್ಯೆಯನ್ನು ಕಲಿಯುವುದಿದೆ.

ಯೋಗೀ ಮಹಾರಾಜರು ಹೇಳಿದರು – ಈ ವಿದ್ಯೆಗಳನ್ನು ಕಲಿಯಲು ಅಂದಾಜು ಹದಿನೆಂಟುವರ್ಷ ಬೇಕು ಆದರೆ ನೀನಾದರೋ ಸಣ್ಣವನಿದ್ದೀಯ, ನಿನ್ನ ಬಳಿ ಹದಿನೆಂಟು ವರ್ಷಗಳು ಇವೆ, ನಾನು ನಿನಗೆ ಕಲಿಸುವೆನು.

ಮಹಾರಾಜರು ವಿನಂತಿಸಿದರು – ಮಹಾರಾಜ! ನನ್ನ ಬಳಿ ಇಷ್ಟು ಸಮಯವಿಲ್ಲ, ನೀವು ನನಗೆ ಇವೆಲ್ಲ ವಿದ್ಯೆಗಳನ್ನು ಮೂರು ದಿನದಲ್ಲಿ ಕಲಿಸಿರಿ.

ಯೋಗಿ ಮಹಾರಾಜರು ಶ್ರೀ ಮಹಾರಾಜರ ಕಡೆಗೆ ನೋಡುತ್ತಲೇ ಇದ್ದರು. ಅವರ ಕಣ್ಣುಗಳಿಂದ ಪ್ರೇಮಾಶ್ರು ಹರಿದವು. ಅವರೆಂದರು – ಮಗು ! ಇಷ್ಟು ಕಡಿಮೆ ಸಮಯದಲ್ಲಿ ನಾನು ಇದನ್ನು ಕಲಿಸಲಾರೆ. ನಿನ್ನ ಗುರು ಯಾರೋ ಬೇರೆಯೇ ಇದ್ದಾರೆ.

ಶ್ರೀ ಮಹಾರಾಜರು ಆ ಯೋಗಿ ಮಹಾರಾಜರಿಂದ ಬೀಳ್ಕೊಂಡು ಕಾಶಿಕ್ಷೇತ್ರವನ್ನು ಬಿಟ್ಟರು. ಅಲ್ಲಿಂದ ಅವರು ಅಯೋಧ್ಯೆಗೆ ಬಂದರು, ಶ್ರೀರಾಮನ ದರ್ಶನ ಪಡೆದರು ಅಲ್ಲಿ ಅವರಿಗೆ ನೈಮಿಷಾರಣ್ಯದಲ್ಲಿ ಅನೇಕ ತಪಸ್ವಿಗಳಿದ್ದಾರೆ, ಆಧ್ಯಾತ್ಮದಲ್ಲಿ ಅಧಿಕಾರ ಪ್ರಾಪ್ತರಾದ ಅನೇಕ ಋಷಿ-ಮುನಿಗಳು ಇದ್ದಾರೆ ಎಂದು ತಿಳಿಯಿತು. ಶ್ರೀಮಹಾರಾಜರು ನೈಮಿಷಾರಣ್ಯಕ್ಕೆ ಹೋದರು. ಗೋಮತಿ ನದಿಯ ಎಡದಂಡೆಯಲ್ಲಿ ಇದ್ದ ದಟ್ಟವಾದ ನೈಮಿಷಾರಣ್ಯ. ಇಲ್ಲಿ ಶ್ರೀವಿಷ್ಣುವು ಒಂದು ನಿಮಿಷದಲ್ಲಿ ಸಮಸ್ತ ದಾನವ ಸೇನೆಯನ್ನು ನಾಶಮಾಡಿದ್ದ, ಅದಕ್ಕಾಗಿ ಈ ಅರಣ್ಯಕ್ಕೆ ನೈಮಿಷಾರಣ್ಯ ಎಂಬ ಹೆಸರು ಬಂತು. ಹೀಗೆ ಬ್ರಹ್ಮಾಂಡ ಪುರಾಣದಲ್ಲಿ ಮತ್ತು ವಾಯುಪುರಾಣದಲ್ಲಿ ಉಲ್ಲೇಖವಿದೆ. ಈ ಅರಣ್ಯವು ನಡು ಮಧ್ಯಾಹ್ನದಲ್ಲಿಯೂ ಇಲ್ಲಿ ರಾತ್ರಿಯಂತೆ ಕತ್ತಲೆ ಇರುವಷ್ಟು ದಟ್ಟವಾಗಿದೆ. ವಾತಾವರಣ ಮಂಜು ಪ್ರದೇಶದಲ್ಲಿ ಇದ್ದಂತೆ ಅತಿಶಯ ಥಂಡಿ ಇರುತ್ತದೆ. ಹಿಂಸ್ರಪಶು, ಅಜರಗ, ಸರ್ಪ, ನಾಗ ಇವುಗಳ ಮುಕ್ತಸಂಚಾರ, ಹರಿದಾಡುವ ಉದ್ದ-ಉದ್ದ ನಾಗ-ಸರ್ಪಗಳು ಶ್ರೀಮಹಾರಾಜರು ಬಂದರೆಂದರೆ ಅವರಿಗೆ ದಾರಿ ಬಿಡುತ್ತಿದ್ದವು. ನೈಮಿಷಾರಣ್ಯದಲ್ಲಿ ಕಂದ-ಮೂಲಗಳೇ

ಶ್ರೀಮಹಾರಾಜರ ಆಹಾರವಾಗಿತ್ತು. ಕಂದ-ಮೂಲ ತಂದು ಅದನ್ನು ತೊಳೆದು, ಬೆಂಕಿಯಲ್ಲಿ ಸುಡುವುದು, ಸಿಪ್ಪೆ ತೆಗೆದಾಗ ಪಿಷ್ಟದಂತೆ ತಿರುಳು ಸಿಗುತ್ತದೆ, ಅದನ್ನು ಹಾಲಿನಲ್ಲಿನೆನೆಸಿ ತಿನ್ನುವುದು, ಅದು ಶಿರಾದಂತೆ ಸಿಹಿ ಮತ್ತು ಮೆತ್ತಗೆ ಇರುತ್ತದೆ, ಹಸಿವು ಇಂಗುತ್ತದೆ. ಕೆಲವು ಕಂದಗಳು ಎಂಟೆಂಟು ದಿನಗಳ ಹಸಿವು ಇಂಗಿಸುತ್ತಿದ್ದವು. ಶ್ರೀಮಹಾರಾಜರು ನೈಮಿಷಾರಣ್ಯದಲ್ಲಿ ಒಂದು ತಿಂಗಳು ಸಂಚರಿಸಿದರು. ಅನೇಕ ಯೋಗೀ, ಋಷಿ, ಮುನಿಗಳ ದರ್ಶನ ಪಡೆದರು, ಆದರೆ ಅವರಿಗೆ ಸದ್ಗುರುಗಳ ಭೇಟ್ಟಿಯಾಗಲಿಲ್ಲ.

ಶ್ರೀ ಮಹಾರಾಜರು ನೈಮಿಷಾರಣ್ಯ ಬಿಟ್ಟು ಹೊರಟರು. ಹೀಗೆ ಭ್ರಮಣ ಮಾಡುತ್ತಾ ಬಂಗಾಲಕ್ಕೆ ಬಂದರು. ಓರ್ವ ಭಾವುಕ ವ್ಯಕ್ತಿ ಮಹಾರಾಜರಿಗೆ ಭೆಟ್ಟಿಯಾದ, ಭಗವಂತನ ನಾಮ ಹೇಳಿದಾಕ್ಷಣ ಶರೀರ ರೋಮಾಂಚನವಾಗಿ, ಕಣ್ಣುಗಳಿಂದ ಆನಂದಾಶ್ರುಗಳು ಹರಿಯುತ್ತಿದ್ದವು. ದರ್ಶನ ಪಡೆಯಲು ಆ ಗೃಹಸ್ಥ ಸುತ್ತಲೂ ನೋಡತೊಡಗಿದ. ಈ ಅತಿಶಯ ಮೃದು ಸ್ವಭಾವಿ ಭಾವುಕನೊಂದಿಗೆ ಮಹಾರಾಜರು ಒಂದುವಾರ ಇದ್ದು, ಅನಂತರ ಅವರಿಂದ ಬೀಳ್ಕೊಂಡು, ಮಹಾರಾಜರು ಶ್ರೀರಾಮಕೃಷ್ಣ ಪರಮಹಂಸರನ್ನು ಭೆಟ್ಟಿಯಾಗಲು ದಕ್ಷಿಣೇಶ್ವರಕ್ಕೆ ಹೋದರು. ಶ್ರೀರಾಮಕೃಷ್ಣರು ಕೋಲಕತ್ತೆಗೆ ಹೋಗಿರುವರು ಎಂದು ತಿಳಿದು ಅವರು ಕೋಲಕತ್ತೆಗೆ ಹೋದರು. ದಾರಿಯಲ್ಲಿ ಹೋಗುತ್ತಿರುವಾಗ ಇದಿರಿನಿಂದ ರಾಮಕೃಷ್ಣರು ಬರುತ್ತಿರುವುದನ್ನು ಕಂಡರು. ಓಡಿ ಹೋಗಿ ಮಹಾರಾಜರು ದಾರಿಯಲ್ಲೇ ಶ್ರೀರಾಮಕೃಷ್ಣರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಶ್ರೀರಾಮಕೃಷ್ಣರು ಆ ಬಾಲಯೋಗಿಯನ್ನು ಎಬ್ಬಿಸಿ, ಪ್ರೇಮದಿಂದ ಅಪ್ಪಿಕೊಂಡರು. 'ನೀನು' 'ಸ್ವ'ವನ್ನು ಕೊಲ್ಲು, ನಿನ್ನೊಳಗಿನ ನಾನೆಂಬುದನ್ನು ಕೊಂದುಬಿಡು' ಎಂದು ಹೇಳಿ ಕಣ್ಮರೆಯಾದರು.

ಸದ್ಗುರುಗಳ ಶೋಧ, ಎಷ್ಟು ಒದ್ದಾಟ, ಎಷ್ಟು ಭ್ರಮಣ. ಶ್ರೀಮಹಾರಾಜರು ಕೊಲಕತ್ತೆಯಿಂದ ದಕ್ಷಿಣ ಹೈದ್ರಾಬಾದಿಗೆ ಬಂದರು. ಒಂದು ನದೀ ತೀರದಲ್ಲಿ ಕುಳಿತು ವಿಚಾರ ಮಾಡುತ್ತಿದ್ದರು. ಗುರುವಿನ ಸುಳಿವೇ ಇಲ್ಲ, ತಪಸ್ವೀ, ಯೋಗೀ, ಋಷಿ, ಮುನಿ ಭೆಟ್ಟಿಯಾದರು, ಆದರೆ ತನಗೆ ಗುರುಗಳ ಭೆಟ್ಟಿಯಾಗಲಿಲ್ಲ. ಇನ್ನು ದಕ್ಷಿಣ ಭಾರತಕ್ಕೆ ಹೋಗಿ ಸದ್ಗುರುವನ್ನು ಹುಡುಕಬೇಕು ಎಂಬ ವಿಚಾರ ಮಹಾರಾಜರ ಮನಸ್ಸಿಗೆ ಬಂತು ಮತ್ತು ಅಷ್ಟರಲ್ಲಿ ಸಮರ್ಥ ಸಂಪ್ರದಾಯದ ದೊಡ್ಡ ಪುರುಷ ಶ್ರೀರಾಮಕೃಷ್ಣ ಅವರ ಎದುರಿಗೆ ಪ್ರಕಟರಾದರು. ಮಹಾರಾಜರು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ರಾಮಕೃಷ್ಣರು ಅವನನ್ನು ಎಬ್ಬಿಸಿ ಹೇಳಿದರು. ''ಮಗು!

ಯೆಹಳೆಗಾವಿಯ ಶ್ರೀತುಕಾರಾಮ ಚೈತನ್ಯರ ಕಡೆಗೆ ನೀನು ಹೋಗು, ಅವರೇ ನಿನ್ನ ಗುರುಗಳಾಗಿದ್ದಾರೆ'' ಇಷ್ಟು ಹೇಳಿ ಅಂತರ್ಧಾನರಾದರು.

ಶ್ರೀಮಹಾರಾಜರು ಶ್ರೀತುಕಾರಾಮ ಚೈತನ್ಯರ ಹೆಸರು ಕೇಳಿದರು. ಗುರುಶೋಧನೆಗಾಗಿ ಮನೆಯಿಂದ ಹೊರಟಮೇಲೆ ಮೊದಲಿಗೆ ಈ ಹೆಸರು ಕೇಳಿದಾಗ ಸಮಾಧಾನವಾಯಿತು. ಅವರು ಯೆಹಳೆಗಾವಿಯ ಸವಿಸ್ತರ ವಿವರ ಪಡೆದರು. ಮೊದಲಿಗೆ ಅವರು ಪೈಠಣಕ್ಕೆ ಬಂದರು. ಅಲ್ಲಿ ಏಕನಾಥ ಮಹಾರಾಜರ ದರ್ಶನ ಪಡೆದರು. ಪೈಠಣದಿಂದ ಜಾಲನ್ಯಾಗೆ ಹೋಗುತ್ತಿರುವಾಗ ದಾರಿಯಲ್ಲಿ ಇದ್ದ ಶಿವಮಂದಿರದಲ್ಲಿ ಅವರಿಗೆ ಓರ್ವ ಸಿದ್ಧಿಪ್ರಾಪ್ತ ಯೋಗಿಗಳು ಭೆಟ್ಟಿಯಾದರು. ಅವರು ತನ್ನ ಸಿದ್ಧಿ ಶಕ್ತಿಯಿಂದ ಜಡ-ಅಚೇತನ ವಸ್ತುಗಳನ್ನು ಸಚೇತನ ಗೊಳಿಸತೊಡಗಿದರು. ಅವರ ಮನಸ್ಸಿನಲ್ಲಿ ಸ್ವಾರ್ಥ ನಿರ್ಮಾಣವಾಯಿತು. ಸ್ವಾರ್ಥ ಎರಡು ಪ್ರಕಾರದಿಂದಿರುತ್ತದೆ; ಒಂದು ಧನದ, ಮತ್ತೊಂದು ಕೀರ್ತಿಯ. ಈ ಯೋಗಿಯು ಕಲ್ಲಿನ ನಂದಿಯನ್ನು ಜೀವಂತಗೊಳಿಸಿದರು. ಶ್ರೀಮಹಾರಾಜರು ಆ ಯೋಗಿಯನ್ನು ಹತ್ತಿರ ಕರೆದು ಅವರನ್ನು ಸಮಜಾಯಿಸಿದರು. ಮಹಾರಾಜರು ಹೇಳಿದರು - ''ನೀವು ಆಧ್ಯಾತ್ಮದಲ್ಲಿ ಬಹಳ ಮುಂದೆ ಹೋಗಿ ಸಿದ್ಧಿಪ್ರಾಪ್ತಿಯವರೆಗೆ ಬಂದಿರಿ. ಇಲ್ಲೇ ಪರೀಕ್ಷೆ ಇರುತ್ತದೆ, ಸಿದ್ಧಿಯಿದು ಮೋಹ ಸ್ಥಳವಾಗಿದೆ. ಇಲ್ಲಿ ಸಂಪತ್ತಿನ ಮತ್ತು ಸನ್ಮಾನದ ಮೋಹ ಉಂಟಾಗುತ್ತದೆ; ಅದನ್ನು ತ್ಯಾಗಮಾಡಿ ಸಂಯಮ ಕಾಪಾಡಿದರೇನೇ ಮುಂದೆ ಹೋಗುವಿರಿ, ಇಲ್ಲವಾದರೆ ಸಾಮಾನ್ಯ ಸ್ಥಿತಿಗೆ ಬರುವಿರಿ. ಆ ಯೋಗಿಯು ಚಮತ್ಕಾರ ಮಾಡುವುದನ್ನು ನಿಲ್ಲಿಸಿ, ಪುನಃ ಭಕ್ತಿಸಾಧನೆ ಪ್ರಾರಂಭಿಸಿದರು.

ಶ್ರೀಮಹಾರಾಜರು ಜಾಲಾನಾಗೆ ಬಂದರು, ಜಾಲಾನೆಯಿಂದ ನಾಂದೇಡಗೆ ಹೋದರು, ಗೋದಾವರಿಯಲ್ಲಿ ಸ್ನಾನ ಮಾಡಿ ಅವರು ಯೆಹಳೇಗಾವಿಗೆ ಬಂದರು. ಶ್ರೀಮಹಾರಾಜರು ಬರುವ ಮೊದಲು ಎರಡು-ಮೂರುದಿನ ಶ್ರೀತುಕಾರಾಮ ಚೈತನ್ಯ ಅಂದರೆ ತುಕಾಮಾಯಿ ಸತತ ಕೂಗುತ್ತಿದ್ದರು - ''ಅಪ್ಪಾ! ಈಗ ಕಳ್ಳ ಬರುವವನಿದ್ದಾನೆ, ಎಲ್ಲವನ್ನು ದೋಚಿಕೊಂಡು ಹೋಗುವನು, ಕಾದುಕೊಂಡಿರಿ, ಕಾದು ಕೊಂಡಿರಪ್ಪ! ಹದಿನಾಲ್ಕು - ಹದಿನೈದು ವಯಸ್ಸಿನ ಶ್ರೀ ಮಹಾರಾಜರು ಯೆಹಳೆಗಾವಿಗೆ ಬಂದು ಶ್ರೀತುಕಾಮಾಯಿಯ ವಿಚಾರಣೆ ಮಾಡತೊಡಗಿದರು. ಜನರು ಹೇಳಿದರು - ಆ' ತುಕಾಈಯ ಏನು ಹೇಳುವುದು ಮೈ ಮೇಲೆ ಸರಿ ಬಟ್ಟೆ ಇಲ್ಲ, ಹೊಲದಲ್ಲೋ ಹಳ್ಳದ ಬದಿಯಲ್ಲೋ ಎಲ್ಲೋ ಇರುತ್ತಾರೆ. ಧೂಳು - ಕೆಸರು ಮೆತ್ತಿದ ದೇಹ, ತನ್ನ ಶರೀರದ

ಪರಿವೆಯೇ ಇಲ್ಲ, ಕೆಲವೊಮ್ಮೆ ತಲೆಮೇಲೆ ಸಣ್ಣ ಮಕ್ಕಳಂತೆ ಕುಲಾವಿ, ಇದ್ದರೆ ಕೆಲವೊಮ್ಮೆ ಕೈಗೆ ಬಳೆಗಳು ಇರಬಹುದು. ಚಿಲುಮೆ ಮಾತ್ರ ಸದಾ ಜೊತೆಗಿರುತ್ತದೆ. ಸಣ್ಣ ಮಕ್ಕಳೊಂದಿಗೆ ಇಲ್ಲವೆ ನಾಯಿಗಳ ಜೊತೆಗೆ ಆಡುತ್ತಾ ಕುಳಿತಿರುತ್ತಾರೆ. ಮೇಲಿಂದ ಹುಚ್ಚರಂತೆ ಅನಿಸುತ್ತದೆ, ಆದರೆ ಅವರು ನಿರ್ಭಯ, ಮುಕ್ತವಾದ ಸಂತೋಷಮೂರ್ತಿಯಾಗಿದ್ದಾರೆ.

ಯೆಹಳೆ ಊರಿನಲ್ಲಿ ಮಹಾರಾಜರು ಬೆಳಿಗ್ಗಿನಿಂದ ಸಂಜೆಯತನಕ ಸದ್ಗುರುವನ್ನು ಹುಡುಕಿದರು, ಆದರೆ ಅವರ ಸುಳಿವು ಸಿಗಲಿಲ್ಲ. ಕೊನೆಗೆ ಅವರು ತುಕಾಮಾಯಿಯ ಮನೆಯ ಗೋಡೆಗೆ ಒರಗಿ ಕುಳಿತುಕೊಂಡರು. ಹದಿನೈದಿಪ್ಪತ್ತು ನಿಮಿಷಗಳಲ್ಲಿ ತುಕಾಮಾಯಿಯವರು ಬೊಬ್ಬೆ ಹಾಕುತ್ತಾ ಬಂದರು. ಸೊಂಟದಲ್ಲಿ ಲಂಗೋಟಿ, ತಲೆಗೆ ಕುಲಾವಿ, ಒಂದು ಕೈಯಲ್ಲಿ ಚಿಲುಮೆ ಮತ್ತೊಂದರಲ್ಲಿ ಕಬ್ಬಿನ ಜಲ್ಲೆ. ಶ್ರೀ ಮಹಾರಾಜರು ತುಕಾಮಾಯಿಯ ಮುಂದೆ ಕೈ ಮುಗಿದು ನಿಂತುಕೊಂಡರು. ಸದ್ಗುರುಗಳ ದರ್ಶನವಾಯಿತು. ಮಹಾರಾಜರ ಕಣ್ಣುಗಳಿಂದ ಆನಂದಾಶ್ರುಗಳ ಧಾರೆ ಹರಿಯಿತು. ತುಕಾಮಾಯಿಯ ದೃಷ್ಟಿ ಮಹಾರಾಜರತ್ತ ಹೋಯಿತು, ಅವರು ಕೈಯ ಕಬ್ಬಿನ ಜಲ್ಲೆ ಹೊಡೆಯಲು ಎತ್ತಿ ಹೇಳಿದರು 'ತಾಳು ನಾನು ನಿನ್ನನ್ನು ಕೊಂದು ಬಿಡುವೆ' ಮಹಾರಾಜರು ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು ಮತ್ತು ಹೇಳಿದರು- 'ನನ್ನ ಪ್ರಾಣಗಳು ನಿಮ್ಮ ಚರಣಗಳಲ್ಲಿ ಅರ್ಪಿತವಾಗಿವೆ' ಮಹಾರಾಜರ ಬಾಲ್ಯ, ತೇಜಸ್ವೀಮೂರ್ತಿ, ತುಕಾಮಾಯಿಯವರು ಅವರನ್ನು ಎಬ್ಬಿಸಿ ಅಪ್ಪಿಕೊಂಡರು. ಇಂದು ಅವರಿಗೂ ಅತಿಶಯ ದೃಢಶ್ರದ್ಧೆಯುಳ್ಳ ಓರ್ವ ಸತ್‌ಶಿಷ್ಯ ದೊರಕಿದ ಆನಂದವಾಗಿತ್ತು. ಅವರು ಮಹಾರಾಜರನ್ನು ಕೈ ಹಿಡಿದು ತನ್ನ ಮನೆಗೆ ಕರೆದುಕೊಂಡು ಹೋದರು.

□□

-: ಆರು :-

# ಶ್ರೀ ತುಕಾರಾಮ ಚೈತನ್ಯ ಅಂದರೆ ತುಕಾಮಾಯಿ

ಫಾಲ್ಗುಣ ಬಹುಳ ಪಂಚಮಿ ಶಕೆ 1734 ರಂದು ತುಕಾರಾಮ ಚೈತನ್ಯರ ಜನ್ಮವಾಯಿತು. ತಾಯಿ ಪಾರ್ವತಿ ಮತ್ತು ತಂದೆ ಕಾಶಿನಾಥ. ಈ ದಂಪತಿಗಳು ನಾಂದೇಡದಿಂದ ಬಹಳ ದೂರ ಯೆಹಳೆ ಊರಿನಲ್ಲಿ ಇರುತ್ತಿದ್ದರು. ಕಾಶೀನಾಥ ಪಂತರು ದೇಶಸ್ಥ ಯಜುರ್ವೇದೀ ಬ್ರಾಹ್ಮಣರಾಗಿದ್ದು, ಓರ್ವ ಋಷಿಯಂತೆ ಅವರ ಜೀವನಕ್ರಮವಿತ್ತು. ಯಜನ-ಯಾಜನ, ಅಧ್ಯಯನ - ಅಧ್ಯಾಪನ ಇದರಲ್ಲೇ ಅವರು ತಮ್ಮ ಹೆಚ್ಚಿನ ಸಮಯ ಕಳೆಯುತ್ತಿದ್ದರು. ಅವರಿಗೆ ಸ್ವಂತದ ಹೊಲವಿತ್ತು, ಅದರಿಂದ ಅವರ ಉದರ ನಿರ್ವಾಹ ನಡೆಯುತ್ತಿತ್ತು, ಊರಿನಲ್ಲಿ ಅವರಿಗೆ ಬಹಳ ಗೌರವವಿತ್ತು. ಪಾರ್ವತಿ ಬಾಯಿಯೊಂದಿಗೆ ವಿವಾಹವಾಗಿ ಹದಿನೈದು ವರ್ಷ ಕಳೆದರೂ ಅವರಿಗೆ ಸಂತಾನವಾಗಲಿಲ್ಲ. ಪುತ್ರಪ್ರಾಪ್ತಿಗಾಗಿ ಪಾರ್ವತೀಬಾಯಿಯವರು ತಪಶ್ಚರ್ಯೆ ಪ್ರಾರಂಭಿಸಿದರು. ಉಪವಾಸ, ತ್ರಿಕಾಲಸ್ನಾನ, ಬಾಯಲ್ಲಿ ದತ್ತ ಅವಧೂತನ ನಾಮ. ಹೀಗೆ ಮೂರು ವರ್ಷ ಉಪಾಸನೆ ನಡೆಯಿತು. ಅವರಿಗೆ ಸ್ವಪ್ನ ದೃಷ್ಟಾಂತವಾಗಿ, ಅವರ ಉದರದಲ್ಲಿ ದತ್ತನೇ ಅಂಶರೂಪದಿಂದ ಜನಿಸಿದನು. 'ತುಕಾರಾಮ' ಎಂಬ ನಾಮಕರಣ ಮಾಡಿದರು. ತುಕಾರಾಮನು ನಾಲ್ಕು ವರ್ಷದವನಿರುವಾಗ ಮಾತೃಶ್ರೀಯವರು ದೈವಾಧೀನರಾದರು.

ಬಾಲ್ಯದಲ್ಲಿ ತುಕಾರಾಮರಿಗೆ ಆಟದ ಹುಚ್ಚು ಇತ್ತು. ಮಧ್ಯಾಹ್ನ ಸಂಗಡಿಗರೊಂದಿಗೆ ಅವರು ನದಿಗೆ ಈಜಲು ಹೋಗುತ್ತಿದ್ದರು. ಆಗ ನದಿಯ ಪಾತ್ರದಲ್ಲಿ ನೀರು ಕಡಿಮೆ ಇತ್ತು. ನದಿಯ ಪಾತ್ರದಲ್ಲಿ ಮರಳಿನಲ್ಲಿ ಹೊಂಡ ಮಾಡಿ ಅದರಲ್ಲಿ ಕಣ್ಣು ಮುಚ್ಚಾಲೆಯ ಆಟವಾಡುತ್ತಿದ್ದರು. ಎಲ್ಲರೂ ಹೊಂಡಗಳಲ್ಲಿ ಅಡಗಿದರು. ಅಷ್ಟರಲ್ಲಿ ನದಿಗೆ ನೀರು ಬಂತು, ಉಳಿದ ಮಕ್ಕಳು ಗಾಬರಿಗೊಂಡು ಓಡಿ ಹೋದರು. ತುಕಾರಾಮ ಮಾತ್ರ ನಿರ್ಭಯವಾಗಿ ಅಲ್ಲೇ ಕುಳಿತ್ತಿದ್ದ. ಮಧ್ಯಾಹ್ನ ದಾಟಿತು,

ಸಂಜೆಯಾಯಿತು ಆದರೂ ತುಕಾರಾಮರು ಮನೆಗೆ ಮರಳಲಿಲ್ಲ. ಕಾಶೀನಾಥ ಪಂತರು ಅವರ ಕುರಿತು ಮಿತ್ರರಲ್ಲಿ ವಿಚಾರಿಸಿದರು. ಭಾರೀಚಿಂತೆಯಿಂದ ಅವರು ಮಗನ ಮಿತ್ರರೊಂದಿಗೆ ನದೀತೀರಕ್ಕೆ ಹೋದರು. ಅವರು ತುಕಾರಾಮರನ್ನು ಕರೆದರು. ತುಕಾರಾಮರು 'ಓ' ಎಂದು ಹೇಳಿ ನದಿಯಿಂದ ಹೊರಗೆ ಬಂದರು. ಕಾಶೀನಾಥ ಪಂತರು ಪ್ರೇಮದಿಂದ ಮಗನನ್ನು ಆಲಿಂಗಿಸಿಕೊಂಡು ಕೇಳಿದರು ಮಗು! ಮಧ್ಯಾಹ್ನದಿಂದ ಈವರೆಗೆ ನೀರಿನಲ್ಲೇ ಇದ್ದೆ, ಭಯವಾಗಲಿಲ್ಲವೇ? ಉಸಿರು ಕಟ್ಟಲಿಲ್ಲವೇ?

ತುಕಾರಾಮರು ಉತ್ತರಿಸಿದರು – ನನಗೆ ಭಯವಾಗಲಿಲ್ಲ, ನಾನು ಆನಂದವಾಗಿ ಇದ್ದೆ; ಪ್ರಾಣನಿರೋಧ ಮಾಡಿದ್ದರಿಂದ ಉಸಿರು ಕಟ್ಟಲಿಲ್ಲ.

ತುಕಾರಾಮರ ವಯಸ್ಸು ಬೆಳೆಯುತ್ತಾ ಹೋಯಿತು. ತಂದೆಯವರು ಧ್ಯಾನಕ್ಕಾಗಿ ಕುಳಿತುಕೊಳ್ಳುತಿದ್ದರು; ಆ ವಿಷಯದ ಸಂದೇಹ ಅವರು ತಂದೆಯ ಬಳಿಯಲ್ಲಿ ಕೇಳುತ್ತಿದ್ದರು. ಅವರ ಹೊಲ ಒಬ್ಬ ಕುರುಬ ಸಾಗುವಳಿ ಮಾಡುತ್ತಿದ್ದ. ತುಕಾರಾಮರಿಗೆ ಅವನೊಡನೆ ಸಖ್ಯವಿತ್ತು . ಅವನೊಂದಿಗೆ ಅವನ ಮನೆಗೆ ಹೋಗಿ ಉಳ್ಳಾಗಡ್ಡಿಯೊಂದಿಗೆ ರೊಟ್ಟಿ ತಿನ್ನುತ್ತಿದ್ದರು. ಚಿಲೀಮ ಸೇದುತ್ತಿದ್ದರು. ತುಕಾರಾಮರ ಬಾಹ್ಯವೇಷ ಮತ್ತು ವರ್ತನೆ ಸಾಮಾನ್ಯ ಜನರಂತೆ ಇರಲಿಲ್ಲ. ನಿಜ ಅರ್ಥದಲ್ಲಿ ಅವರನ್ನು ತಿಳಿಯದವರು 'ಹುಚ್ಚತುಕಾ' ಎಂದು ಹೇಳುತ್ತಿದ್ದರು. ಯಾರು ನಿಜ ಶ್ರದ್ಧೆಯುಳ್ಳವರೋ ಅವರು ಅವರ ಬಳಿಗೆ ಬರುತ್ತಿದ್ದರು, ಅವರನ್ನೇ ಅವರೂ ಪ್ರೇಮದಿಂದ ಸೇರಿಸುತ್ತಿದ್ದರು. ಇತರರಿಗೆ ಅವರು ಬೈಗುಳ ಕೊಡುತ್ತಾ , ದೂರ ತಳ್ಳಿ ಬಿಡುತ್ತಿದ್ದರು.

ಬೆಳಗಿನ ಝಾವ ನಾಲ್ಕೂವರೆಯ ಸಮಯ, ಉಮರಖೇಡದ ಚಿನ್ಮಯಾನಂದ ರೆಂಬ ಸತ್ಪುರುಷರು ಪಂಢರಪುರದ ಪಾಂಡುರಂಗನ ದರ್ಶನ ಪಡೆದು ಮರಳಿ ಊರಿಗೆ ಹೋಗುತ್ತಿದ್ದರು. ಆಗ ಕಾಲ್ನಡಿಗೆಯಲ್ಲೇ ಪ್ರವಾಸವಿತ್ತು , ವಾರಿ ಕಾಲ್ನಡಿಗೆಯಲ್ಲೇ ಮಾಡುವ ನಿಯಮವಿತ್ತು . ದಾರಿಯಲ್ಲಿ ಅವರು ಯೆಹಳೇ ಊರಿನಲ್ಲಿ ವಿಶ್ರಾಂತಿಗಾಗಿ ತಂಗಿದರು. ಬೆಳಿಗ್ಗೆ ಸ್ನಾನಕ್ಕಾಗಿ ಅವರು ನದಿಗೆ ಬಂದು ಸ್ನಾನ, ಸೂರ್ಯವಂದನೆ, ಸಂಧ್ಯೆ ಹೀಗೆ ನಿತ್ಯಕರ್ಮ ಪೂರೈಸಿದರು. ತೀರಿದಲ್ಲಿ ಒಬ್ಬ ತರುಣ ಧ್ಯಾನಸ್ಥನಾಗಿ ಕುಳಿತು ಕೊಂಡಿದ್ದ. ಸ್ವಲ್ಪ ಹೊತ್ತಿನಲ್ಲೇ ಆ ತರುಣ ಕಣ್ಣುಬಿಟ್ಟ. ಚಿನ್ಮಯಾನಂದ ಮತ್ತು ತರುಣ ಇವರ ನಾಲ್ಕು ಕಣ್ಣುಗಳು ಒಂದಾದವು, ಆ ತರುಣನೆಂದರೆ ತುಕಾರಾಮರು. ಚಿನ್ಮಯಾನಂದರು ತುಕಾರಾಮರ ಬಳಿಗೆ ಬಂದರು. ಅವರು ಅವರ ಮಸ್ತಕದ ಮೇಲೆ ಕೈಯ್ಯನ್ನಿಟ್ಟು ಅವರನ್ನು 'ತುಕಾರಾಮ ಚೈತನ್ಯ' ಎಂದು ಕರೆದರು.

ತುಕಾರಾಮರಿಗೆ ಚಿನ್ಮಯಾನಂದರ ಅನುಗ್ರಹ ದೊರೆಯಿತು. ಈಗ ಜನರು ಅವರನ್ನು ತುಕಾಮಾಯ, ತುಕಾಮಾಯಿ ಅಥವಾ ತುಕಾಯಿ ಎಂದು ಸಂಬೋಧಿಸ ತೊಡಗಿದರು. ಒಂದು ಮಹಾನ್ ಪರಂಪರೆಯೊಂದಿಗೆ ಅವರ ಹೆಸರು ಸೇರಿಕೊಂಡಿತು. ಆದಿನಾಥ – ಮಚ್ಛೆಂದ್ರನಾಥ–ಗೋರಖನಾಥ – ಮುಕ್ತಾ – ಪಟೇಶ್ವರ – ಚಕ್ರಪಾಣಿ– ವಿಮಲಾ – ಚಾಂಗದೇವ – ಜನಾರ್ದನ – ನರಹರಿ – ವಿಶ್ವೇಶ– ಕೇಶವರಾಜ – ಬೋಪಯಾ ಹರಿದಾಸ – ಕಾನ್ಹಯಾ – ಸದಾನಂದ – ಕೃಷ್ಣಶ್ಯಾಮ ಸುಂದರ – ಪ್ರಹ್ಲಾದ – ನಾಗಯಾ – ಏಕನಾಥ – ವಿಟ್ಠಲ ಕಿಂಕರ – ಚಿನ್ಮಯಾನಂದ – ಶ್ರೀತುಕಾರಾಮ ಚೈತನ್ಯ ಹೀಗೆ ವಿಶಾಲ ಪರಂಪರೆ ಇದೆ. ಶ್ರೀ ತುಕಾರಾಮ ಚೈತನ್ಯನಂತೆಯೇ ಚಿನ್ಮಯಾನಂದರಿಗೆ ಗೋಚರಸ್ವಾಮಿ ಮತ್ತು ರಾವಸಾಹೇಬ ಶೇವಾಳಕರ್ ಎಂಬ ಇಬ್ಬರು ಶಿಷ್ಯರಿದ್ದರು.

ತುಕಾಯಿಯವರಿಗೆ ಬಾಬಾ ನಾಗರೆ, ಭುಜಂಗ, ದತ್ತಾರಾಮ ಹೀಗೆ ಬೆರಳೆಣಿಕೆಯ ಶಿಷ್ಯರಿದ್ದರು. ಭುಜಂಗ ಅವರಿಗೆ ಚಿಲೀಮ ತುಂಬಿ ಕೊಡುತ್ತಿದ್ದ. ಕೆಲವೊಮ್ಮೆ ತುಕಾಯಿಯವರು ಚಿಲಿಮೆಯಲ್ಲಿ ತಂಬಾಕು ಇಲ್ಲದಿದ್ದಾಗ ಮತ್ತು ಬೆಂಕಿಗಾಗಿ ಬೆಂಕಿಪಟ್ಟಣ ಇಲ್ಲದಿದ್ದಾಗ ಬರೀ ಚಿಲೀಮ ಬಾಯಿಗಿಟ್ಟು 'ಜಯಗುರುದೇವ' ಎಂದು ಹೇಳಿ ಸೇದುತ್ತಿದ್ದರು, ಅದರಿಂದ ಅಗ್ನಿಜ್ವಾಲೆಗಳು ಹೊರಡುತ್ತಿದ್ದವು. ಬಾಬಾನಾಗರೆ ತುಕಾಯಿ ಹತ್ತಿರ ಅಹೋರಾತ್ರಿ ಇರುತ್ತಿದ್ದರು. ಈಗಿರುವ ಮಠದ ಜಾಗ ಬಾಬಾ ನಾಗರೆಯವರದಾಗಿದೆ. ದತ್ತಾರಾಮನಾದರೋ ತುಕಾಮಾಯಿಯವರನ್ನು ಸಣ್ಣ ಮಕ್ಕಳ ಹಾಗೆ ಕಾಪಾಡುತ್ತಿದ್ದರು. ತುಕಾಮಾಯಿಗೆ ಒಮ್ಮೆ ಅತಿಸಾರ (ಭೇದಿ)ದ ವ್ಯಾಧಿ ತಟ್ಟಿತು. ಆಗಾಗ ಭೇದಿ ಆಗುತ್ತಿತ್ತು. ದತ್ತಾರಾಮ ಸ್ವತಃ ಅವರ ಬಟ್ಟೆ ತೊಳೆಯುತ್ತಿದ್ದರು. ತುಕಾಮಾಯಿಯು ಅವರನ್ನು ಕ್ರಿಯಾ ಯೋಗದಲ್ಲಿ ಪಾರಂಗತರಾಗಿಸಿದರು. ತುಕಾಯಿಯವರು ಅನೇಕರ ಶ್ರೇಯಸ್ಸನ್ನು ಮಾಡಿದರು. ಅವರ ಆಶೀರ್ವಾದದಿಂದ ಶೇಷರಾವ ಮಾಜಲಗಾವಕರ್‌ರವರಿಗೆ ಪುತ್ರ ಪ್ರಾಪ್ತಿಯಾಯಿತು. ಅವರು ಆ ಪುತ್ರನನ್ನು ಮಠಕ್ಕೆ ಅರ್ಪಿಸಿದರು. ಮಾರುತಿ ಎಂಬ ಶಿಷ್ಯ ನಿತ್ಯತುಕಾಯಿಯವರಿಗೆ ಒಂದು ಸಾವಿರ ಬಿಲ್ವಪತ್ರೆ ಏರಿಸುತ್ತಿದ್ದನು. ಬಿಲ್ವಪತ್ರೆ ಏರಿಸದೆ ಬಾಯಿಗೆ ಅನ್ನ ಹಾಕುತ್ತಿರಲಿಲ್ಲ. ತುಕಾಯಿಯವರ ನಿಶ್ಚಿತವಾದ ಜಾಗ ಇರಲಿಲ್ಲ. ಕೆಲವೊಮ್ಮೆ ಹೊಲದಲ್ಲಿ, ಬಾವಿ, ನದಿ, ಕಾಡಿನಲ್ಲಿತಿರುಗಾಡಿ ಮಾರುತಿ ದಣಿದು ಹೋಗುತ್ತಿದ್ದ, ಸುಸ್ತಾಗಿ ಕುಳಿತು ಬಿಡುತ್ತಿದ್ದ. ಅವನು ಕೂತಾಗ ಅಚಾನಕ ತುಕಾಯಿಯವರು ಬಂದು ಹೇಳುತ್ತಿದ್ದರು – ಕೊಡು ನಿನ್ನ ಬಿಲ್ವಪತ್ರೆ ! ತುಕಾಯಿಯ ತೊಡೆಯಲ್ಲಿ ತಲೆಯನ್ನಿಟ್ಟು ಮೃತ್ಯು ಬರಬೇಕೆಂಬ ಆಸೆ

ಮಾರುತಿಗಿತ್ತು . ಆ ಇಚ್ಛೆಯನ್ನು ತುಕಾಯಿಯವರು ಪೂರ್ಣಗೊಳಿಸಿದರು. ತುಕಾಯಿಯ ತೊಡೆಯ ಮೇಲೆ ತಲೆಯನ್ನಿಟ್ಟು 'ತುಕಾರಾಮ, ತುಕಾರಾಮ' ಎಂದು ಗುರುಸ್ಮರಣೆ ಮಾಡುತ್ತಾ ಅವನು ದೇಹಬಿಟ್ಟ. ಅವನ ಅಂತ್ಯ ಸಂಸ್ಕಾರ ಸ್ವತಃ ತುಕಾಯಿಯವರು ಮಾಡಿದರು. ವಾಮನರಾವ ಹೆಸರಿನ ಶಿಷ್ಯನನ್ನು ಪಿಶಾಚಿ ಹಿಡಿದಿತ್ತು , ಆ ಪಿಶಾಚಿಯನ್ನು ಓಡಿಸಿ ವಾಮನರಾವನನ್ನು ಮುಕ್ತಗೊಳಿಸಿದರು. ವಾಮನರಾವರೂ ತುಕಾಯಿಯ ತೊಡೆಯಲ್ಲಿ ದೇಹ ಬಿಟ್ಟರು. ಪಾಟೋದ್ಯೆಯ ಸೀತಾರಾಮ ಪಂತ ಹೆಸರಿನ ಗೃಹಸ್ಥರಿಗೆ ಬಾಪೂ ಹೆಸರಿನ ಪುತ್ರನಿದ್ದನು. ಅವನು ಮಾತಾಪೂರದ ದೇವಿಯ ದರ್ಶನ ಪಡೆಯಲು ಹೋಗುವಾಗ ಅವನು ತುಕಾಯಿಯ ಹೆಸರು ಕೇಳಿದ, ಅವನು ಹೋಗಿ ದರ್ಶನ ಪಡೆದ. ಆಗ ತುಕಾಯಿಯವರು ಅವನಿಗೆ ಅನುಗ್ರಹ ಮಾಡಿದರು, ಬಾಪೂ ಅವರ ಅನುಮತಿಯಿಂದ ಸೇವೆಗಾಗಿ ಯೆಹಳೆ ಊರಿನಲ್ಲೇ ಉಳಿದುಬಿಟ್ಟ. ಅವನು ಕಟ್ಟಿಗೆ ಒಡೆಯುವುದು, ನೀರು ತುಂಬುವುದು, ಎಂಜಲಗೋಮ ಮಾಡುವುದು. ದೇವರ ಪೂಜೆ ಮಾಡುವುದು ತುಕಾಯಿಯವರ ಪಾದ ಸೇವೆ ಮಾಡುವುದು, ಹೀಗೆ ಬಳಲದೆ ಅಹೋರಾತ್ರೆ ಗುರುಸೇವೆ ಮಾಡಿದ. ಒಂದು ದಿನ ಅವನು ದೇವರ ಪೂಜೆ ಮಾಡುತ್ತಿರುವಾಗ ತುಕಾಯಿಯವರು ಅವನ ತಲೆಗೆ ದೊಣ್ಣೆಯಿಂದ ಹೊಡೆದರು. ಅವನು ಸ್ಮೃತಿ ತಪ್ಪಿಬಿದ್ದನು. ವಾಸ್ತವವಾಗಿ ಅವನಿಗೆ ಸಮಾಧಿ ಹತ್ತಿತ್ತು . ಅವನು ಎಚ್ಚರಗೊಂಡಾಗ ಅವನ ಮನೋವೃತ್ತಿ ಪೂರ್ಣ ಬದಲಾಯಿತು. ತುಕಾಯಿಯ ಹೆಸರು ಸುಮ್ಮನೆ ಹೊರಟರೂ ಅವರ ಕಣ್ಣುಗಳಿಂದ ಕಣ್ಣೀರ ಹರಿಯ ತೊಡಗುವುದು. ಬಾಪೂ ಇವನು ತುಕಾಮಾಯಿಯ ಕೊನೆಯ ಶಿಷ್ಯನಾಗಿದ್ದನು. ಅವನ ತೊಡೆಯಲ್ಲಿ ತುಕಾಯಿಯವರು ದೇಹವಿಟ್ಟರು.

ಟಿಯ್ಯಾ ಮತ್ತು ಗಣ್ಯಾ ಎಂಬ ಎರಡು ನಾಯಿಗಳು ತುಕಾಯಿ ಹತ್ತಿರ ಇರುತ್ತಿದ್ದವು. ತುಕಾಯಿ ಹೋದಲೆಲ್ಲಾ ಆ ನಾಯಿಗಳು ಹೋಗುತ್ತಿದ್ದವು. ತುಕಾಯಿ ಸ್ವತಃ ತನ್ನಕೈಯಿಂದ ಅವಕ್ಕೆ ತಿನ್ನಿಸುತ್ತಿದ್ದರು. ತುಕಾಯಿ ತಿನ್ನಿಸಿದಷ್ಟೇ ಅವು ತಿನ್ನುತ್ತಿದ್ದವು. ಒಂದು ದಿನ ಗಣ್ಯಾನ ಮೃತ್ಯು ಆಯಿತು, ಅತೀವ ದುಃಖದಿಂದ ತುಕಾಯಿಯವರು ಅದು ನಾಯಿಯಾಗಿದ್ದರೂ ಅಗ್ನಿ ಸಂಸ್ಕಾರ ಸ್ವತಃ ಮಾಡಿದರು.

ಸೂರ್ಯಗ್ರಹಣದ ಘಟನೆಯಾಗಿದೆ. ಪರ್ವಕಾಲ ಬೆಳಗಿನ ಹನ್ನೊಂದು ಗಂಟೆಯದು. ತುಕಾಯಿಯು ಯೆಹಳೆಯಲ್ಲೇ ಇದ್ದರು. ಅನೇಕರು ದರ್ಶನಕ್ಕಾಗಿ ನೆರೆದಿದ್ದರು. ತುಕಾಯಿಯವರು ಇದ್ದಕ್ಕಿದ್ದಂತೆ ತಮ್ಮ ಶಿಷ್ಯರಿಗೆ ಹೇಳಿದರು – ''ಬಹಳ ದೊಡ್ಡ ಪರ್ವಕಾಲವಾಗಿದೆ. ಗಂಗಾಸ್ನಾನ ಮಾಡಿ ಅದನ್ನು ಆಚರಿಸಬೇಕು'' ಶಿಷ್ಯರಿಗೆ

ಆಶ್ಚರ್ಯವಾಯಿತು. ಪರ್ವಕಾಲ ಹನ್ನೊಂದು ಗಂಟೆಗೆ, ಯೆಹಳೆಯಿಂದ ನಾಂದೇಡ ಹದಿನಾರು ಗಾವುದ ದೂರವಿದೆ. ಕುದುರೆ ಮೇಲೆ ಹೋದರೂ ಸಾಧ್ಯವಾಗದು. ತುಕಾಯಿಯವರು ಹೋಗುವ ನಿರ್ಧಾರ ಮಾಡಿದರು. ಅವರೊಂದಿಗೆ ಹೋಗಲು ಕೇವಲ ಇಬ್ಬರು ಶಿಷ್ಯರು ಸಿದ್ಧರಿದ್ದರು. ಉಳಿದವರು ನಕಾರ ಕೊಟ್ಟರು. ಅವರಿಬ್ಬರ ಸಹಿತ ಕುತಾಯಿ ಒಂದು ಕೋಣೆಯನ್ನು ಹೊಕ್ಕು ಕೋಣೆಯ ಬಾಗಿಲನ್ನು ಒಳಗಿನಿಂದ ಭದ್ರಪಡಿಸಿ, ಮೂವರೂ ಕಣ್ಣು ಮುಚ್ಚಿಕೊಂಡು ಕ್ಷಣಾರ್ಧದರಲ್ಲಿ ನಾಂದೇಡ ಗೋದಾವರೀ ತೀರಕ್ಕೆ ಬಂದರು. ಈ ಗೋದಾವರಿಗೇ ಗಂಗೆ ಎಂದು ಹೇಳುತ್ತಾರೆ. ಮೂವರೂ ಪರ್ವಕಾಲದ ಮುಹೂರ್ತದಲ್ಲಿ ಗಂಗಾಸ್ನಾನ ಮಾಡಿದರು. ಪುನಃ ಕಣ್ಣು ಮುಚ್ಚಿ ಕ್ಷಣಾರ್ಧದಲ್ಲಿಯೇ ಯೆಹಳೆ ಊರಿಗೆ ಬಂದು ತಲುಪಿದರು. ಕೋಣೆಯ ಬಾಗಿಲು ತೆರೆಯಲಾಯಿತು, ಆಗ ಮೂವರು ಗಂಗಾಜಲದಿಂದ ಒದ್ದೆಯಾಗಿದ್ದರು. ಒಮ್ಮೆ ಪುಸದಲಾಕ್ಕೆ ಹೋಗಬೇಕೆಂದು ತುಕಾಯಿಯವರಿಗೆ ಇಚ್ಛೆಯಾಯಿತು. ಅಲ್ಲಿ ಚಿನ್ಮಯಾನಂದರ ಗುರು ವಿಟ್ಠಲ ಕಿಂಕರರ ಸಮಾಧಿ ಇದೆ. ಆ ಸಮಾಧಿಯ ದರ್ಶನಕ್ಕಾಗಿ ತುಕಾಯಿ ಪುಸದಲಾ ಹೋದರು. ಅಲ್ಲಿಯ ನರಸಿಂಹ ಮಂದಿರದಲ್ಲಿ ಅವರ ವಾಸ್ತವ್ಯವಿತ್ತು . ತುಕಾಯಿ ಪುಸದಲಾಗೆ ಬಂದ ಸುದ್ದಿ ಸುತ್ತಲ ಊರುಗಳಿಗೆ ಹರಡಿತು. ಜನರ ದಟ್ಟಣೆ ಬೆಳೆಯಿತು, ದಟ್ಟಣೆ ಹೆಚ್ಚಾದಾಗ ಪೊಲೀಸರು ಮಂದಿರದ ಬಾಗಿಲು ಮುಚ್ಚಿಬಿಟ್ಟರು. ಭಕ್ತರಿಗೆ ನಿರಾಸೆಯಾಯಿತು. ಆದರೆ ಸಂತರಿಗೆ ಭಕ್ತರ ಚಿಂತೆ ಇರುತ್ತದೆ. ಭಕ್ತರಿಗಾಗಿ ತುಕಾಯಿಯವರು ನದಿಯ ಮರಳಿನಲ್ಲಿ ಪ್ರಕಟರಾದರು.

ಅವರ ದರ್ಶನ ಪಡೆದು ಭಕ್ತರು ತೃಪ್ತರಾದರು. ಗೋಚರಸ್ವಾಮೀ ಕಾಶಿಯಾತ್ರೆಗೆ ಹೊರಟಿದ್ದರು. ದಾರಿಯಲ್ಲಿ ತುಕಾಮಾಯಿಯವರನ್ನು ಭೆಟ್ಟಿಯಾಗುವ ಇಚ್ಛೆ ಅವರ ಮನಸ್ಸಿನಲ್ಲಿ ಉಂಟಾಯಿತು. ಅವರು ಯೆಹಳೆ ಊರಿಗೆ ಬಂದರು. ಊರಿನ ಮಠದಲ್ಲಿ ಅವರಿಗೆ ತುಕಾಯಿ ಕಾಣಿಸಲಿಲ್ಲ. ಕೊನೆಗೆ ಊರಿನ ಪಟೇಲರಲ್ಲಿ ವಿಚಾರಿಸಿದರು. ತುಕಾಮಾಯಿ ತುಪೇಗಾವಿಗೆ ಹೋಗಿದ್ದಾರೆ, ಮರಳಿ ಯಾವಾಗ ಬರುತ್ತಾರೆಂದು ಹೇಳಲಾಗುವುದಿಲ್ಲ. ಗೋಚರಸ್ವಾಮಿ ಹೇಳಿದರು – ''ಸರಿ ನಾನು ನದಿಯಲ್ಲಿ ಸ್ನಾನ ಮಾಡಿ ಬರುವೆ, ಅಷ್ಟರಲ್ಲಿ ಅವರು ಬಂದೇ ಬಿಟ್ಟರೆ ಅವನಿಗೆ ನಾನು ಬಂದುದನ್ನು ಹೇಳಿರಿ, ಎಲ್ಲಿಗೂ ಹೋಗಗೊಡದಿರಿ, ಕೋಣೆಯಲ್ಲಿ ಕೂಡಿ ಹಾಕಿದರೂ ಆದೀತು.'' ಗೋಚರಸ್ವಾಮಿ ಸ್ನಾನಕ್ಕಾಗಿ ಹೊರಟು ಹೋದರು. ಸ್ವಲ್ಪ ಹೊತ್ತಿನಲ್ಲೇ ತುಕಾಯಿ ಬಂದರು. ಪಾಟಿಲರು ಅವರ ಕೈ ಹಿಡಿದು ಮಂದಿರಕ್ಕೆ ಕೊಂಡುಹೋದರು. ಗೋಚರ

ಸ್ವಾಮಿಯ ಸಂದೇಶ ತಿಳಿಸಿ, ಒಂದು ಕೋಣೆಯಲ್ಲಿ ಕೂಡಿ ಹಾಕಿದರು. ಬಾಗಿಲಿಗೆ ಹೊರಗಡೆಯಿಂದ ಚಿಲಕ ಹಾಕಿದರು. ಗೋಚರಸ್ವಾಮಿ ಸ್ನಾನಮಾಡಿ ಬಂದರು, ಪಾಟಿಲ ಮತ್ತು ಅವರು ಮಂದಿರದ ಕೋಣೆಯ ಕಡೆಗೆ ಬಂದರು. ಬಾಗಿಲು ತೆರೆದು ನೋಡಿದರೆ ತುಕಾಯಿ ಒಳಗೆ ಇರಲಿಲ್ಲ. ಸ್ವಾಮಿ ನಿರಾಶರಾದರು. ಅವರು ಉಮರಖೇಡಕ್ಕೆ ಹಿಂದಿರುಗಿದರು. ದಾರಿಯಲ್ಲಿ ಒಂದು ಹೊಲದಲ್ಲಿ ಅವರ ಮತ್ತು ತುಕಾಯಿಯವರ ಭೇಟ್ಟಿಯಾಯಿತು. ತುಕಾಯಿಯನ್ನು ಕಂಡು ಅವರ ಕಣ್ಣುಗಳಿಂದ ಕಂಬನಿ ಹರಿದವು. ತುಕಾಯಿಯವರು ಗೋಚರಸ್ವಾಮಿಗಳನ್ನು ಬಿಗಿಯಾಗಿ ಅಪ್ಪಿಕೊಂಡರು. ಗೋಚರಸ್ವಾಮಿ ಅವರನ್ನು ಉಮರಖೇಡಕ್ಕೆ ಕರೆದುಕೊಂಡು ಹೋದರು.



-: ಏಳು :-

# ಸಿದ್ಧಯೋಗೀ ತುಕಾಯೀ

ತುಕಾಯಿ ಗೋಚರ ಸ್ವಾಮಿಗಳೊಂದಿಗೆ ಉಮರಖೇಡಕ್ಕೆ ಬಂದರು. ಅಲ್ಲಿ ಸ್ವಾಮಿ ಸಚ್ಚಿದಾನಂದರ ಸಮಾಧಿ ಇದೆ. ಅಲ್ಲಿ ಚೈತ್ರಕೃಷ್ಣ ಏಕಾದಶಿಯಿಂದ ಮುಂದಿನ ಐದು ದಿನ ಉತ್ಸವ ಆಚರಿಸುತ್ತಾರೆ. ಅಲ್ಲಿಯ ಎಲ್ಲ ವ್ಯವಸ್ಥೆ ಗೋಚರ ಸ್ವಾಮಿ ನೋಡಿಕೊಳ್ಳುತ್ತಿದ್ದರು. ವೇದಪಾರಾಯಣ, ನಾಮಸ್ಮರಣ, ಕೀರ್ತನ ಹೀಗೆ ಭಾರೀಪರಮಾನಂದ ಇರುತ್ತದೆ. ಮಧ್ಯಾಹ್ನ ಹನ್ನೆರಡು ಗಂಟೆಗೆ ಭೋಜನದ ಸಮಯ, ಎಲ್ಲರೂ ಎಲೆಯ ಮುಂದೆ ಕೂತಿದ್ದರು. ಆಗಲೇ ಅಲ್ಲಿಗೆ ತುಕಾಯಿ ಬಂದರು. ಗೋಚರಸ್ವಾಮಿಗಳಿಗೆ ಅತಿಶಯ ಆನಂದವಾಯಿತು. ಅವರು ಚರಣಗಳಲ್ಲಿ ಮಸ್ತಕವನ್ನಿಟ್ಟು, ಭೋಜನಕ್ಕಾಗಿ ಪಂಕ್ತಿಯಲ್ಲಿ ಕುಳಿತುಕೊಳ್ಳಲು ವಿನಂತಿಸಿದರು. ತುಕಾಯಿ ಪಂಕ್ತಿಯಲ್ಲಿ ಬಂದು ಒಂದು ಬರಿದಾದ ಎಲೆಯಲ್ಲಿ ಕುಳಿತರು. ಇದನ್ನು ನೋಡಿ ಬ್ರಾಹ್ಮಣರು ಎದ್ದು ಬಿಟ್ಟರು. ''ಮಡಿ-ಮೈಲಿಗೆ ಪಾಲಿಸದ ಇವನು ಇಲ್ಲಿಗೇಕೆ ಬಂದ? ಇವನು ಇಲ್ಲಿ ಊಟ ಮಾಡುವುದಾದರೆ ನಾವು ಇಲ್ಲಿ ಇರಲಾರೆವು'' ಇದನ್ನು ನೋಡಿ ತುಕಾಯಿ ಎದ್ದು ಮಂಟಪದಿಂದ ಅಂತರ್ಧಾನರಾದರು. ತುಕಾಯಿ ಮಂಟಪದಿಂದ ಇಲ್ಲವಾದಾಗ ಎದ್ದ ಬ್ರಾಹ್ಮಣರೆಲ್ಲ ಪುನಃ ಊಟಕ್ಕೆ ಕುಳಿತರು. ಎಲ್ಲರೂ ತ್ರಿಸುಪರ್ಣ ಪಠಿಸಿದರು. ಇನ್ನೇನು ಊಟ ಪ್ರಾರಂಭಿಸಬೇಕೆಂದಾಗ ಅನ್ನದಲೆಲ್ಲಾ ಹುಳುಗಳು ಕಾಣಿಸಿಕೊಂಡವು. ಗೋಚರಸ್ವಾಮಿಗಳ ಗಮನಕ್ಕೆ ಬಂತು, ಅವರು ಉದ್ಗರಿಸಿದರು-ಬ್ರಹ್ಮಜ್ಞಾನೀ ತುಕಾಯಿಯ ಅವಮಾನವಾಯಿತು. ಇನ್ನು ಹೀಗೆ ಆಗುವುದು. ಅವರನ್ನು ಸಮ್ಮಾನಪೂರ್ವಕ ಕರೆದುಕೊಂಡು ಬನ್ನಿ, ಇದೊಂದೇ ಉಪಾಯ ಇರುವುದು.

ಜನರು ತುಕಾಯಿಯವರನ್ನು ಹುಡುಕಲು ಹೊರಟರು. ತುಕಾಯಿ ಜೈನ ಎಂಬ ಗೃಸ್ಥರ ಮನೆಗೆ ಹೋಗಿದ್ದರು. ಅಲ್ಲಿ ಅವರು ಜೈನರೊಂದಿಗೆ ಆನಂದದಿಂದ ಉಳ್ಳಾಗಡ್ಡಿ

ಜೊತೆಗೆ ರೊಟ್ಟಿ ತಿನ್ನುತ್ತಿದ್ದರು. ಈ ಜೈನರು ಅಧ್ಯಾತ್ಮದಲ್ಲಿ ಅಧಿಕಾರೀ ಪುರುಷರಾಗಿದ್ದರು. ಜನರು ತುಕಾಯಿಯ ಕಾಲಿಗೆ ಬಿದ್ದು, ಆದ ಅಪಮಾನಕ್ಕಾಗಿ ಕ್ಷಮೆ ಬೇಡಿದರು ಹಾಗೂ ನಡೆದ ವೃತ್ತಾಂತ ತಿಳಿಸಿದರು. ಉತ್ಸವ ಮಂಟಪಕ್ಕೆ ಮರಳಿ ಬರುವಂತೆ ವಿನಂತಿಸಿ ಕೊಂಡರು. ತುಕಾಯಿ ಜನರೊಂದಿಗೆ ಉತ್ಸವ ಸ್ಥಳಕ್ಕೆ ಬಂದರು. ಅವರು ನೇರವಾಗಿ ಚಿನ್ಮಯಾನಂದ ಸ್ವಾಮಿಗಳ ಸಮಾಧಿ ಹತ್ತಿರ ಹೋಗಿ, ಸಮಾಧಿಗೆ ವಂದಿಸಿ ಹೇಳಿದರು – ಅಯ್ಯಾ! ಈ ಉತ್ಸವದ ಆಡಂಬರ ಏಕೆ ಮಾಡಿದೆ? ಮುಂದೆ ಮಂಡಳಿಯ ಕಡೆಗೆ ನೋಡಿ ಉದ್ಗರಿಸಿದರು – ಈ ಸಮಾಧಿಯ ತೀರ್ಥವನ್ನು ಅನ್ನದ ಮೇಲೆ ಸಿಂಪಡಿಸಿರಿ. ಜನರು ತುಕಾಯಿಯ ಆಜ್ಞೆಯನ್ನು ಶಿರಸಾವಹಿಸಿ ಸಮಾಧಿ ತೀರ್ಥವನ್ನು ಅನ್ನದ ಮೇಲೆ ಸಿಂಪಡಿಸಿದರು. ಅನ್ನ ಹಿಂದಿನಂತೆ ಆಯಿತು, ಆದರೆ ತುಕಾಯಿ ಅಲ್ಲಿ ಇರಲಿಲ್ಲ. ಅವರು ಆಗಲೇ ಅಂತರ್ಧಾನರಾಗಿದ್ದರು. ಗೋಚರಸ್ವಾಮಿಗಳ ಕಣ್ಣುಗಳಿಂದ ಕಣ್ಣೀರಧಾರೆ ಹರಿಯಿತು. ಎಲ್ಲರೂ ಭೋಜನ ಪ್ರಸಾದ ಪಡೆದರು.

ತುಕಾಯಿಯವರ ಗುರುಬಂಧು ರಾವಸಾಹೇಬ ಶೇವಾಳಕರ್ ಇವರು ಶೇವಾಳ ತಾಲ್ಲೂಕಿನ ಕಮಳನುರಿ ಎಂಬ ಊರಿನಲ್ಲಿ ಇರುತ್ತಿದ್ದರು. ದೊಡ್ಡ ಸಾಧಕ ಮತ್ತು ದಾನಶೂರರಾಗಿದ್ದರು. ಅವರ ಮನೆಯಲ್ಲಿ ಪ್ರತಿದಿನ ಅನ್ನದಾನ ನಡೆಯುತ್ತಿತ್ತು . ಒಮ್ಮೆ ತುಕಾಯಿ ಅವರ ಮನೆಗೆ ಹೋದರು. ಗುರುಬಂಧುವಿನ ಭೇಟ್ಟಿಯ ಆನಂದ ಬೇರೆಯೇ ಆಗಿರುತ್ತದೆ. ರಾವ ಸಾಹೇಬರು ಮರುದಿನ ಬೆಳಿಗ್ಗೆ ತುಕಾಯಿಯವನ್ನು ಭೆಟ್ಟಿಯಾಗಲು ಹೋದರು. ತುಕಾಯಿ ಅವರಲ್ಲಿ ಹೇಳಿದರು – ರಾವಜೀ ! ಇಂದು ದೇವರಿಗೆ ಮಾವಿನ ಹಣ್ಣಿನ ರಸದ ನೈವೇದ್ಯ ಮಾಡಿ. ರಾವ ಸಾಹೇಬರು ಕೈಮುಗಿದು ಹೇಳಿದರು – ದಾದಾ! ಈ ವರ್ಷ ಮಾವಿನಹಣ್ಣು ಬಿಟ್ಟೇ ಇಲ್ಲ, ರಸ ಹೇಗೆ ಮಾಡುವುದು? ತುಕಾಯಿ ಹೇಳಿದರು ನೀನು ಅಡಿಗೆ ಸಿದ್ಧಮಾಡು. ರಾವ ಸಾಹೇಬರು ಅಡಿಗೆಯ ಸಿದ್ಧತೆಗೆ ಮನೆಗೆ ಹೋದರು. ಸ್ವಲ್ಪ ಹೊತ್ತಿನಲ್ಲೇ ಓರ್ವ ಸ್ತ್ರೀ ತುಕಾಯಿಯ ದರ್ಶನಕ್ಕೆ ಬಂದಳು. ಅವಳು ಅವರ ಚರಣಗಳಲ್ಲಿ ಶಿರವನ್ನಿಟ್ಟು, ಎದುರಿಗೆ ಒಂದು ಮಾವಿನ ಹಣ್ಣನ್ನು ಇಟ್ಟಳು. ತುಕಾಯಿ ಕೇಳಿದರು – ನಿನ್ನ ಬಳಿ ಇನ್ನು ಮಾವಿನ ಹಣ್ಣು ಇದೆಯೇ? ಆ ಸ್ತ್ರೀ ಉತ್ತರಿಸಿದಳು – ಇಂದೇ ನನ್ನ ಮಾವಿನ ಹಣ್ಣಿನ ಗಾಡಿ ಬಂದಿದೆ, ಅದನ್ನು ಇಲ್ಲಿಗೆ ತರುತ್ತೇನೆ. ಆ ದಿನ ತುಕಾಯಿಯವರು ಎಲ್ಲ ಕಮಳನುರಿ ಊರಿಗೆ ಮಾವಿನಹಣ್ಣಿನ ಭೋಜನ ಮಾಡಿಸಿ ತೃಪ್ತಿಪಡಿಸಿದರು. ಕೆಲವು ದಿನ ಕಮಳನುರಿಯಲ್ಲಿದ್ದು ತುಕಾಯಿ ತುಪೇಗಾವಿಗೆ ಬಂದರು. ಅನೇಕರು ದರ್ಶನಕ್ಕಾಗಿ ಬಂದರು. ಅಲ್ಲಿ ದೇಶಮುಖರ ಪತ್ನೀ ತುಕಾಯಿಯ ದರ್ಶನಕ್ಕೆ ಬಂದರು. ಬರುವಾಗ

ಆಕೆಯು ತುಕಾಯಿಗಾಗಿ ಬಂದು ತಟ್ಟೆಯಲ್ಲಿ ಉಳ್ಳಾಗಡ್ಡಿ ರೊಟ್ಟಿ ತಂದಿದ್ದರು. ಉಳ್ಳಾಗಡ್ಡಿ ರೊಟ್ಟಿ ನೋಡಿ ಸೇರಿದ್ದ ಜನರು ಮೂಗು ಮುರಿದರು. ಆ ದೇಶಮುಖ ಪತ್ನಿಯು ತುಕಾಯಿಯ ಚರಣದಲ್ಲಿ ಶಿರವನ್ನಿಟ್ಟು, ಅವರ ಎದುರಿಗೆ ಉಳ್ಳಾಗಡ್ಡಿ ರೊಟ್ಟಿಯ ತಾಟನ್ನು ಇಟ್ಟಳು. ಜನರ ಮುಖಭಾವ ತುಕಾಯಿ ತಿಳಿದರು, ಆ ತಟ್ಟೆಯನ್ನು ದೇಶಮುಖ ಪತ್ನಿಯ ಕಡೆಗೆ ಎಸೆದರು. ಅ ತಟ್ಟೆಯಿಂದ ಬಿಳಿ ಜಾಜಿಯ ಸುಗಂಧಿತ ಹೂವುಗಳು ಚೆಲ್ಲಿದವು.

ಅನ್ನವು ಪೂರ್ಣ ಬ್ರಹ್ಮವಾಗಿದೆ, ಉಳ್ಳಾಗಡ್ಡಿ ರೋಟಿಯಾದರೋ ಬಡವರ ಅನ್ನವಾಗಿದೆ. ಅದರ ಕುರಿತು ಇಂತಹ ತಿರಸ್ಕಾರ ಇರಬಾರದು. ಸಂತರು ದಯಾನಿಧಿಯಾಗಿರುತ್ತಾರೆ. ಒಮ್ಮೆ ಒಬ್ಬ ದನಕಾಯುವವನ ಮನೆಯಲ್ಲಿ ತುಕಾಯಿ ತಂಗಳ ರೊಟ್ಟಿ ಮತ್ತು ಉಳ್ಳಾಗಡ್ಡಿ ಊಟ ಮಾಡುತ್ತಿದ್ದರು. ದನಕಾಯುವವನು ಅವನ ಬಳಿ ಇದ್ದುದನ್ನು ತುಂಬಾ ಪ್ರೇಮದಿಂದ ಕೊಟ್ಟಿದ್ದನು. ತುಕಾಯಿಯವರು ತೃಪ್ತರಾದರು. ಆ ದನಕಾಯುವವನು ದಾರಿಯಲ್ಲಿ ತಿನ್ನಲು ಇನ್ನೂ ರೊಟ್ಟಿ ಕೊಟ್ಟಿದ್ದನು. ಒಂದು ಕಡೆ ಅವರು ತಂಗಿದರು, ಅಲ್ಲೇ ಅನೇಕ ಜನರು ಅವರ ದರ್ಶನಕ್ಕೆ ಸೇರಿದರು. ತುಕಾಯಿಯವರು ಆ ಉಳ್ಳಾಗಡ್ಡಿ ರೊಟ್ಟಿಯ ಪ್ರಸಾದ ಎಲ್ಲರಿಗೂ ಹಂಚಿದರು. ಎಲ್ಲರೂ ಅದನ್ನು ಶ್ರದ್ಧೆಯಿಂದ ಸ್ವೀಕರಿಸಿದರು. ಒಬ್ಬನಿಗೆ ಮಾತ್ರ ಜುಗುಪ್ಸೆ ಬಂತು. ಅವರು ಆ ಪ್ರಸಾದವನ್ನು ನಾಯಿಗೆ ಹಾಕಿದನು. ಮನೆಗೆ ಬಂದು ಸ್ನಾನ ಮಾಡಿದ, ಆಗ ಅವನಿಗೆ ಹಾಯೆನಿಸಿತು. ಮರುಕ್ಷಣದಲ್ಲಿ ಇದ್ದಕ್ಕಿದ್ದಂತೆ ಅವನಿಗೆ ಹೊಟ್ಟೆ ನೋಯ ತೊಡಗಿತು. ತೀವ್ರವಾದ ವೇದನೆಯಿಂದ ಹೊರಳಾಡತೊಡಗಿದ. ಅವನ ಈ ಸ್ಥಿತಿಯನ್ನು ಕಂಡು ಮನೆಯವರು ಎತ್ತಿಕೊಂಡು ತುಕಾಯಿಯ ಬಳಿಗೆ ತಂದರು, ಅವರು ಅಂತರ್ಜ್ಞಾನದಿಂದ ಅರಿತರು. ಆದರೆ ಸಂತರು ದಯಾಸಾಗರರಾಗಿರುತ್ತಾರೆ, ಕ್ಷಮಾಮೂರ್ತಿಯಾಗಿರುತ್ತಾರೆ. ಅವರು ಆ ಗೃಹಸ್ಥನ ಹೊಟ್ಟೆಯ ಮೇಲೆ ಪ್ರೇಮದಿಂದ ಕೈಯಾಡಿಸಿದರು. ತತ್‌ಕ್ಷಣ ಅವನ ವೇದನೆ ನಿಂತಿತು.

ಒಮ್ಮೆ ತುಕಾಯಾಯಿ ಮತ್ತು ಗೋಚರಸ್ವಾಮಿ ಇಬ್ಬರೂ ಪುಸದದಿಂದ ಯೆಹಳೆ ಊರಿಗೆ ಬರುತ್ತಿದ್ದರು. ಒಂದು ಊರಿನಲ್ಲಿ ಇಬ್ಬರೂ ಸ್ವಲ್ಪ ವಿಶ್ರಾಂತಿಗಾಗಿ ತಂಗಿದ್ದರು. ಓರ್ವ ಹಣ್ಣು ಹಣ್ಣು ಮುದುಕಿ ತುಕಾಯಿಯ ದರ್ಶನಕ್ಕೆ ಬಂದಳು. ಆಕೆಯ ಇಡೀ ಮೈ ನಡುಗುತಿತ್ತು. ಆಕೆಯು ತುಕಾಯಿಯ ಚರಣದಲ್ಲಿ ತಲೆಯನ್ನಿಟ್ಟು ಹೇಳಿದಳು – ''ತುಕಾಮಾಯ ! ಎಷ್ಟು ದಿನ ಈ ಕಾಯ ಬದುಕಿಸುವುದು? ಕಣ್ಣು– ಕಿವಿ, ಎಲ್ಲ ಇಂದ್ರಿಯಗಳು ಕೆಲಸ ಮಾಡದಾದವು, ಸಂಸಾರವು ಮುಗಿಯಿತು, ಇನ್ನು ಯಾವ

ಇಚ್ಛೆಯೂ ಉಳಿಯಲಿಲ್ಲ, ನಿನ್ನ ಚರಣಗಳಲ್ಲಿ ಈ ದೇಹ ಅರ್ಪಿಸಬೇಕೆಂಬ ಇಷ್ಟೇ ಇಚ್ಛೆ ಇದೆ ನನಗೆ'' ಗೋಚರಸ್ವಾಮಿ ಹೇಳಿದರು – 'ಅಜ್ಜಿಯ ಭಾವ ಶುದ್ಧವಾಗಿದೆ. ನೀವು ಆಕೆಗೆ ಮುಕ್ತಿ ಕೊಡಬೇಕು? ತುಕಾಯಿಯವರು ಆ ಮುದುಕಿಯ ತಲೆಯನ್ನು ಪ್ರೇಮದಿಂದ ತನ್ನ ತೊಡೆಯಲ್ಲಿಟ್ಟುಕೊಂಡರು. ಬಾಯಿಯಿಂದ 'ರಾಮನಾಮ' ಹೇಳುತ್ತಾ ಮುದುಕಿಯು ದೇಹವಿಟ್ಟಳು.

ಪುಸದದ್ದೆ ಈ ಪ್ರಸಂಗವಿದೆ – ಪುಸದ ಊರಿನಲ್ಲಿ ಪಾಂಡುರಂಗ ದೇಸಾಯಿ ಮತ್ತು ಅವರ ಪತ್ನೀ ಗಂಗೂಬಾಯಿ ತುಕಾಯಿಯ ನಿಸ್ಸೀಮ ಭಕ್ತಿ ಮಾಡುವ ದಂಪತಿಗಳಾಗಿದ್ದರು. ಈ ಪತಿ ಪತ್ನೀ ಗುರುದರ್ಶನಕ್ಕಾಗಿ ಒಮ್ಮೆ ಯೆಹಳೆ ಊರಿಗೆ ಬಂದರು. ನೈವೇದ್ಯ ಮಾಡಿ ತುಕಾಯಿಗೆ ಊಟ ಹಾಕಬೇಕೆಂಬ ಇಚ್ಛೆ ಗಂಗೂಬಾಯಿಗೆ ಮನಸ್ಸಿನಲ್ಲಿತ್ತು . ಇಬ್ಬರೂ ತುಕಾಯಿಯ ಚರಣಗಳಲ್ಲಿ ಶಿರವನ್ನು ಚಾಚಿ ಅವರ ಅನುಮತಿ ಪಡೆದರು. ಐವತ್ತು ಜನರಿಗಾಗುವಷ್ಟು ಸಾಮಾನು ತಂದು ಗಂಗೂಬಾಯಿ ಸ್ವತಃ ಅಡಿಗೆ ಮಾಡಿದರು. ಹನ್ನೊಂದುವರೆ ಹೊತ್ತಿಗೆ ಅಡಿಗೆ ಸಿದ್ಧವಾಯಿತು. ತುಕಾಯಿಯವರು ಬೆಳಿಗ್ಗೆಯೇ ಎಲ್ಲೋ ಹೋಗಿದ್ದರು. ಹನ್ನೆರಡು – ಒಂದು ಗಂಟೆಯಾದರೂ ಅವರ ಆಗಮನವಿಲ್ಲ. ಪಾಂಡುರಂಗ ಪಂತರು ಹಾಗೂ ಬೇರೆ ಕೆಲವು ಜನರು ಸೇರಿ ಅವರನ್ನು ಹುಡುಕಲು ಹೊರಟರು. ಮೂರು ಗಂಟೆಯಾದರೂ ಅವರ ಆಗಮನವಿಲ್ಲ. ಅಡಿಗೆ ಆರಿ ಹೋಯಿತು, ಗಂಗೂಬಾಯಿಯ ಕಣ್ಣುಗಳಿಂದ ಅಶ್ರು ಹರಿಯುತ್ತಿದ್ದವು. ಮನಸ್ಸಿನಲ್ಲೇ ತುಕಾಯಿಯ ಧ್ಯಾನ ನಡೆಯುತ್ತಿತ್ತು . ಕೊನೆಗೆ ತುಕಾಯೀ ಬಂದರು. ಇಷ್ಟೊತ್ತಿಗೆ ಎರಡುವರೆ ನೂರು ಮುನ್ನೂರು ಜನರು ಸೇರಿದ್ದರು. ಗಂಗೂಬಾಯಿಯು ತುಕಾಯಿಯ ಮುಂದೆ ನೈವೇದ್ಯ ತಂದಿಟ್ಟರು. ತುಕಾಯೀ ಹೇಳಿದರು – ಗಂಗೂಬಾಯಿ! ಎಲ್ಲರಿಗೂ ಊಟ ಬಡಿಸಿರಿ. ಗಂಗೂಬಾಯಿ ಹೇಳಿದರು – 'ಅಮ್ಮ ! ನಾನಾದರೋ ಐವತ್ತು ಜನರಿಗೆ ಅಡಿಗೆ ಮಾಡಿದ್ದೇನೆ.' ತುಕಾಯಿಯವರು ನೈವೇದ್ಯದ ತಟ್ಟೆ ಎತ್ತಿಕೊಂಡು ಅದರಲ್ಲಿನ ಎಲ್ಲ ಪದಾರ್ಥಗಳನ್ನು ಆಯಾಯಾ ಪದಾರ್ಥಗಳಲ್ಲಿ ಬೆರೆಸಿದರು. ಅನ್ನಕ್ಕೆ ಮೇರೆಯೇ ಉಳಿಯಲಿಲ್ಲ. ಅಂದು ಹೆಚ್ಚು ಕಡಿಮೆ ನಾಲ್ಕು ನೂರು ಜನರು ಭೋಜನ ಪ್ರಸಾದ ಸ್ವೀಕರಿಸಿ ತೃಪ್ತರಾದರು. ಗಂಗೂಬಾಯಿ ಮತ್ತು ಪಾಂಡುರಂಗ ಪಂತರು ಧನ್ಯರಾದರು.

ಮೇಲಿಂದ ಮೇಲೆ ನೋಡಲು ವಿಚಿತ್ರ , ಪ್ರಸಂಗ ಬಂದಾಗ ಗರ್ವಿಷ್ಟ, ಆದರೆ ದಯಾ–ಕ್ಷಮೆ–ಶಾಂತಿ ಈ ಮೂರರ ಇರುವಿಕೆ, ಈಶ್ವರನಲ್ಲಿ ಏಕತೆ, ಭಕ್ತರ ಕರೆಗೆ ಅಷ್ಟೇ ಪ್ರೇಮದಿಂದ ಕರಗುವುದು. ಒಮ್ಮೆ ತುಕಾಯಿಯ ಕೆಲವು ಭಕ್ತರು ಆಷಾಢದ ವಾರಿಗಾಗಿ

ಪಂಢಪುರಕ್ಕೆ ಹೊರಟರು. ಜಡಿಮಳೆ ಹೃದಗಾವಿ ತಾಲ್ಲುಕಿನ ಕರೋಡಿ ಊರಿನಲ್ಲಿ ಈ ಮಂಡಳಿ ಬಂದಿತ್ತು. ಇಲ್ಲಿ ನದಿದಾಟುವ ತಾಣ, ಈ ಭಾಗದಲ್ಲಿ ಪೂರ್ಣಾನದಿಯಿದೆ. ಸತತ ಮಳೆಯಿಂದ ನದಿಗೆ ಮಹಾಪೂರ ಬಂದಿತ್ತು. ನದಿ ದಾಟುವ ತಾಣಕ್ಕೆ ಮಂಡಳಿ ಬಂದು ತಲುಪಿದರು. ಮಳೆಯಿಂದಾಗಿ ನೀರು ಪ್ರಚಂಡವಾಗಿತ್ತು. ಅಲ್ಲಿ ಒಂದು ದೋಣಿ ಜನರನ್ನು ನದಿದಾಟಿಸುತ್ತಿತ್ತು. ಮಂಡಳಿ ನದಿ ದಾಟಲು ದೋಣಿಯಲ್ಲಿ ಕುಳಿತರು. ದೋಣಿ ಆಚೆತೀರಕ್ಕೆ ಹೊರಟಿತು. ನೀರಿನ ಸೆಳೆತ ಇದ್ದೇ ಇತ್ತು, ಅಷ್ಟರಲ್ಲಿ ಆ ದೋಣಿಯ ಕೆಳಗಿನ ಹಲಗೆಗೆ ತೂತಾಯಿತು. ದೋಣಿಯೊಳಗೆ ನೀರು ಬರತೊಡಗಿತ್ತು. ಇನ್ನು ದೋಣಿ ಮುಳುಗಬಹುದು ಎಂದು ಮಂಡಳಿ ಘಾಬರಿಗೊಂಡರು. ಗದ್ದಲ ಶುರು ಆಯಿತು, ಒಬ್ಬ ಧೈರ್ಯವುಳ್ಳ ಭಕ್ತ ಎಲ್ಲರನ್ನು ಉದ್ದೇಶಿ ಗಟ್ಟಿಯಾಗಿ ಹೇಳಿದ - 'ಬಂಧುಗಳೇ ! ಈಗ ನಮ್ಮ ಮೃತ್ಯು ನಿಶ್ಚಿತ, ಘಾಬರಿ ಗೊಂಡು ಭಯಗೊಂಡು ಸಾಯುವುದಕ್ಕಿಂತ ನಾವು ನಮ್ಮ ಸದ್ಗುರುಗಳ ನಾಮಸ್ಮರಣೆ ಮಾಡುತ್ತಾ ಮುಂದಕ್ಕೆ ಹೋಗೋಣ' ಅವನು ಹೇಳಿದುದರಿಂದ ಎಲ್ಲರೂ ''ಜಯ ಶ್ರೀತುಕಾರಾಮ, ಜಯ ಶ್ರೀ ತುಕಾರಾಮ'' ಎಂದು ನಾಮ ಘೋಷ ಪ್ರಾರಂಭಿಸಿದರು. ದೋಣಿ ಅಂಬಿಗನ ಹಿಡಿತದಿಂದ ಹೊರಗಾಯಿತು. ಯಾವಾಗ ಮುಳುಗುವುದು ಎಂಬುದು ತಿಳಿಯದು. ಅಷ್ಟರಲ್ಲಿ ನೀರಿನ ಒಂದು ದೊಡ್ಡ ಅಲೆ ಬಂದು ದೋಣಿ ಮಗುಚಿ ಆಚೆದಡಕ್ಕೆ ತಳ್ಳಿತು. ಹೇಗೋ ದೋಣಿ ದಡ ಮುಟ್ಟಿತು. ತೀರದಲ್ಲಿದ್ದ ಜನರ ಸಹಾಯದಿಂದ ಎಲ್ಲ ಮಂಡಳಿ ಸುಖವಾಗಿ ನಾವೆಯಿಂದ ಹೊರಬಂದರು.

ಆಗ ತುಕಾಯಿ ದೇವಿಯ ದೇವಸ್ಥಾನದಲ್ಲಿ ಭಕ್ತರೊಂದಿಗೆ ಕುಳಿತಿದ್ದರು. ಅವರ ಭಕ್ತ ಮಂಡಳಿ ಬದುಕಿತು. ಆದರೆ ತುಕಾಯಿಯ ಮೈಮೇಲಿನ ಬಟ್ಟೆ ನೆಂದು ಹೋಗಿದ್ದವು.



-: ಎಂಟು :-

# ಶ್ರೀ ಬ್ರಹ್ಮಚೈತನ್ಯ

ಶ್ರೀ ಮಹಾರಾಜರಿಗೆ ಸದ್ಗುರು ತುಕಾಯಿಯವರ ಭೆಟ್ಟಿಯಾಯಿತು. ತುಕಾಯಿಯವರು ಈ ತನ್ನ ಶಿಷ್ಯನನ್ನು ತಮ್ಮ ಕುಟಿಗೆ ಕೈ ಹಿಡಿದುಕೊಂಡು ಹೋದರು. ಅನಂತರ ಶ್ರೀ ಮಹಾರಾಜರು ಹೆಚ್ಚು ಕಡಿಮೆ ಒಂಭತ್ತು ತಿಂಗಳು ಗುರುಗಳ ಅಹೋರಾತ್ರ ಹಸಿವು, ತೃಷೆ ಮರೆತು ಸೇವೆ ಮಾಡಿದರು. ತುಕಾಯಿಯ ಮೊದಲು ಏಳುವುದು, ಸ್ವಂತದ ಸ್ನಾನ ಇತ್ಯಾದಿ ಪೂರೈಸಿ, ಗುರುಗಳು ಎದ್ದ ಮೇಲೆ ಕೇವಲ ಅವರ ಸೇವೆ, ರಾತ್ರೆ ಗುರುಗಳು ಶಯ್ಯೆಯಲ್ಲಿ ಮಲಗಿದಾಗ ಅವರ ಪಾದಸೇವೆ ಮಾಡುವುದು, ಅವರಿಗೆ ನಿದ್ದೆ ಬಂದಾಗ ಅವರ ಚರಣಗಳ ಬಳಿ ಕುಳಿತಿರುವುದು, ಕುಳಿತು ಬಂದಷ್ಟೇ ನಿದ್ದೆ. ದಿನವಿಡೀ ಗುರುಗಳ ಸೇವೆಯಲ್ಲಿ, ಮನೆಯ ಎಲ್ಲ ಕೆಲಸ ತಾವಾಗಿಯೇ ಪ್ರೇಮದಿಂದ ಮಾಡುವುದು, ಗುರುಗಳು ಕುಳಿತುಕೊಂಡರೆ ಅವರ ಕಾಲ್ಬುಡದಲ್ಲಿ ಕುಳಿತಿರುವುದು, ಅವರು ನಡೆಯ ತೊಡಗಿದರೆ ಅವರ ಹಿಂದೆ ನಡೆಯುವುದು, ಓಡ ತೊಡಗಿದರೆ ಹಿಂದಿನಿಂದ ಓಡುವುದು. ಅವರು ವಿಶ್ರಾಂತಿ ಪಡೆದಾಗ ಬೀಸಣಿಗೆಯಿಂದ ಗಾಳಿ ಬೀಸುವುದು. ತುಕಾಯಿ ಕೆಲವೊಮ್ಮೆ ಎರಡೆರಡು ದಿನ ಹೊರಗೆ ಅಲೆಯುತ್ತಿದ್ದರು, ಮನೆಗೇ ಬರುತ್ತಿರಲಿಲ್ಲ. ಹೊರಗೆ ಹೊಲದಲ್ಲಿ ನಿಂತುಕೊಂಡೇ ಉಳ್ಳಾಗಡ್ಡಿ-ರೊಟ್ಟಿ ತಿನ್ನುತ್ತಿದ್ದರು. ಶ್ರೀಮಹಾರಾಜರು ಕೂಡಲೇ ಅವರಿಗೆ ನೀರು ತಂದುಕೊಡುತ್ತಿದ್ದರು. ಹೀಗೆ ಸೇವೆಯಲ್ಲಿ ಮಹಾರಾಜರಿಗೆ ಅನೇಕ ಸಲ ಉಪವಾಸ ಆಗುತ್ತಿತ್ತು . ಆದರೆ ಅವರು ಅದರ ವಿಚಾರವನ್ನು ಮಾಡಲಿಲ್ಲ; ಸದ್ಗುರುಗಳ ಸೇವೆಯಲ್ಲಿ ಧನ್ಯತೆ ಅನಿಸುತ್ತಿತ್ತು .

ಶ್ರೀ ಮಹಾರಾಜರು ಬೆಳಗಿನ ಝೂವ ನದಿಯಿಂದ ಕೊಡದಲ್ಲಿ ನೀರು ತಂದು, ನೀರು ಕಾಯಿಸಿ ತುಕಾಯಿಯವರಿಗೆ ಸ್ನಾನ ಮಾಡಿಸುತ್ತಿದ್ದರು. ಅಡಿಗೆ ಬಡಿಸುವುದು, ಎಂಜಲುಗೋಮ, ಹೀಗೆ ಎಲ್ಲ ಕೆಲಸಗಳನ್ನು ಪ್ರೇಮದಿಂದ ನಿಷ್ಠೆಯಿಂದ ಮಾಡುತ್ತಿದ್ದರು. ಬಾಲವೃತ್ತಿಯುಳ್ಳ ತುಕಾಯಿಯವರು ಅನಿರ್ಬಂಧಿತರಾಗಿದ್ದರು.

ಅವರು ಮಹಾರಾಜರನ್ನು ಕೆಲವೊಮ್ಮೆ ಪ್ರೇಮದಿಂದ ಹತ್ತಿರ ಮಾಡಿಕೊಂಡರೆ, ಕೆಲವೊಮ್ಮೆ ಗದರಿಸಿ ದೂರವಿರಿಸುತ್ತಿದ್ದರು. ಕೆಲವೊಮ್ಮೆ ಅವರನ್ನು ಹೊಗಳಿದರೆ, ಕೆಲವೆಮ್ಮೆ ನಿಂದಿಸುತ್ತಿದ್ದರು. ಕೆಲವೊಮ್ಮೆ ಯಾವುದಾದರೂ ಆಜ್ಞೆ ಮಾಡಿದರೆ, ಸ್ವಲ್ಪ ಹೊತ್ತಿನಲ್ಲೇ ಅದರ ವಿರುದ್ಧ ಆಜ್ಞಾಪಿಸುತ್ತಿದ್ದರು. ಕೆಲವೊಮ್ಮೆ ಕೈಗೆ ಸಿಕ್ಕಿದುದರಿಂದ ಮಹಾರಾಜರನ್ನು ಬಡಿಯುತ್ತಿದ್ದರು. ಕೆಲವೊಮ್ಮೆ ಪ್ರೇಮದಿಂದ ಮುದ್ದಿಸುತ್ತಾ ಬೆನ್ನು ಸವರುತ್ತಿದ್ದರು. ಶ್ರೀಮಹಾರಾಜರ ಚಿತ್ತ ಸದ್ಗುರುವಿನೊಂದಿಗೆ ಒಂದಾಗಿ ಹೋಗಿತ್ತು. ಸದ್ಗುರುಗಳಿಗೆ ಯಾವಾಗ ಏನು ಬೇಕೆಂದು ಅರಿಯುತ್ತಿದ್ದು, ಅವರು ಆಜ್ಞಾಪಿಸುವ ಮೊದಲೇ ಅವರು ಒದಗಿಸುತ್ತಿದ್ದರು.

ಹೀಗೆಯೇ ಒಮ್ಮೆ ತುಕಾಯಿಯವರು ಒಂದು ಹೊಲಕ್ಕೆ ಬಂದು, ಒಂದು ಆಲದ ಮರದ ಕೆಳಗೆ ಕುಳಿತುಕೊಂಡರು. ಜೊತೆಗೆ ಮಹಾರಾಜರು ಇದ್ದೇ ಇದ್ದರು. ತುಕಾಯಿಯವರು ಶಿಷ್ಯನಿಗೆ ಈ ಮರದ ಎಲೆಗಳನ್ನು ಕೀಳು ಎಂದು ಆಜ್ಞಾಪಿಸಿದರು. ಶ್ರೀ ಮಹಾರಾಜರು ಕೂಡಲೇ ಆಜ್ಞೆ ಪಾಲಿಸಿದರು. ಮರಹತ್ತಿ ಎಲೆ ಕೀಳತೊಡಗಿದರು. ತುಕಾಯಿಯವರು ಒಂದೆರಡು ಎಲೆ ಎತ್ತಿಕೊಂಡರು, ಅದರಿಂದ ಹಾಲಿನಂತೆ ಮೇಣ ತೊಟ್ಟುಗಳಿಂದ ತೊಟ್ಟಿಕ್ಕುತ್ತಿತ್ತು . ಇದನ್ನು ನೋಡಿ ಶಿಷ್ಯನಿಗೆ ಹೇಳಿದರು – ಅಪ್ಪಾ! ನೋಡಿಲ್ಲಿ, ಈ ಎಲೆಗಳಿಗೆ ಎಷ್ಟು ವೇದನೆ ಆಗುತ್ತಿದೆ? ಇದರಿಂದ ಹಾಲು ಒಸರುತ್ತಿದೆ. ಮರಕ್ಕೂ ಕಷ್ಟವಾಗಿರಬಹುದು, ಹೋಗು ಈ ಕಿತ್ತ ಎಲೆಗಳನ್ನು ಪುನಃ ಅಲ್ಲೇ ಅಂಟಿಸಿ ಬಿಡು. ಈ ಆಜ್ಞೆಯಾದರೋ ಅತರ್ಕ್ಯ , ಅಶಕ್ಯವಾಗಿತ್ತು . ಆದರೆ ಮಹಾರಾಜರು ಪೂರ್ಣ ನಿರ್ವಿಕಲ್ಪ ಮತ್ತು ನಿಃಶಂಕ ಮನಸ್ಸಿನಿಂದ ಒಂದೊಂದು ಎಲೆಯನ್ನು ಎತ್ತಿ ಅದೇ ಜಾಗಕ್ಕೆ ಅಂಟಿಸಿದರು, ಆ ಎಲೆಗಳು ಕಿತ್ತೇ ಇಲ್ಲವೋ ಹಾಗೇ ಅಂಟಿಕೊಂಡವು. ನೋಡು ನೋಡುತ್ತಾ ಕಿತ್ತಿರುವ ಎಲ್ಲ ಎಲೆಗಳು ಮರಕ್ಕೆ ಅಂಟಿಸಿದರು. ತುಕಾಯಿಯವರು ಮಹಾರಾಜರನ್ನು ಪ್ರೇಮದಿಂದ ಅಪ್ಪಿಕೊಂಡು, ಬೆನ್ನು ಸವರಿದರು.

ಒಮ್ಮೆ ಗುರುಶಿಷ್ಯರು ಸ್ನಾನಕ್ಕಾಗಿ ನದಿಗೆ ಹೋಗಿದ್ದರು. ಸದ್ಗುರುಗಳು ಶಿಷ್ಯನಿಗೆ ಆಜ್ಞಾಪಿಸಿದರು – ಮಗು ! 'ಈ ಆಳವಾದ ನೀರಿಗೆ ಹಾರು; ಶಿಷ್ಯನು ಆಜ್ಞೆಯನ್ನು ಶಿರಸಾವಹಿಸಿ ಹಾರಿದನು. ಗುರುಗಳು ಹಾರಲು ಹೇಳಿದ್ದರು, ಪುನಃ ಮೇಲೆ ಬರಲು ಆಜ್ಞೆ ಇರಲಿಲ್ಲ. ಅದರಿಂದ ಮಹಾರಾಜರು ತಳದಲ್ಲಿ ಹಾಗೆಯೇ ಕುಳಿತಿದ್ದರು. ಶಿಷ್ಯನು ಮೇಲಕ್ಕೆ ಬಾರದಿದ್ದಾಗ, ನದೀತೀರದಲ್ಲಿ ತುಕಾಯಿಯವರು ಗದ್ದಲ ಎಬ್ಬಿಸಿದರು, ಮಗು ಮುಳುಗಿತು, ನನ್ನ ಮಗು ಮುಳುಗಿತು ! ಯಾರ ಮಗುವೋ ತಿಳಿಯದು ! ಏನು ಮಾಡಿದೆ ನಾನು ! ನನಗೆ ಪಾಪತಟ್ಟಿತು. ತುಕಾಯಿಯವರು ಬೊಬ್ಬೆ ಹಾಕಿದರು. ಗಟ್ಟಿಯಾಗಿ ಅಳತೊಡಗಿದರು. ಜನರು ಸೇರಿದರು, ತುಕಾಯಿಯವರನ್ನು ಸಮಾಧಾನ

ಪಡಿಸಿದರು. ಹೀಗೆ ಎರಡು ಘಂಟೆ ಗಲಾಟೆ ನಡೆಯಿತು. ಕೊನೆಗೆ ತುಕಾಯಿ ಕೂಗಿದರು – ಮಗು ! ಈಗ ನೀನು ಹೊರಗೆ ಬಾರದಿದ್ದರೆ ಈ ನದಿಯಲ್ಲಿ ಹಾರಿ ಪ್ರಾಣ ಬಿಡುವೆನು. ತತ್‌ಕ್ಷಣ ಮಹಾರಾಜರು ಮೇಲಕ್ಕೆ ಬಂದರು. ನದಿಯಿಂದ ತೀರಕ್ಕೆ ಬಂದು ಅವರು ತುಕಾಯಿಯವರ ಕಾಲಿಗೆರಗಿದರು, ತುಕಾಯಿಯವರು ಮಹಾರಾಜರನ್ನು ದೃಢವಾಗಿ ಆಲಿಂಗಿಸಿದರು.

ತುಕಾಯಿ ಮತ್ತು ಮಹಾರಾಜರು ಒಮ್ಮೆ ನಡೆಯುತ್ತಾ, ನಡೆಯುತ್ತಾ ಊರ ಹೊರಗೆ ಹೋದರು. ಸದ್ಗುರುಗಳಿದ್ದಲ್ಲಿ ಮಹಾರಾಜರು, ಊರ ಹೊರಗೆ ಎರಡು ಮೂರು ಮೈಲಿ ಬಂದರು. ಒಂದು ಕಬ್ಬಿನ ಗದ್ದೆ ಸಿಕ್ಕಿತು. ತುಕಾಯಿ ಅಲ್ಲಿಗೆ ಹೋಗಿ ಕುಳಿತರು. ಪಕ್ಕದಲ್ಲೇ ಮಹಾರಾಜರು ಕೈ ಮುಗಿದು ನಿಂತಿದ್ದರು. ಗದ್ದೆ ಒಡೆಯ ರೈತ ಅಲ್ಲಿ ಕೆಲಸ ಮಾಡುತ್ತಿದ್ದ. ತನ್ನ ಗದ್ದೆಗೆ ಸಾಕ್ಷಾತ್ ತುಕಾಯಿ ಬಂದಿದ್ದಾರೆ ಎಂದು ತಿಳಿದು ಅವನಿಗೆ ಅತಿಶಯ ಆನಂದವಾಯಿತು. ಅವನು ತುಕಾಯಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಒಳ್ಳೆಯ ಇಪ್ಪತ್ತು–ಇಪ್ಪತ್ತೈದು ಜಲ್ಲೆ ಮುರಿದು ತುಕಾಯಿಯ ಮುಂದೆ ತಂದಿರಿಸಿದನು. ತುಕಾಯಿಯವರು ಅದನ್ನು ಕಟ್ಟು ಎಂದು ಆಜ್ಞಾಪಿಸಿದರು. ಇಬ್ಬರು ಹೇಗೋ ಎತ್ತಿ ಆ ಹೊರೆಯನ್ನು ಮಹಾರಾಜರ ತಲೆಯ ಮೇಲಿಟ್ಟರು. ತುಕಾಯಿಯವರು ಅಲ್ಲಿಂದ ಊರಿನ ಕಡೆಗೆ ಹೊರಟರು. ಮೊದಲು ನಡೆಯುತ್ತಿದ್ದರು, ಬಳಿಕ ಓಡ ತೊಡಗಿದರು. ಅಷ್ಟು ಭಾರದ ಹೊರೆಯನ್ನು ಹೊತ್ತುಕೊಂಡು ಮಹಾರಾಜರು ಓಡುತ್ತಾ ಹೋದರು. ಕೊನೆಗೆ ಇಬ್ಬರೂ ಊರಿಗೆ ಬಂದರು. ತುಕಾಯಿಯವರು ಹೊರೆ ನೆಲಕ್ಕೆ ಇಡಲು ಹೇಳಿದರು. ಹೊರೆ ಬಿಚ್ಚಿ ತುಕಾಯಿ ಎಲ್ಲ ಕಬ್ಬುಗಳನ್ನು ಅತ್ತ–ಇತ್ತ ಎಸೆದು ಬಿಟ್ಟರು. ಬಳಿಕ ಊರಜನರು ಆ ಕಬ್ಬುಗಳನ್ನು ಪ್ರಸಾದವೆಂದು ಮನೆಗೆ ಕೊಂಡು ಹೋದರು.

ನಿಜವಾಗಿ ಮಹಾರಾಜರ ಗುರು ಸೇವೆ ಯಾರಿಗಾದರೂ ಆಶ್ಚರ್ಯ ಚಕಿತರಾಗಿಸುತ್ತಿತ್ತು. ಊಟ ಮಾಡುವಾಗ ತುತ್ತು ಮುಖದ ಕಡೆಗೆ ಎತ್ತಿದಾಗ ಗುರುಗಳು ಕರೆದರೆ, ತುತ್ತು ಅಲ್ಲೇ ಬಿಟ್ಟು ಗುರುಗಳ ಕಡೆಗೆ ಓಡುತ್ತಿದ್ದರು. ಸದ್ಗುರು ಯಾವ ಆಜ್ಞೆ ಕೊಡುತ್ತಾರೋ, ಆ ಆಜ್ಞೆ ಯೋಗ್ಯವೋ ಅಯೋಗ್ಯವೋ? ಸುಸಂಗತವೋ, ವಿಸಂಗತವೋ? ಇಂತಹ ಯಾವ ಪ್ರಶ್ನೆಯೂ ಮಹರಾಜರ ಮನಸ್ಸಿಗೇ ಬಂದಿಲ್ಲ. ಸದ್ಗುರುಗಳು ತನ್ನಿಂದ ಸೇವೆ ಪಡೆಯುತ್ತಾರೆ ಎಂಬುದರಲ್ಲೇ ಮಹಾರಾಜರು ಧನ್ಯತೆ ತಿಳಿಯುತ್ತಿದ್ದರು. ಸದ್ಗುರುಗಳ ಮೇಲೆ ಅವರ ಶ್ರದ್ಧೆ ಅಪರಂಪಾರ ಇತ್ತು, ಇದರಲ್ಲಿ ವಿಕಲ್ಪ ಹಾಗೂ ಸಾಶಂಕತೆ ಕೊಂಚವೂ ಇರಲಿಲ್ಲ.

ತುಕಾಯಿ ಮತ್ತು ಮಹಾರಾಜರು ಒಮ್ಮೆ ಬೆಳಿಗ್ಗೆ 10 ಗಂಟೆ ಸುಮಾರಿಗೆ ನದೀತೀರಕ್ಕೆ ಬಂದರು. ನದೀತೀರದ ಮರಳಿನಲ್ಲಿ ಮೂರು ಮಕ್ಕಳು ಆಡುತ್ತಿದ್ದವು. ತುಕಾಯಿಯವರು ಮಹಾರಾಜರಿಗೆ ಆಜ್ಞಾಪಿಸಿದರು – ಮಗು ! ಇಲ್ಲೊಂದು ದೊಡ್ಡ ಹೊಂಡೆ ಅಗೆ. ಮಹಾರಾಜರು ಕೆಲಸ ಪ್ರಾರಂಭಿಸಿದರು. ನೋಡು ನೋಡುತ್ತಾ ಅವರು ಒಂದು ಆಳವಾದ ಹೊಂಡ ಅಗೆದರು. ಹೊಂಡ ಅಗೆದು ಶ್ರೀಮಹಾರಾಜರು ಕೈ ಮುಗಿದು ಮುಂದಿನ ಆಜ್ಞೆಗಾಗಿ ಕಾಯುತ್ತಿದ್ದರು. ತುಕಾಯಿಯವರು ಆ ಮೂರು ಮಕ್ಕಳನ್ನು ಹೊಂಡದ ಬಳಿಗೆ ಕರೆತಂದರು. ಅವರು ಆ ಮೂರು ಮಕ್ಕಳನ್ನು ಹೊಂಡಕ್ಕೆ ತಳ್ಳಿದರು. ಅವರ ಮೇಲೆ ಮರಳು ಮಣ್ಣು ಹಾಕಿ ಮುಚ್ಚಿದರು ಹಾಗೂ ಶಿಷ್ಯನಿಗೆ ಆಜ್ಞಾಪಿಸಿದರು– ''ಇಲ್ಲಿ ಸಿದ್ಧಾಸನದಲ್ಲಿ ಕುಳಿತುಕೋ, ಇಲ್ಲಿಂದ ಕದಲಬಾರದು, ಯಾವುದೇ ಪರಿಸ್ಥಿತಿಯಲ್ಲಿ ಆಸನ ಬಿಡಬಾರದು, ಯಾರು ಏನು ಕೇಳಿದರೂ ಮಾತಾಡಬೇಡ, ಒಂದು ಶಬ್ದವನ್ನೂ ಉಚ್ಚರಿಸಬೇಡ'' ಆಜ್ಞೆಯಂತೆ ಮಹಾರಾಜರು ಆ ಹೊಂಡದ ಮೇಲೆ ಸಿದ್ಧಾಸನದಲ್ಲಿ ಕುಳಿತರು ಮತ್ತು ತುಕಾಯಿ ದೂರ ಹೋಗಿ ಒಂದು ಮರದ ಕೆಳಗೆ ಕುಳಿತರು.

ಒಂದು ಗಂಟೆ ಕಳೆಯಿತು, ತುಕಾಯಿ ಆ ಮರದ ಕೆಳಗೆ ಮತ್ತು ಮಹಾರಾಜರು ಆ ಮಣ್ಣಿನ ರಾಶಿಯ ಮೇಲೆ, ಅರ್ಧ ಗಂಟೆಯ ಬಳಿಕ ಆ ಮಕ್ಕಳನ್ನು ಹುಡುಕುತ್ತಾ ಅವರ ತಂದೆ–ತಾಯಿಯವರು ಬಂದರು. ಅವರು ಸುತ್ತಲೂ ತುಂಬಾ ಅಡ್ಡಾಡಿದರು, ಸಿದ್ಧಾಸನದಲ್ಲಿ ಕುಳಿತ ಮಹಾರಾಜರನ್ನು ಕೇಳಿದರು. ಅವರ ಯಾವುದೇ ಪ್ರತಿಕ್ರಿಯೆ ಇಲ್ಲ. ತುಂಬಾ ಗಾಬರಿಗೊಂಡು ಕೊನೆಗೆ ಮರದ ಕೆಳಗೆ ಕುಳಿತಿರುವ ತುಕಾಯಿಯವರ ಕಡೆಗೆ ಗಮನ ಹರಿಸಿ, ಓಡುತ್ತಾ ಅವರ ಬಳಿಗೆ ಹೋಗಿ ತುಕಾಯಿಯವರನ್ನು ವಂದಿಸಿ ತಮ್ಮ ಮಕ್ಕಳ ಕುರಿತು ವಿಚಾರಿಸಿದರು. ತುಕಾಯಿ ಹೇಳಿದರು – ''ಆ ಮಣ್ಣಿನ ರಾಶಿಯ ಮೇಲೆ ಕುಳಿತಿರುವ ಬುವಾರವನ್ನ ಕೇಳಿ. ಅವರು ಹೇಳದಿದ್ದರೆ ಚೆನ್ನಾಗಿ ಬಡಿಯಿರಿ. ಅವನೇ ನಿಮ್ಮ ಮಕ್ಕಳ ಘಾತ ಮಾಡಿರುವನು'' ಆ ಜನರು ಪುನಃ ಮಹಾರಾಜರ ಬಳಿಗೆ ಬಂದರು. ಅವರನ್ನು ಪುನಃ ಕೇಳ ತೊಡಗಿದರು. ಇತರ ಮಂದಿಯೂ ಸೇರಿದರು. ಏಟು ತಿಂದರೂ ಏನನ್ನೂ ಮಾತನಾಡಲಿಲ್ಲ. ಕೊನೆಗೆ ತುಕಾಯಿ ಅಲ್ಲಿಗೆ ಬಂದು ಹೇಳಿದರು– ಇವನನ್ನು ಪಕ್ಕಕ್ಕೆ ಎಳೆಯೆರಿ, ಇವನು ನಿಮ್ಮ ಮಕ್ಕಳನ್ನು ಮಣ್ಣಿನ ಅಡಿಯಲ್ಲಿ ಹೂತಿಟ್ಟಿದ್ದಾನೆ ಮತ್ತು ಅವನು ಮೇಲೆ ಕುಳಿತಿರುವನು. ಮಕ್ಕಳ ಪಾಲಕರು ಮಹಾರಾಜರನ್ನು ಪಕ್ಕಕ್ಕೆ ಎಳೆದರು. ಮಣ್ಣಿನ ರಾಶಿಯನ್ನು ಶೋಧಿಸಿದರೆ ನಿಜವಾಗಿ ಮಣ್ಣಿನ ರಾಶಿ ಕೆಳಗೆ ಮಕ್ಕಳಿದ್ದರು. ಅವು ನಿಶ್ಚೇಷ್ಟರಾಗಿ ಸತ್ತಂತೇ ಇದ್ದವು. ಸಿಟ್ಟು ನೆತ್ತಿಗೇರಿತು, ಎಲ್ಲರೂ ಮಹಾರಾಜರನ್ನು ಹೊಡೆಯಲು, ಅವರನ್ನು ಬೈಯುತ್ತಾ ಅವರ

ಮೈಮೇಲೆ ಎರಗಿದರು. ಈಗ ಮಾತ್ರ ತುಕಾಯಿಯವರು ಅಡ್ಡ ಬಂದು ಜನರಿಗೆ ಹೇಳಿದರು - ಇವನನ್ನು ಏಕೆ ಸುಮ್ಮನೆ ಹೊಡೆಯುವಿರಿ? ಸ್ವಲ್ಪ ನಿಮ್ಮ ಮಕ್ಕಳ ಕಡೆಗೆ ನೋಡಿರಿ; ಅವಕ್ಕೆ ಏನೂ ಆಗಲಿಲ್ಲ. ಪಾಲಕರು ಹಿಂತಿರುಗಿ ನೋಡಿದರೆ ಮಕ್ಕಳು ನಗುತ್ತಾ ಓಡಿ ಬಂದರು. ತಮ್ಮ ಅಪ್ಪ - ಅಮ್ಮನವರನ್ನು ಆನಂದದಿಂದ ಕೂಡಿಕೊಂಡರು.

ಎಲ್ಲ ತಂದೆ-ತಾಯಿಯರು ವಿಸ್ಮಯ ಚಕಿತರಾದರು. ಅವರು ಮಹಾರಾಜರ ಚರಣದಲ್ಲಿ ವಂದಿಸಿದರು. ಪುನಃ ಪುನಃ ಕ್ಷಮೆ ಕೇಳಿದರು. ಶಾಂತ, ದಯಾಸಾಗರ, ಕ್ಷಮಾಮೂರ್ತಿ ಮಹಾರಾಜರಿಗೆ ಈ ತಂದೆ-ತಾಯಿಯರ ಮೇಲೆ ಸಿಟ್ಟು ಇರಲೇ ಇಲ್ಲ. ಎಲ್ಲರೂ ತಮ್ಮ ತಮ್ಮ ದಾರಿ ಹಿಡಿದರು. ನನ್ನ ಶಿಷ್ಯತ್ವ ಸ್ವೀಕರಿಸಲಿಕ್ಕಾಗಿ ಮನೆ ಬಿಟ್ಟು ಇಷ್ಟು ದೂರ ಬಂದೆ, ನಿನ್ನ ವಯಸ್ಸಾದರೂ ಎಷ್ಟಿದೆ? ತುಕಾಯಿಯವರು ಮಹಾರಾಜರನ್ನು ಅಪ್ಪಿಕೊಂಡರು, ಅವರ ಕಣ್ಣುಗಳಿಂದ ಆನಂದಾಶ್ರು ಹರಿದವು. ತುಕಾಯಿ ಹೇಳಿದರು - ''ನಾನು ನಿನಗೆ ಎಷ್ಟು ಕಷ್ಟ ಕೊಟ್ಟೆ, ಇವತ್ತಾದರೋ ಚಾಂಡಾಲ ನಾನು ನಿನಗೆ ಬೇರೆಯವರಿಂದ ಹೊಡೆಸಿದೆ, ನಿನ್ನ ನಿಷ್ಠೆ ದೃಢವಾಗಿದೆ, ಶ್ರದ್ಧೆ ಅಪಾರವಾಗಿದೆ, ಸಂಯಮ ಕಲ್ಪನಾತೀತವಾಗಿದೆ, ನಿನ್ನ ಬಳಿ ಸೇವಾ ವೃತ್ತಿ ವ್ಯಾಪಿಸಿದೆ, ನಿನ್ನ ಭಕ್ತಿ ಭಾವ ನಿರ್ಮಲ ಮತ್ತು ನಿರಪೇಕ್ಷವಾಗಿದೆ, ಪರಮಾತ್ಮನು ಇದರ ಮಧುರ ಫಲ ನಿನಗೆ ಕೊಡುವನು.''

ನಿಜವಾಗಿ ಮಹಾರಾಜರು ವಿದೇಹೀಯಾಗಿದ್ದರು, ತಮ್ಮ ತಂದೆ - ತಾಯಿ, ತನ್ನ ಊರು, ತಮ್ಮ ಸಂಗಡಿಗರು ಯಾರ ನೆನಪೂ ಅವರಿಗೆ ಆಗಲಿಲ್ಲ. ಈ ಒಂಭತ್ತು ತಿಂಗಳಲ್ಲಿ ಗುರುಸೇವೆ ಒಂದೇ ಧ್ಯೇಯ. ಈ ವಿದೇಹ ಸ್ಥಿತಿಯಲ್ಲಿ ಹಸಿವು, ಬಾಯಾರಿಕೆ, ನಿದ್ದೆ, ಕ್ಲೇಶ ಹೀಗೆ ಯಾವುದೇ ಅರಿವು ಅವರಿಗೆ ತಟ್ಟಲಿಲ್ಲ. ಈ ಗುರು ಸೇವೆಯಿಂದ ಮೂಲತಃ ತೇಜೋಮಯರಾದ ಮಹಾರಾಜರು ಹೆಚ್ಚಿನ ದಿವ್ಯ ತೇಜದಿಂದ ಪರಿಪೂರ್ಣರಾದರು. ಶ್ರೀರಾಮ ನವಮಿ ಬಂತು ತುಕಾಯಿಯವರು ತಮ್ಮ ಇತರ ಎಲ್ಲ ಶಿಷ್ಯರನ್ನು ರಾಮಜನ್ಮೋತ್ಸವಕ್ಕಾಗಿ ಉಮರಖೇಡಕ್ಕೆ ಕಳಿಸಿದರು. ಈಗ ಉಳಿದರು ಸದ್ಗುರು ತುಕಾಯಿ ಮತ್ತು ಶಿಷ್ಯೋತ್ತಮ ಮಹಾರಾಜರು. ಇಬ್ಬರೂ ಸೇರಿ ಒಂದು ಕಾಡಿಗೆ ಹೋದರು. ಸೂರ್ಯ ನೆತ್ತಿಯ ಮೇಲೆ ಬಂದಿದ್ದ, ಪ್ರಭು ರಾಮಚಂದ್ರನ ಜನ್ಮವಾದ ಸಮಯ. ಕಾಡಿನ ಬಾವಿಯಯಲ್ಲಿ ತುಕಾಯಿ ಮತ್ತು ಮಹಾರಾಜರು ಸ್ನಾನ ಮಾಡಿದರು. ಸ್ನಾನದ ಬಳಿಕ ತುಕಾಯಿಯವರು ಮಹಾರಾಜರನ್ನು ಒಂದು ಅಶೋಕ ವೃಕ್ಷದ ಕೆಳಗೆ ತಮ್ಮೆದುರಿಗೆ ಕುಳ್ಳಿರಿಸಿಕೊಂಡರು, ಅತಿಶಯ ಸೌಮ್ಯ ಮತ್ತು ವತ್ಸಲ ಸ್ವರದಲ್ಲಿ ಗುರುಗಳು ಗಂಭೀರ ವಾಣಿಯಿಂದ ವ್ಯಕ್ತರಾದರು - ಮಗು! ನನ್ನಿಂದಾಗಿ

ನಿನಗೆ ತುಂಬಾ-ತುಂಬಾ ಕಷ್ಟ ಸಹಿಸ ಬೇಕಾಯಿತು, ನಾನು ನಿನಗೆ ಬಹಳ ಕಷ್ಟ ಕೊಟ್ಟೆ. ಇಂದು ಮಹರ್ಷಿ ವಸಿಷ್ಠರು ಪ್ರಭು ರಾಮಚಂದ್ರನಿಗೆ ಪ್ರದಾನ ಮಾಡಿದುದನ್ನೇ ನಾನು ನಿನಗೆ ಕೊಡುವವನಿದ್ದೇನೆ. ಅವರು ಮಹಾರಾಜರ ಮಸ್ತಕದ ಮೇಲೆ ತಮ್ಮ ಕರವನ್ನಿಟ್ಟರು. ಗುರುಕೃಪೆಯಿಂದ ಮಹಾರಾಜರಿಗೆ ಸಮಾಧಿ ಹತ್ತಿತು, ಬಹಳ ಹೊತ್ತಿನ ಬಳಿಕ ಆ ಸಮಾಧಿ ಇಳಿಯಿತು. ಶ್ರೀಮಹಾರಾಜರು ತುಕಾಯಿಯವರ ಚರಣಗಳಲ್ಲಿ ಕೃತಜ್ಞಭಾವದಿಂದ ತನ್ನ ಮಸ್ತಕವನ್ನು ಇಟ್ಟರು. ತುಕಾಯಿ ಅವರನ್ನು ಎಬ್ಬಿಸಿ ಆಲಿಂಗಿಸಿಕೊಂಡರು. ತುಕಾಯಿ ಹೇಳಿದರು - ''ಮಗು! ಇಂದು ನಿನಗೆ ನಾನು ದೀಕ್ಷೆ ಕೊಡುತ್ತಿದ್ದೇನೆ. ಸಮರ್ಥ ಶ್ರೀರಾಮದಾಸ ಸ್ವಾಮಿಗಳ ಭಕ್ತಿಮಾರ್ಗವನ್ನು ನೀನು ವಿಸ್ತರಿಸಬೇಕು, 'ಶ್ರೀರಾಮ ಜಯ ರಾಮ ಜಯ ಜಯ ರಾಮ' ಈ ತ್ರಯೋದಶಾಕ್ಷರೀ ಮಂತ್ರದ ಜಪ ನೀನು ಮಾಡಬೇಕು. ಈ ರಾಮದಾಸೀ ಪಂಥದ ಮಾರ್ಗಕ್ರಮಣ ಮಾಡುವಾಗ ಪ್ರಪಂಚದ ಕರ್ತವ್ಯ ಮರೆಯಬೇಡ. ಪ್ರಪಂಚವನ್ನು ಪರಮಾರ್ಥವನ್ನಾಗಿಸು. ಪ್ರಪಂಚ ಮಾಡುತ್ತಿರುವಾಗ ನಾಮಸ್ಮರಣದ ಮಾರ್ಗದಿಂದ ಈಶಸಾಕ್ಷಿತ್ವ ಹೇಗೆ ಕಾಪಾಡಬೇಕೆಂಬುದರ ಮಾರ್ಗದರ್ಶನ ಎಲ್ಲ ಶ್ರದ್ಧೆಯುಳ್ಳ ಭಕ್ತರಿಗೆ ಸ್ವತಃ ವರ್ತನೆಯಿಂದ ಮಾಡು. ಈಶ್ವರ ಭಕ್ತಿ ಪ್ರಪಂಚ ಮಾಡುವಾಗ ಆಗುತ್ತದೆ ಎಂದು ಜನರಿಗೆ ತಿಳಿಸಿ ಹೇಳು. ರಾಮನ ಮಂದಿರ ಕಟ್ಟು, ರಾಮೋಪಾಸನೆ ಬೆಳೆಸು, ದೀನ-ದುರ್ಬಲರಿಗೆ ಸಹಾಯ ಹಸ್ತ ನೀಡು. ಭೇದಾಭೇದ ಮುಗಿಸಿ ರಾಮೋಪಾಸನೆಯ ಮಾರ್ಗಕ್ಕೆ ಬರುವ ಭಕ್ತರನ್ನು ಕರೆದು ತಾ. ಅದಕ್ಕಾಗಿ ಇಂದು ನಾನು ನಿಗನೆ ಭಕ್ತರಿಗೆ ಅನುಗ್ರಹ (ಉಪದೇಶ) ಮಾಡುವ ಅಧಿಕಾರ ಕೊಡುತ್ತಿದ್ದೇನೆ. ಇಂದಿನಿಂದ ನೀನು 'ಬ್ರಹ್ಮಚೈತನ್ಯ' ಆಗಿರುವೆ.'' ಮಹಾರಾಜರು ಸದ್ಗುರುಗಳ ಚರಣಗಳಲ್ಲಿ ವಿನಮ್ರವಾಗಿ ಶಿರ ಚಾಚಿದರು. ಅವರ ಕಣ್ಣುಗಳಿಂದ ಆನಂದಾಶ್ರು ಹರಿಯುತ್ತಿದ್ದವು.

□□

- : ಒಂಭತ್ತು : -

# ಶ್ರೀ ಮಹಾರಾಜರ ತೀರ್ಥಾಟನೆ

ಸದ್ಗುರುಗಳು ಶಿಷ್ಯೋತ್ತಮನಿಗಾಗಿ ಅನುಗ್ರಹ ಮಾಡಿದರು. ಉಪದೇಶ ಕೊಡುವ ಅಧಿಕಾರವನ್ನೂ ಕೊಟ್ಟರು. ಶಿಷ್ಯೋತ್ತಮ ಧನ್ಯನಾದನು. ಆತ್ಮಜ್ಞಾನದ ಸಾಕ್ಷಾತ್ಕಾರವಾದ ಬ್ರಹ್ಮಚೈತನ್ಯರು ಕೆಲವು ಕಾಲ ಯೆಹಳೆ ಊರಿನಲ್ಲಿ ತುಕಾಯಿಯವರ ಬಳಿ ನಿಂತರು. ತುಕಾಯಿಯವರು ವಿಚಾರ ಮಾಡಿದರು - ಇನ್ನು ಈ ಶಿಷ್ಯೋತ್ತಮನನ್ನು ತನ್ನ ಬಳಿ ಇಟ್ಟುಕೊಳ್ಳುವುದು ಯೋಗ್ಯವಲ್ಲ. ಮೂಲತಃ ಸಿದ್ಧನಾದ ಇಂತಹ ಈ ಬ್ರಹ್ಮಚೈತನ್ಯನಿಗೆ ಏಕಾಂತದ ಅವಶ್ಯಕತೆ ತುಂಬಾ ಇದೆ. ಏಕಾಂತದಲ್ಲಿ ಆತ್ಮಚಿಂತನ ಚೆನ್ನಾಗಿ ಸಾಧಿಸುತ್ತದೆ. ಆತ್ಮ ಚಿಂತನೆಯ ಜೊತೆಗೆ ದೇಶಾಟನ, ದೇಶದ ತೀರ್ಥಕ್ಷೇತ್ರ ದರ್ಶನ, ಈಶದರ್ಶನ ಈ ಎಲ್ಲ ಅನುಭೂತಿ ಅವರ ಪ್ರಗಲ್ಭ ಮನೋವಸ್ಥೆಯಲ್ಲಿ ಅವನಿಗೆ ಹೆಚ್ಚು ಸಮೃದ್ಧ ಗೊಳಿಸೀತು. ವಿಚಾರ ಮಾಡಿ ತುಕಾಯಿಯವರು ಶಿಷ್ಯೋತ್ತಮನಿಗೆ ಆಜ್ಞೆ ಮಾಡಿದರು, ಆಜ್ಞೆಯನ್ನು ಪ್ರಮಾಣವೆಂದು ತಿಳಿದು ಮಹಾರಾಜರು ಪ್ರಸ್ಥಾನ ಸಿದ್ಧತೆ ಮಾಡಿದರು.

ಸದ್ಗುರುಗಳ ಚರಣಗಳಲ್ಲಿ ಮಹಾರಾಜರು ಮಸ್ತಕವನ್ನಿಟ್ಟರು, ಇನ್ನು ತಾನು ಈ ಗುರುಗಳಿಂದ ದೂರ ಹೋಗುವೆನು, ಒಂಭತ್ತು ತಿಂಗಳ ಸಹವಾಸ, ಮಹಾರಾಜರ ನೇತ್ರಗಳಿಂದ ಅಶ್ರುಧಾರೆ ಹರಿಯುತ್ತಿದ್ದವು. ಸದ್ಗುರುಗಳು ತನ್ನ ಶಿಷ್ಯನಿಗೆ ಪ್ರೇಮಾಲಿಂಗನ ನೀಡಿದರು. ಅವರಿಗೆ ಸ್ನೇಹದಿಂದ ಹೇಳಿದರು - ಮಗು ! ಮೊದಲಿಗೆ ನೀನು ನಗಾಧಿರಾಜ ಹಿಮಾಲಯಕ್ಕೆ ಹೋಗು. ಅಲ್ಲಿ ನಿನಗೆ ಏಕಾಂತ ಲಭಿಸೀತು. ಬಳಿಕ ನೀನು ತೀರ್ಥಾಟನೆ ಮಾಡಿ ತನ್ನ ಮನೆಗೆ ಹೋಗು. ನಿನ್ನ ತಂದೆ - ತಾಯಿ, ಇಡೀ ಕುಟುಂಬ ನಿನ್ನ ಪ್ರತೀಕ್ಷೆಯಲ್ಲಿದ್ದಾರೆ. ಶ್ರೀ ಮಹಾರಾಜರು ಗುರು ಆಜ್ಞೆಯಂತೆ ಹೊರಟರು. ಸ್ವತಃ ತುಕಾಯಿಯವರು ಅವರನ್ನು ಉಮರಖೇಡದವರೆಗೆ ಕಳಿಸಲು ಹೋದರು. ತುಕಾಮಾಯಿಯರ ಗುರು ಚಿನ್ಮಯಾನಂದ ಸ್ವಾಮಿಗಳ ಸಮಾಧಿಯ

ದರ್ಶನ ಪಡೆಯಲು ಅವರು ಹೋದರು. ಇವರಿಬ್ಬರ ಜೊತೆಗೆ ಗೋಚರಸ್ವಾಮಿಗಳೂ ಇದ್ದರು, ಮೂವರೂ ಸಮಾಧಿ ದರ್ಶನ ಪಡೆದರು. ತುಕಾಯಿ ಮತ್ತು ಮಹಾರಾಜರು ಸಮಾಧಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಆಗ ಸಮಾಧಿಯ ಮೇಲಿನ ಹಾರ ಮಹಾರಾಜರ ಮೈಮೇಲೆ ಬಿತ್ತು . ಅನುಕೂಲ ಪ್ರಸಾದ ಪ್ರಾಪ್ತವಾಯಿತು. ಸದ್ಗುರುಗಳನ್ನು ಬೀಳ್ಕೊಂಡು ಮಹಾರಾಜರು ಹೊರಟರು.

ಉಜ್ಜೈನ ಹತ್ತಿರದ ದೊಡ್ಡ ಅರಣ್ಯದಲ್ಲಿ ಏಕಾಂತ ವಾಸಕ್ಕಾಗಿ ಉತ್ತಮ ಜಾಗವಿತ್ತು . ಅಲ್ಲಿಗೆ ಮಹಾರಾಜರು ಬಂದರು. ದಟ್ಟವಾದ ಕಾಡು, ಹಿಂಸ ಪಶುಗಳಿದ್ದ ಆ ಅರಣ್ಯದಲ್ಲಿ ಒಂದು ಗುಹೆ ಇತ್ತು . ಆ ಗುಹೆಯಲ್ಲಿ ಸಾಧನೆ ಮಾಡಲು ಮಹಾರಾಜರು ಉಳಿದರು. ಎರಡು ದಿನಗಳ ಬಳಿಕ ಯಾವುದೋ ಒಂದು ಆಕಳು ಗುಹಾದ್ವಾರಕ್ಕೆ ಬಂತು, ಅದು ಅಲ್ಲಿ ಬಹಳ ಹೊತ್ತು ನಿಂತಿತ್ತು , ಶ್ರೀ ಮಹಾರಾಜರ ದೃಷ್ಟಿ ಅದರ ಕಡೆಗೆ ಹೋದಾಕ್ಷಣ ಅದು ಅಂಬಾ ಎಂದಿತು. ಹಾಲು ಸುರಿಯ ತೊಡಗಿತು. ಹತ್ತಿರ ಪಾತ್ರೆ ಇರಲಿಲ್ಲ. ಅದರ ಕೆಚ್ಚಲಿಗೆ ಬಾಯಿ ಇಟ್ಟು ಮಹಾರಾಜರು ಹಾಲು ಕುಡಿದರು. ಮಹಾರಾಜರು ಆ ಗುಹೆಯಲ್ಲಿ ಇರುವ ತನಕ ಆ ಗೋಮಾತೆ ಬೆಳಿಗ್ಗೆ – ಸಂಜೆ ಅವರಿಗೆ ಹಾಲು ಕುಡಿಸಿ ಹೋಗುತ್ತಿತ್ತು . ಕೆಲವು ಕಾಲ ಉಳಿದ ಬಳಿಕ ಮಹಾರಾಜರು ಅಲ್ಲಿಂದ ಹೊರಟು ನೈಮಿಷಾರಣ್ಯಕ್ಕೆ ಬಂದರು. ನೈಮಿಷಾರಣ್ಯದಲ್ಲಿ ಅವರು ಹಿಂದೆ ವಾಸ ಮಾಡಿದ ಗುಹೆಯಲ್ಲೇ ಉಳಕೊಂಡರು. ಅಲ್ಲಿ ಹಿಂದಿನಂತೆ ಆರು ಯೋಗಿಗಳು ವಾಸವಾಗಿದ್ದರು. ಆ ಯೋಗಿಗಳಲ್ಲಿ ಆಳಂದಿಯ ಶ್ರೀ ನರಸಿಂಹ ಸರಸ್ವತಿ ಸ್ವಾಮಿ ಮಹಾರಾಜರಿದ್ದರು.

1858–59ರ ಸಮಯ. ಹಿಂದೂ ಸೇನೆಗಳು ಪರಾಭವಗೊಂಡಿತ್ತು . ಶ್ರೀಮಂತ ನಾನಾಸಾಹೇಬ ಪೇಶವೆಯವರು ಹಿಂದುಸ್ಥಾನ ಬಿಟ್ಟರು. ನೇಪಾಳದ ರಾಜರ ಸಮ್ಮತಿಯಿಂದ ಅವರು ನೇಪಾಳಕ್ಕೆ ಹೋದರು. ಮುಂದೆ ಆಂಗ್ಲರು ಅವರ ಮೇಲೆ ಒತ್ತಡ ತಂದಾಗ, ಅವರು ಅಜ್ಞಾತವಾಸಕ್ಕಾಗಿ ನೈಮಿಷಾರಣ್ಯಕ್ಕೆ ಬಂದರು. ಬ್ರಹ್ಮಚೈತನ್ಯರು ವಾಸವಾಗಿದ್ದ ಗುಹೆಯ ಹತ್ತಿರದಲ್ಲಿ ಇದ್ದ ಒಂದು ದೊಡ್ಡ ಗುಹೆಯಲ್ಲಿ ಅವರು ಗುಪ್ತವಾಗಿ ಇರುತ್ತಿದ್ದರು. ಅವರ ಜೊತೆಗೆ ರಾಘೋಬಾ ಎಂಬ ವಿಶ್ವಾಸಿ ಆಳು ಹಾಗೂ ಇನ್ನು ಇಬ್ಬರು ಆಳುಗಳು ಅವರ ಸೇವೆಗಾಗಿ ಇದ್ದರು. ಅವರ ಬಳಿ ಚಿನ್ನ–ಬೆಳ್ಳಿ, ಮುತ್ತು–ರತ್ನಗಳು, ಧನ ಇತ್ತು . ಆ ಗುಹೆಯಲ್ಲಿ ಅವರು ತನಗೆ ಬೇಕಾದ ಹಾಗೆ ವ್ಯವಸ್ಥೆ ಮಾಡಿಕೊಂಡಿದ್ದರು. ಮಂಚ, ಉಯ್ಯಾಲೆ, ಆಸನಗಳು ಎಲ್ಲವನ್ನೂ ಮಾಡಿಕೊಂಡಿದ್ದರು. ಅವರ ಆಳುಗಳು ಪ್ರತಿವಾರ ಅಯೋಧ್ಯೆಯ ಪೇಟೆಗೆ ಹೋಗಿ

ಆಹಾರ ಪದಾರ್ಥ ತರುತ್ತಿದ್ದರು. ಪುಣೆಯಲ್ಲಿ ಕೇಸರಿ ಎಂಬ ವೃತ್ತಪತ್ರ ಪ್ರಾರಂಭವಾಯಿತು, ಅದನ್ನೂ ಆಳುಗಳು ಖರೀದಿಸಿ ತರುತ್ತಿದ್ದರು. ಸೊಂಟದಲ್ಲಿ ಲಂಗೋಟಿ, ಕಾಲಲ್ಲಿ ಬೆಳ್ಳಿಯ ಹಾವುಗೆ, ಕೊರಳಲ್ಲಿ ರುದ್ರಾಕ್ಷಿ ಮಾಲೆ, ಗಡ್ಡ-ಮೀಸೆ ಬೆಳೆದಿರುವ ಶ್ರೀಮಂತ ನಾನಾಸಾಹೇಬ ಪೇಶವೆ ಕೇಸರಿಯನ್ನು ಉತ್ಸುಕತೆಯಿಂದ ಓದುತ್ತಿದ್ದರು. ಪ್ರತಿವರ್ಷ ಅವರು ಪಶುಪತಿನಾಥನ ದರ್ಶನಕ್ಕೆ ಹೋಗುತ್ತಿದ್ದರು. ಆಗ ಅವರು ತಮ್ಮ ಕುಟುಂಬದ ಸದಸ್ಯರನ್ನು ಭೆಟ್ಟಿಯಾಗಿ ಬರುತ್ತಿದ್ದರು. ಮುಂದೆ ಅದೂ ನಿಂತು ಹೋಯಿತು. ಸ್ವಾತಂತ್ರ್ಯ ಸಮರದಲ್ಲಿ ಆದ ಪರಾಭವದಿಂದ ಅವರು ಅತಿಶಯ ಉದಾಸ ಮತ್ತು ಖಿನ್ನರಾಗಿದ್ದರು.

ಶ್ರೀ ಮಹಾರಾಜರ ಮತ್ತು ನಾನಾಸಾಹೇಬರ ಭೆಟ್ಟಿಯಾಯಿತು. ನಾನಾ ಸಾಹೇಬರ ಮುಂದೆ ಶ್ರೀ ಮಹಾರಾಜರು, ಅವರ ತೇಜದಿಂದ ನಾನಾ ಸಾಹೇಬರು ಪ್ರಭಾವಿತರಾದರು. ಅವರು ತನ್ನ ಮನಸ್ಸಿನ ದುಗುಡ ತಿಳಿಸಿ ಪಡಿಸಿದರು. ಪಾರತಂತ್ರ್ಯದ ವಿಷಯದಲ್ಲಿ ಉದ್ವೇಗ ಪ್ರಕಟಿಸಿದರು. ಶ್ರೀ ಮಹಾರಾಜರು ಅವರಲ್ಲಿ ಹೇಳಿದರು - ''ಇಂದು ನಮ್ಮ ಭಾರತಮಾತೆ ಪಾರತಂತ್ರ್ಯದಲ್ಲಿದೆ. ಅನೇಕ ಪರಕೀಯ ಆಕ್ರಮಣಕಾರರು ನಮ್ಮ ಈ ದೇಶದ ಮೇಲೆ ಆಕ್ರಮಣ ಮಾಡಿದರು. ಆಕೆಯ ಅನೇಕ ಪುತ್ರರು ಹುತಾತ್ಮರಾದರು, ತಾವೂ ಅಕಥ ಪ್ರಯತ್ನ ಮಾಡಿದಿರಿ. ದುರ್ದೈವದಿಂದ ಅಪಯಶ ಬಂತು, ನಿರಾಶರಾಗಬೇಡಿ, ನೀವು ಶಕ್ಯವಿದ್ದಷ್ಟು ಮಾಡಿದಿರಿ. ನಮ್ಮ ಭಾರತ ಮಾತೆಯ ಉದರದಲ್ಲಿ ಒಬ್ಬರಿಗಿಂತ ಒಬ್ಬರು ತೇಜಸ್ವೀ ನರರತ್ನ ಹುಟ್ಟಿ ಬರುವರು, ಮಾತೆಯನ್ನು ಮುಕ್ತ ಗೊಳಿಸುವರು. ನೀವು ಚಿಂತಾಮುಕ್ತರಾಗಿರಿ. ಇದು ದೇವಭೂಮಿಯಾಗಿದೆ. ಆಕೆಯನ್ನು ಆಕೆಯ ತೇಜಸ್ವೀ ಪುತ್ರರು ಬೇಗನೇ ಬಂಧಮುಕ್ತಗೊಳಿಸುವರು. ನೀವು ಮಾತ್ರ ಇನ್ನು ನಿಮ್ಮ ಜೀವನ ನಾಮಸ್ಮರಣೆಯಲ್ಲಿ, ಉಪಾಸನೆಯಲ್ಲಿ ಕಳೆಯಬೇಕು. ಅದರಿಂದ ನಿಮಗೆ ಮನಃಶಾಂತಿ ಲಭಿಸಿತು. ಕ್ರಿ.ಶ. 1860 ರಿಂದ 1906ರ ವರೆಗೆ ಶ್ರೀ ಮಹಾರಾಜರು ನಾನಾಸಾಹೇಬರಿಗೆ ಭೇಟಿ ಮಾಡುತ್ತಿದ್ದರು. ನಾನಾ ಸಾಹೇಬರು ಈ ಸಮಯವನ್ನು ನಾಮಸ್ಮರಣ, ಜ್ಞಾನೇಶ್ವರೀ, ದಾಸಬೋಧ ವಾಚನ, ಚಿಂತನ ಮನನದಲ್ಲೇ ಕಳೆದರು.

ಶ್ರೀ ಮಹಾರಾಜರು ನೈಮಿಷಾರಣ್ಯದಿಂದ ಅಯೋಧ್ಯೆಗೆ ಬಂದರು. ರಾಮಶಾಸ್ತ್ರೀ ಎಂಬ ಓರ್ವ ಗೃಹಸ್ಥರು ಮಹಾರಾಜರನ್ನು ಭೆಟ್ಟಿಯಾದರು. ಅವರು ಸಕುಟುಂಬ ಕಾಶಿಯಾತ್ರೆಗೆ ಹೊರಟಿತ್ತು . ರಾಮಶಾಸ್ತ್ರಿಗಳು ವೇದಾಭ್ಯಾಸಕರಾಗಿದ್ದರು. ಶ್ರೀ ಮಹಾರಾಜರ ಉಪಾಸನೆ ಮತ್ತು ಸತತ ನಾಮಸ್ಮರಣವನ್ನು ಅವರು ನೋಡುತ್ತಿದ್ದರು.

ಶ್ರೀಮಹಾರಾಜರು ಇತರರಿಗೂ ರಾಮನಾಮ ಜಪಿಸಲು ಹೇಳುತ್ತಿದ್ದರು. ಸ್ವತಃ ತನ್ನನ್ನು ವೈದಿಕರೆಂದು ತಿಳಿಯುವ ರಾಮಶಾಸ್ತ್ರೀ ಮಹಾರಾಜರಲ್ಲಿ ಹೇಳಿದರು – ನೀವು ಸ್ವತಃ ನಾಮಸ್ಮರಣೆಯ ಭ್ರಮೆಯಲ್ಲಿದ್ದೀರಿ, ಇತರರನ್ನು ನೀವು ಆ ಭ್ರಮೆಯಲ್ಲಿ ತಳ್ಳುತ್ತಿದ್ದೀರಿ. ಮಹಾರಾಜರು ಸೌಮ್ಯ ಸ್ವರದಲ್ಲಿ ಹೇಳಿದರು – ''ನನಗೆ ನಾಮಸ್ಮರಣೆಯ ಭ್ರಮೆಯಾಗಿದೆ ಇದು ಸರಿಯೆ, ಆದರೆ ನಾನು ಪ್ರಪಂಚ ಭ್ರಮೆಯಲ್ಲಿ ಇಲ್ಲ. ಇರಲಿ, ನನ್ನ ರಾಮನು ನನಗಾದರೂ ಈ ಭ್ರಮೆಯಿಂದ ಹೊರಗೆ ತೆಗೆಯುವನು, ಇಲ್ಲವೇ ನಿಮ್ಮ ಭ್ರಮೆಯನ್ನಾದರೂ ದೂರಗೊಳಿಸುವನು.''

ಅಂದು ಸಂಜೆ ರಾಮಶಾಸ್ತ್ರೀ ಪತ್ನೀಯೊಂದಿಗೆ ಗಂಗಾತೀರದಲ್ಲಿ ಅಡ್ಡಾಡುತ್ತಾ ಹೋದರು. ಅಲ್ಲಿ ಅವರು ಗರಬುಜ ತಿಂದರು. ರಾತ್ರೆ ಹನ್ನೊಂದು ಗಂಟೆಗೆ ಶಾಸ್ತ್ರಿಗಳ ಪತ್ನೀಯವರಿಗೆ ಭೇದಿ ಶುರು ಆಯಿತು. ಎಂಟತ್ತು ಬಾರಿ ಭೇದಿಯಾದಾಗ ಅವರ ಪತ್ನಿಯ ನಾಲಿಗೆ ಬಿದ್ದು ಹೋಯಿತು. ರಾತ್ರಿಯ ಸಮಯವಿದ್ದರೂ ಶಾಸ್ತ್ರಿಗಳು ವೈದ್ಯರನ್ನು ಕರೆಸಿದರು, ಔಷಧೋಪಚಾರ ಮಾಡಿದರು. ಹೊತ್ತು ಕಳೆದಂತೆ ಪರಿಸ್ಥಿತಿ ಬಿಗಡಾಯಿಸಿತು, ಶಾಸ್ತ್ರಿಗಳು ಗಾಬರಿಗೊಂಡರು. ''ರಾಮನಾಮದಿಂದ ಭವರೋಗ ಇಲ್ಲವಾಗುತ್ತದೆ ಎಂದಾಗ ಅದರಿಂದ ದೇಹದ ರೋಗ ವಾಸಿಯಾಗಲಾರದೆ?'' ಈ ಮಹಾರಾಜರ ಉಕ್ತಿಯ ಸ್ಮರಣೆಯಾಯಿತು. ಅವರು ತಮ್ಮ ಪತ್ನಿಯ ಬಳಿಗೆ ಹೋಗಿ ಕುಳಿತುಕೊಂಡು, ಕಣ್ಣು ಮುಚ್ಚಿ ರಾಮನಾಮ ಜಪಿಸತೊಡಗಿದರು. ಸ್ವಲ್ಪ ಹೊತ್ತಿನಲ್ಲೇ ಪತ್ನೀಯ ಹೊಟ್ಟನೋವು ನಿಂತಿತು, ಭೇದಿಯೂ ನಿಂತಿತು, ಅವಳಿಗೆ ಶಾಂತನಿದ್ದೆ ಹತ್ತಿತು. ಬೆಳಗಾದಾಗ ಪತ್ನೀ ಪೂರ್ಣ ಹುಷಾರಾದಳು. ಬೆಳಿಗ್ಗೆ ಸ್ನಾನಾದಿ ಮುಗಿಸಿ ಇಬ್ಬರೂ ಶ್ರೀಮಹಾರಾಜರ ಕಡೆಗೆ ಬಂದರು. ಬಂದವರೇ ಇಬ್ಬರೂ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಮಹಾರಾಜರು ಇಬ್ಬರನ್ನೂ ಎಬ್ಬಿಸಿದರು. ಶಾಸ್ತ್ರೀಗಳು ರಾತ್ರಿಯ ಎಲ್ಲ ಪ್ರಕರಣವನ್ನು ತಿಳಿಸಿದರು ಮತ್ತು ಹೇಳಿದರು – ಮಹಾರಾಜ! ನಾನು ತಪ್ಪಿದೆ, ನನ್ನ ಭ್ರಮೆ ನಿರಸನವಾಯಿತು. ನಾನು ನಿಮ್ಮಲ್ಲಿ ತುಂಬಾ ವಾದ ಮಾಡಿದೆ, ನಾನು ನಿಮ್ಮ ಅಪರಾಧಿಯಾಗಿದ್ದೇನೆ. ಮಹಾರಾಜರು ಅವರನ್ನು ಕುಳ್ಳಿರಿಸಿಕೊಂಡರು. ಆಗಲೇ ಊರಿನ ಜನರು ಮಹಾರಾಜರಲ್ಲಿಗೆ ಬಂದಿದ್ದರು. ಶ್ರೀ ಮಹಾರಾಜರು ಅವರೊಡನೆ ಮಾತನಾಡುತ್ತಿದ್ದರು. ಸ್ವಲ್ಪ ಹೊತ್ತಿನಲ್ಲಿ ಮಾತು ಮುಗಿದಾಗ, ರಾಮಶಾಸ್ತ್ರಿಗಳು ನಮ್ಮೊಂದಿಗೆ ಕಾಶಿಗೆ ಬರಲು ಮಹಾರಾಜರನ್ನು ವಿನಂತಿಸಿಕೊಂಡರು. ಅವರ ಮಕ್ಕಳು ಕಾಶಿಯಲ್ಲಿ ಇದ್ದರು ಅವರ ವಿನಂತಿಯನ್ನು ಒಪ್ಪಿ ಶ್ರೀ ಮಹಾರಾಜರು ಕಾಶಿಯಲ್ಲಿ ಅವರ ಮನೆಯಲ್ಲಿ ತಂಗಿದರು. ಮಹಾರಾಜರ ಜೊತೆಗೆ ಯಾವಾಗಲೂ

ಐದು ಹತ್ತು ಜನರು ಇರುತ್ತಿದ್ದರು. ವಾಸ್ತವ್ಯಕ್ಕಾಗಿ ಪ್ರಾಪಂಚಿಕರ ಮನೆ ಯೋಗ್ಯವಲ್ಲ ಎಂದು ತಿಳಿದು ಮಹಾರಾಜರು ಅಲ್ಲಿಂದ ತಮ್ಮ ಮುಕ್ಕಾಮನ್ನು ಬದಲಿಸಿ, ಜೊತೆಯವರೊಂದಿಗೆ ಒಂದು ರಾಮಮಂದಿರಕ್ಕೆ ಹೋದರು.

ಕಾಶಿಯ ಮಣಿಕರ್ಣಿಕಾ ಘಾಟ್‌ನ ಪ್ರಸಂಗ – ಒಂದು ಧನಸಂಪನ್ನ ವ್ಯಾಪಾರಿಯ ಶವವನ್ನು ಅಂತ್ಯ ಸಂಸ್ಕಾರಕ್ಕಾಗಿ ತಂದಿದ್ದರು. ವ್ಯಾಪಾರಿಯು ತರುಣನಾಗಿದ್ದು, ಮೂವತ್ತು ವರ್ಷದ ಈ ವ್ಯಾಪಾರಿಯ ತಂದೆ-ತಾಯಿ, ಅಜ್ಜ-ಅಜ್ಜಿ, ತಮ್ಮ, ತಂಗಿ ಹೀಗೆ ಪರಿವಾರ ವಿಸ್ತೃತವಾಗಿತ್ತು . ಈ ದಾನಶೂರ ವ್ಯಾಪಾರಿಯು ಭಾರೀ ದಾನಧರ್ಮ ಮಾಡಿದ್ದನು. ಅವರ ಮನೆಯಲ್ಲಿ ಅನ್ನಛತ್ರವೇ ಇತ್ತು . ಸಾಧು, ಬೈರಾಗಿ, ಯಾತ್ರಿಕರು ಹೀಗೆ ಯಾರೇ ವ್ಯಕ್ತಿ ಅವರ ಬಾಗಿಲಿಗೆ ಹೋದರೆ ಬರಿಹೊಟ್ಟೆಯಲ್ಲಿ, ಬರಿಕೈಯಲ್ಲಿ ಮರಳುತ್ತಿರಲಿಲ್ಲ. ಹೆಚ್ಚು ಕಡಿಮೆ ಐವತ್ತು ಕುಟುಂಬಗಳ ಜೀವನ ಈ ವ್ಯಾಪಾರಿ ನಡೆಸುತ್ತಿದ್ದ. ಅವನ ಅಂತ್ಯ ಸಂಸ್ಕಾರಕ್ಕಾಗಿ ಮಣಿಕರ್ಣಿಕಾ ಘಟ್ಟದಲ್ಲಿ ಭಾರೀ ಜನರು ಸೇರಿದ್ದರು. ಚಿತೆ ರಚಿಸಲಾಯಿತು, ಆ ವ್ಯಾಪಾರಿಯ ಪತ್ನೀ ಸತೀ ಹೋಗಲು ಸಿದ್ಧಳಾದಳು. ಆಕೆಯ ಮನಪರಿವರ್ತನೆ ಮಾಡಲು ಅನೇಕರು ಪ್ರಯತ್ನಿಸಿದರು. ಆದರೆ ಆಕೆಯು ತನ್ನ ನಿರ್ಣಯದಲ್ಲಿ ದೃಢವಾಗಿದ್ದಳು. ಸತೀ ಹೋಗುವ ಮೊದಲು ಅವಳು ಸಾಧು-ಸಂತರಿಗೆ ನಮ್ರಭಾವನೆಯಿಂದ ನಮಸ್ಕರಿಸುತ್ತಿದ್ದಳು. ಆ ಸ್ತ್ರೀಯಳಿಗೆ ರಾಮಶಾಸ್ತ್ರಿಗಳು ಹೇಳಿದರು – ತಾಯಿ! ನೀವು ಸತೀ ಹೋಗುವ ಮೊದಲು ನನ್ನೊಂದಿಗೆ ಇದ್ದ ಮಹಾನ್ ಸಾಧುಗಳಿಗೆ ನಮಸ್ಕರಿಸು. ರಾಮಶಾಸ್ತ್ರಿಗಳೊಂದಿಗೆ ಮಹಾರಾಜರು ಇದ್ದರು. ಆ ಸ್ತ್ರೀಯು ಮಹಾರಾಜರ ಚರಣಗಳಲ್ಲಿ ತಲೆಯನ್ನಿಟ್ಟಳು. ಮಹಾರಾಜರು ಹೇಳಿದರು – ನನಗೆ ಆ ಪುಣ್ಯಾತ್ಮ ಆತ್ಮನನ್ನು ನೋಡಬೇಕಾಗಿದೆ. ಮಹಾರಾಜರು ಆ ಸ್ತ್ರೀಯ ಸಹಿತ ರಾಮಶಾಸ್ತ್ರಿಗಳೊಂದಿಗೆ ಶವದ ಬಳಿಗೆ ಬಂದರು. ಆ ಶವದ ಕಡೆಗೆ ಕೃಪಾದೃಷ್ಟಿಯಿಂದ ನೋಡಿ ಮಹಾರಾಜರು ಹೇಳಿದರು – ಇದು ಜೀವಂತವಾಗಿದೆ, ನೀವು ಸತೀ ಹೇಗೆ ಹೋಗುತ್ತೀರಿ? ಸೇರಿದ ಜನರಿಗೆ ಆಶ್ಚರ್ಯವಾಯಿತು. ಮಹಾರಾಜರು ಹೇಳಿದಂತೆ ಜನರು ಒಂದು ಪಾತ್ರೆಯಲ್ಲಿ ಗಂಗಾಜಲ ತಂದರು. ''ಶ್ರೀರಾಮ, ಶ್ರೀರಾಮ, ಶ್ರೀರಾಮ'' ಎಂದು ನಾಮ ಹೇಳಿ ಮಹಾರಾಜರು ಆ ಮೃತ ಯುವಕನ ಬಾಯಿಯಲ್ಲಿ ಗಂಗಾಜಲ ಹಾಕಿದರು, ನಿದ್ದೆಯಿಂದ ಎಚ್ಚರಗೊಂಡಂತೆ ಆ ದಾನಶೂರ ಯುವಕ ಎದ್ದು ಕುಳಿತ. ಆನಂದವೇ ಆನಂದವಾಯಿತು. ಜನರು ಮಹಾರಾಜರ ಜಯಜಯಕಾರ ಮಾಡಿದರು. ಅವರ ಚರಣದಲ್ಲಿ ಮಸ್ತಕವನ್ನಿಡಲು ಗದ್ದಲವಾಯಿತು. ಮಹಾರಾಜರು ತತ್‌ಕ್ಷಣ ಗಂಗೆಯ ಪ್ರವಾಹದಲ್ಲಿ ಹಾರಿ, ಅಲ್ಲಿಂದ ಕಣ್ಮರೆಯಾದರು.

ಕಾಶಿಯ ಗಂಗಾ ಪ್ರವಾಹದಲ್ಲಿ ಹಾರಿ ಮಹಾರಾಜರು ನೇರವಾಗಿ ಪ್ರಯಾಗದಲ್ಲಿ ಪ್ರಕಟರಾದರು, ಇಪ್ಪತ್ತು ವರ್ಷ ವಯಸ್ಸು, ತೇಜಃಪುಂಜವದನ, ಗಡ್ಡ-ಮೀಸೆ ಬೆಳೆಸಿದವರು. ಪ್ರಯಾಗದಲ್ಲಿ ಕೆಲವು ಬೇರಾಗಿಗಳು ಓರ್ವ ಮಹಂತರ ಶೋಧದಲ್ಲಿ ಇದ್ದರು. ಅವರು ಮಹಾರಾಜರನ್ನ ನೋಡಿ, ಅವರನ್ನೇ ತಮ್ಮ ಮಹಂತರನ್ನಾಗಿಸಿ ಕೊಂಡರು. ಅವರು ಶ್ರೀಮಹಾರಾಜರನ್ನು ತಮ್ಮೊಂದಿಗೆ ಮಥುರಾ-ವೃಂದಾವನದ ಕಡೆಗೆ ಕೊಂಡುಹೋದರು. ಮಹಾರಾಜರ ವಾಸ್ತವ್ಯ ಕಾಶಿಯಲ್ಲಿದ್ದಾಗ ಶ್ರೀ ಮಹಾರಾಜರು ಬಂಗಾಲೀ ಜಮೀನ್ದಾರನಿಗೆ ಪುತ್ರಪ್ರಾಪ್ತಿಯ ಆಶೀರ್ವಾದ ಕೊಟ್ಟಿದ್ದ. ಅವನಿಗೆ ಪುತ್ರ ಪ್ರಾಪ್ತಿಯಾಯಿತು. ಅವನೂ ಕೂಡ ಮಹಾರಾಜರನ್ನು ಹುಡುಕುತ್ತಾ ತಿರುಗುತ್ತಿದ್ದ. ಅವನು ಆ ಶೋಧಕ್ಕಾಗಿ ತಮ್ಮ ಜನರನ್ನು ಬೇರೆ-ಬೇರೆ ಊರುಗಳಿಗೆ ಕಳಿಸಿದ್ದನು. ಅವರಲ್ಲಿ ಒಬ್ಬನು ಮಹಾರಾಜರನ್ನು ಗುರುತಿಸಿದ ಮತ್ತು ಅವರ ಚರಣಕ್ಕೆ ವಂದಿಸಿ ಅವರನ್ನು ಕೋಲಕತ್ತೆಗೆ ಬದಲು ಕಳಕಳಿಯಿಂದ ವಿನಂತಿಸಿದರು. ಶ್ರೀಮಹಾರಾಜರು ತಮ್ಮೊಂದಿಗೆ ಇದ್ದ ಮಂಡಳಿ ಸಹಿತ ಕೋಲಕತ್ತೆಗೆ ಹೋದರು.

ಶ್ರೀಮಹಾರಾಜರ ಆಗಮನದಿಂದ ಆ ಜಮೀನ್ದಾರನ ಆನಂದ ವರ್ಣನಾತೀತವಾಗಿತ್ತು . ಅವನು ತನ್ನ ನವಜಾತ ಪುತ್ರನನ್ನು ಶ್ರೀಮಹಾರಾಜರ ಚರಣಗಳಲ್ಲಿ ತಂದಿಟ್ಟನು. ಜಮೀನ್ದಾರ ಕೈ ಮುಗಿದುಕೊಂಡು ನಮ್ರನಾಗಿ ಹೇಳಿದ - ಮಹಾರಾಜ! ನಿಮ್ಮ ಸೇವೆ ಮಾಡಲು ನಮಗೆ ಮನಃಪೂರ್ವಕ ಇಚ್ಛೆ ಇದೆ. ನೀವು ಆಜ್ಞಾಪಿಸಬೇಕು. ಮಹಾರಾಜರು ಹೇಳಿದರು - ನಾವು ಬೈರಾಗೀ ಜನ, ನಮಗೆ ಯಾವುದರ ಇಚ್ಛೆಯೂ ಇಲ್ಲ. ನೀವೆಲ್ಲರೂ ನಾಮಸ್ಮರಣೆ ಮಾಡಬೇಕು. ಭಗವಂತನನ್ನು ಸ್ಮರಿಸಬೇಕು ಇಷ್ಟೇ ನಮ್ಮ ಇಚ್ಛೆ. ಆದರೆ ಜಮೀನ್ದಾರ ಮತ್ತು ಅವನ ಪತ್ನೀ ಅವರು ಆಗ್ರಹಿಸಿದಾಗ ಶ್ರೀಮಹಾರಾಜರು ಅವರಿಗೆ 'ಹರಿಸತ್ರ' ಮಾಡಲು ಹೇಳಿದರು. ಹರಿಸತ್ರದಲ್ಲಿ ಭಗವಂತನ ಪ್ರಾಪ್ತಿಯ ಏನೇನು ಸಾಧನೆಗಳಿವೆಯೋ ಅವನ್ನು ಒಟ್ಟಿಗೆ ಪ್ರಾರಂಭಿಸಬೇಕು ಮತ್ತು ಅವು ಅಖಂಡ ಏಳುದಿನ ಮಾಡಬೇಕು. ಆ ಸಂಪೂರ್ಣ ಸಪ್ತಾಹ ಅಖಂಡ ಅನ್ನಛತ್ರ ಪ್ರಾರಂಭಿಸಿ ಎಲ್ಲರಿಗೂ ಮುಕ್ತದ್ವಾರ ಇರಬೇಕು. ಹರಿಸತ್ರವು ದೊಡ್ಡ ಜವಾಬ್ದಾರಿಯ ಮತ್ತು ಖರ್ಚಿನದಾಗಿರುತ್ತದೆ. ಆದರೆ ಆ ಜಮೀನ್ದಾರ ಗೃಹಸ್ಥ, ಅವರ ಪತ್ನೀ, ಅವರ ತಾಯಿ ಎಲ್ಲರೂ ಆನಂದದಿಂದ ಒಪ್ಪಿಕೊಂಡರು.

ಕೋಲಕತ್ತೆಯಿಂದ ಎರಡು ಮೈಲಿನಲ್ಲಿ ಒಂದು ದೊಡ್ಡ ಮಂಟಪ ನಿರ್ಮಿಸಿದರು. ಭಾರತ ವರ್ಷದ ಋತ್ವಿಜ, ಶಾಸ್ತ್ರೀ , ಪಂಡಿತ, ಕಲಾಕಾರ ಇವರಿಗೆ ನಿಮಂತ್ರಣ

ಹೋಯಿತು. ಧಾನ್ಯ , ಪಾತ್ರೆಗಳ ತಯಾರಿ ಆಯಿತು. ಯಜಮಾನನು ಹರಿಸತ್ರದ ಮೊದಲದಿನ ಶ್ರೀಮಹಾರಾಜರನ್ನು ಆನೆ ಮೇಲೆ ಮೆರವಣಿಗೆ ಮಾಡಿದರು. ಮಂಡಪದ ಒಂದು ಸುಸಜ್ಜಿತ ಸಿಂಹಾಸನದಲ್ಲಿ ಶ್ರೀಮಹಾರಾಜರನ್ನು ಭಾರೀ ಸನ್ಮಾನದಿಂದ ಕುಳ್ಳಿರಿಸಿದರು. ವೇದಮಂತ್ರಗಳ ಉದ್ಘೋಷದಿಂದ ಹರಿಸತ್ರ ಪ್ರಾರಂಭಗೊಂಡಿತು. ವೇದಘೋಷ, ಯಜ್ಞ, ಜಪ, ಭಜನ, ಕೀರ್ತನ, ಪ್ರವಚನ, ಪುರಾಣವಾಚನ, ನಾಮಸ್ಮರಣ, ಯೋಗಸಾಧನೆ, ಪಂಚಾಗ್ನಿಸಾಧನ, ಶಾಸ್ತ್ರಾಧ್ಯಯನ, ಬ್ರಹ್ಮಕರ್ಮ, ಅನುಷ್ಠಾನ, ದೇವತಾರ್ಚನ, ಸತ್ಸಂಗ, ಗುರುಸೇವೆ, ಮೌನ ಸೇವನ, ವಾಮಮಾರ್ಗ, ತಂತ್ರಕ್ರಿಯೆ ಮುಂತಾದ ಸಾಧನೆಗಳು ಯಥಾಸಾಂಗ ಪ್ರಾರಂಭಗೊಂಡವು. ಇಪ್ಪತ್ತನಾಲ್ಕು ಗಂಟೆ ಅನ್ನ ಛತ್ರ ನಡೆಯುತ್ತಿತ್ತು . ಎಲ್ಲ ಪ್ರಕಾರದ ಜನರು ಭೋಜನ ಪ್ರಸಾದದಿಂದ ತೃಪ್ತರಾಗುತ್ತಿದ್ದರು. ಬಂದವರಿಗೆಲ್ಲ ಈ ಪ್ರಸಾದ ಲಭಿಸುತ್ತಿತ್ತು . ಯಾವುದೇ ಭೇದಭಾವವಿಲ್ಲ. ಪ್ರತಿದಿನ ಪಕ್ವಾನ್ನಗಳು, ಸಾವಿರಾರು ಜನರು ನಿತ್ಯ ಉಂಡು ಹೋಗುತ್ತಿದ್ದರು. ಶ್ರೀಮಹಾರಾಜರು ಸರ್ವ ಹರಿಸತ್ರದ ನಿರೀಕ್ಷಣೆ ಮಾಡುತ್ತಿದ್ದರು. ಮಂಗಲ ಸಮಾರಂಭದಲ್ಲಿ ಯಜಮಾನರು ಶ್ರೀಮಹಾರಾಜರಿಗೆ ಮಹಾವಸ್ತ್ರ ಅರ್ಪಿಸಿದರು ಮತ್ತು ಬೆಳ್ಳಿಯ ಒಂದು ಸಾವಿರ ರೂಪಾಯಿಗಳ ನಾಣ್ಯಗಳನ್ನು ದಕ್ಷಿಣೆಯಾಗಿ ನೀಡಿದರು. ಶ್ರೀಮಹಾರಾಜರು ಆ ಮಹಾವಸ್ತ್ರವನ್ನು ಯಜಮಾನನ ತಾಯಿಗೆ ಕೊಟ್ಟರು ಹಾಗೂ ಬೆಳ್ಳಿಯ ಒಂದು ಸಾವಿರ ರೂಪಾಯಿ ಕಾಶಿಯ ವಿದ್ವಾಂಸ ಪಂಡಿತರಿಗೆ ದಕ್ಷಿಣೆ ಎಂದು ಹಂಚಿದರು.

□□

-: ಹತ್ತು :-

# ಕ್ಷಮಾಶೀಲ ಶ್ರೀಮಹಾರಾಜರು

ಹರಿಸತ್ರವು ಯಥಾಸಾಂಗ ನೆರವೇರಿತು. ಅನಂತರ ಮಹಾರಾಜರು ಆ ಜಮೀಂದಾರನಿಂದ ಬೀಳ್ಕೊಂಡರು. ಶ್ರೀಮಹಾರಾಜರು ಜೊತೆಗಿದ್ದ ಯೋಗೀ, ಬೈರಾಗಿ ಜನರನ್ನು ಅಮರಕಂಟಕಕ್ಕೆ ಕಳಿಸಿದರು, ಅಲ್ಲಿ ಜಾತ್ರೆ ಇತ್ತು . ಹರಿಸತ್ರದ ಬಳಿಕ ಶ್ರೀಮಹಾರಾಜರ ಕೀರ್ತಿ ಹೆಚ್ಚಿತು. ಅವರ ದರ್ಶನಕ್ಕೆ ಅಸಂಖ್ಯ ಭಕ್ತರು ಬರತೊಡಗಿದರು. ಮಹಾರಾಜರು ಉಪಾಧಿಗೆ ವಿರೋಧಿಗಳಾಗಿದ್ದರು. ಅವರು ಒಂದು ರಾತ್ರಿ ಯಾರಿಗೂ ತಿಳಿಸದೆ ಕೊಲಕತ್ತೆಯನ್ನು ಬಿಟ್ಟರು. ಹಂತ-ಹಂತವಾಗಿ ಅವರು ಸಾತಪುಡೆಗೆ ಬಂದರು. ನರ್ಮದಾ ನದಿಯ ತೀರದಲ್ಲೇ ಅವರ ಪ್ರವಾಸ ಪ್ರಾರಂಭವಾಯಿತು. ಈ ಪಾದಯಾತ್ರೆ ನಡೆಯುತ್ತಿದ್ದಾಗ ಅವರಿಗೆ ಒಬ್ಬ ಹುಡುಗ ಭೆಟ್ಟಿಯಾದ. ಈ ಹುಡುಗ ಮನೆಯಿಂದ ಓಡಿ ಬಂದಿದ್ದ. ಅವನನ್ನು ತನ್ನ ಜೊತೆಗಿಸಿಕೊಂಡರು. ಆಗ ಶ್ರೀ ಮಹಾರಾಜರ ಮನೋಸ್ಥಿತಿ ಅತಿಶಯ ಪಾರಲೌಕಿಕವಾಗಿತ್ತು , ನೋಡು ನೋಡುತ್ತಲೇ ಸಮಾಧಿ ಹತ್ತುತ್ತಿತ್ತು, ಶರೀರ ಸ್ಥಿರವಾಗಿತ್ತು, ಚಲನ-ವಲನ ಪೂರ್ಣ ನಿಂತು ಹೋಗುತ್ತಿತ್ತು. ಈ ಹುಡುಗ ಇಂದೋರಿನವನಾಗಿದ್ದ, ಅವನನ್ನು ಅವನ ಮನೆಗೆ ತಲುಪಿಸಲು ಮಹಾರಾಜರು ಇಂದೋರಿಗೆ ಬಂದರು. ಊರ ಹೊರಗೆ ಒಂದು ಹೊಲ ಇದ್ದು, ಅಲ್ಲಿ ದನಗಳು ಮೇಯುತ್ತಿದ್ದವು, ಹತ್ತಿರದಲ್ಲೆ ನೀರಿನ ಸಣ್ಣ ಹೊಂಡ ಇತ್ತು, ಶ್ರೀಮಹಾರಾಜರು ವಿಶ್ರಾಂತಿಗಾಗಿ ಆ ಹುಡುಗನ ಸಹಿತ ಕುಳಿತುಬಿಟ್ಟರು. ಶ್ರೀಮಹಾರಾಜರಿಗೆ ಸಮಾಧಿ ಹತ್ತಿತು, ಹುಡುಗ ಸಂಧಿಸಾಧಿಸಿ ಅಲ್ಲಿಂದ ಓಡಿ ಹೋದ.

ಶ್ರೀಮಹಾರಾಜರು ಬಹಳ ಹೊತ್ತು ಸಮಾಧಿ ಸ್ಥಿತಿಯಲ್ಲೇ ಇದ್ದರು. ಸಂಜೆಯಾಯಿತು, ಆ ದಾರಿಯಿಂದ ಓರ್ವ ಹಾಲುಮಾರುವವ ಹೋಗುತ್ತಿದ್ದ, ಅವನು ಮಹಾರಾಜರ ತೇಜಸ್ವೀ ಮೂರ್ತಿ ನೋಡಿ, ಅವನು ಅವರಿಗೆ ಸ್ನಾನ ಮಾಡಿಸಿ, ಹತ್ತಿರದ

ಮಾರುತಿಯ ಮಂದಿರದಲ್ಲಿ ಎತ್ತಿ ತಂದನು. ಹನುಮಂತನ ದರ್ಶನಕ್ಕಾಗಿ ಜನರು ಬಂದು ಹೋಗುತ್ತಿದ್ದರು. ಓರ್ವ ಶ್ರೀಮಂತ ಇನಾಮದಾರ ದರ್ಶನಕ್ಕಾಗಿ ಬಂದಿದ್ದರು, ಅವರ ಅದು ನಿತ್ಯಕ್ರಮವಾಗಿತ್ತು, ಸಂಜೆ ಅಡ್ಡಾಡಲು ಹೋಗುವುದು, ಮಾರುತಿಯ ದರ್ಶನ ಪಡೆಯುವುದು, ಬಳಿಕ ಮನೆಗೆ ಮರಳುವುದು, ಮನೆಯ ಸುತ್ತಲೂ ಸುಂದರ ತೋಟವಿತ್ತು, ಅಲ್ಲಿ ಶಾಂತವಾಗಿ ಕುಳಿತುಕೊಳ್ಳುವುದು ಹೀಗೆ ಅವರ ದಿನಚರಿ ಇತ್ತು . ಆ ದಿನ ಅವರು ಸಮಾಧಿಸ್ಥಿತಿಯಲ್ಲಿದ್ದ ತೇಜಃಪುಂಜ ಮಹಾರಾಜರನ್ನು ನೋಡಿದರು. ಈ ಸಮಾಧಿಯಿಂದ ಎಚ್ಚರಗೊಂಡರು, ಇನಾಮದಾರರು ಅವರಿಗೆ ವಂದಿಸಿ ಅತಿಶಯ ನಮ್ರವಾಗಿ ಹೇಳಿದರು – ''ತಾವು ನಮ್ಮ ತೋಟದಲ್ಲಿ ನಿವಾಸ ಮಾಡಬೇಕು ಎಂದು ನನ್ನ ಮನಃಪೂರ್ವಕ ವಿನಂತಿ.'' ಶ್ರೀಮಹಾರಾಜರು ಇನಾಮದಾರನ ತೋಟದಲ್ಲಿ ಉಳಿಕೊಳ್ಳಲು ಹೋದರು. ಅಲ್ಲಿ ಒಬ್ಬ ಗವಳಿ ಬೆಳಿಗ್ಗೆ ಸಾಯಂಕಾಲ ಎರಡೂ ಹೊತ್ತು ಧಾರೋಷ್ಣ ಹಾಲನ್ನು ತರುತ್ತಿದ್ದ. ಪ್ರತಿದಿನ ಜಾತಾ ಹಾಲನ್ನು ಶ್ರೀಮಹಾರಾಜರಿಗೆ ಭಕ್ತಿಭಾವದಿಂದ ಕುಡಿಯಲು ಕೊಡುತ್ತಿದ್ದನು. ಶ್ರೀಮಹಾರಾಜರ ಇಂದೋರನಲ್ಲಿ ಆದ ಶಿಷ್ಯರಲ್ಲಿ ಇವನು ಮೊದಲ ಶಿಷ್ಯನಾದನು.

ಶ್ರೀಮಹಾರಾಜರು ಇನಾಮದಾರನ ತೋಟದಲ್ಲಿ ವಾಸಿಸುತ್ತಿದ್ದಾಗಲೂ ಅವರು ತಮ್ಮ ಸಾಧನೆ ಬಿಡಲಿಲ್ಲ. ದಿನದಿಂದ ದಿನಕ್ಕೆ ತಪೋ ತೇಜ ಹೆಚ್ಚುತ್ತಲೇ ಹೋಯಿತು. ಒಂದು ದಿನ ಇನಾಮದಾರರು ತನ್ನ ಪತ್ನಿಗೆ ಹೇಳಿದರು – ನಮ್ಮ ತೋಟದಲ್ಲಿ ಓರ್ವ ತೇಜಸ್ವೀ ಮತ್ತು ಸಾತ್ವಿಕ ಸತ್ಪುರುಷರು ಬಂದು ಉಳಕೊಂಡಿದ್ದಾರೆ. ಅವರ ದರ್ಶನದಿಂದಲಾದರೋ ನನಗೆ ಆತ್ಮಿಕ ಸಮಾಧಾನ ದೊರೆಯುತ್ತಿದೆ. ನೀವೂ ದರ್ಶನ ಮಾಡಿ ಬನ್ನಿ . ಜೀಜಾಬಾಯಿ ಅವರ ಪತ್ನಿಯ ಹೆಸರಾಗಿತ್ತು . ಇವಳು ಯಾವಾಗಲೂ ಸಿಟ್ಟಿನ ಸ್ವಭಾವದವಳು, ಮನೆಯ ಆಳುಗಳು, ಬಂದು ಹೋಗುವವರು ಆಕೆಗೆ ಹೆದರುತ್ತಿದ್ದರು. ಅವಳು ಯಾರಿಗೆ ಏನು ಹೇಳುವಳೆಂದು ಹೇಳಲಾಗುತ್ತಿರಲಿಲ್ಲ. ಅವಳು ತನ್ನ ಪತಿಗೆ ಹೇಳಿದಳು – ಈ ಸಾಧುಗಳನ್ನು ಇಲ್ಲಿಗೆ ತಂದು ಏಕೆ ಇಟ್ಟಿರುವಿರಿ? ಈ ಸಾಧುಮಹಾರಾಜರು ಬಹಳ ಕಪಟಿಗಳಾಗಿರುತ್ತಾರೆ, ಒಳಗೊಂದು, ಹೊರಗೆ ಇನ್ನೊಂದು. ಪರೀಕ್ಷಿಸದೆ ನಾನು ನಮಸ್ಕಾರ ಮಾಡಲಾರೆ. ಇನಾಮದಾರರು ಏನೂ ಹೇಳದೇ, ಸುಮ್ಮನಾದರು.

ಮರುದಿನ ಬೆಳಿಗ್ಗೆ ಜಿಜಾಬಾಯಿಯು ಕೆಂಪುಖಾರದ ಎರಡು ಮೂರು ಉಂಡೆ ಮಾಡಿದಳು, ಅದನ್ನೆತ್ತಿಕೊಂಡು ತೋಟಕ್ಕೆ ಹೋದಳು. ಮಹಾರಾಜರು ಕಣ್ಣುಮುಚ್ಚಿ ನಾಮಸ್ಮರಣೆ ಮಾಡುತ್ತಿದ್ದರು. ಗಟ್ಟಿಯಾಗಿ ಕೂಗಿ ಅವಳು ಅವರನ್ನು ಎಚ್ಚರಿಸಿದಳು –

ಮಹಾರಾಜ! ಇದು ತೆಗೆದುಕೊಳ್ಳಿ, ನಿಮಗಾಗಿಯೇ ಲಡ್ಡು ಮಾಡಿತಂದಿರುವೆನು, ಇದು ಲಡ್ಡು, ಇದು ನೀರು, ಎಂದು ಹೇಳಿ ಜೀಜಾಬಾಯಿಯು ಆ ಉಂಡೆಗಳ ತಟ್ಟೆ ಅವರಿಗಿದಿರು ಇಟ್ಟಳು. ಶ್ರೀಮಹಾರಾಜರು ಆ ಖಾರದ ಮೂರು ಉಂಡೆಗಳನ್ನು ಸಹಜವಾಗಿ ತಿಂದರು ಮತ್ತು ಹೇಳಿದರು – ಅಮ್ಮಾ ! ಲಡ್ಡು ಬಹಳ ಚೆನ್ನಾಗಿತ್ತು , ಇನ್ನೂ ಇದೆಯಾ? ಜೀಜಾಬಾಯಿ ಮನಸ್ಸಿನಲ್ಲೇ ಬೆಚ್ಚಿದಳು. ಆದರೆ ಅದನ್ನು ತೋರ್ಪಡಿಸದೆ, ಇಂದು ಇಷ್ಟೇ ಸಾಕು, ನಾಳೆ ಬೇರೆ ಏನಾದರೂ ತಿನ್ನಲು ತರುವೆನು? ಜೀಜಾಬಾಯಿಯು ವಿಚಾರದಲ್ಲಿ ಬಿದ್ದರು, ಇವು ಬರೇ ಕಾರದ ಉಂಡೆ, ಇವನ್ನು ಸಜಹವಾಗಿ ತಿಂದರು, ಇವರಿಗೆ ಕಾರತಿನ್ನುವ ಅಭ್ಯಾಸವಿತ್ತೋ ಏನೋ! ಕಾಡಾಡಿಯಾಗಿ ಅಲೆಯುತ್ತಿದ್ದಾಗ ಕಾಡಿನ ಹಸಿಮೆಣಸಿನ ಕಾಯಿ ತಿನ್ನುತ್ತಿದ್ದನೋ ತಿಳಿಯದು. ಮರುದಿನ ಆಕೆಯು ಬೆಳಿಗ್ಗೆ ಒಲೆಯಲ್ಲಿದ್ದ ನಿಗಿನಿಗಿ ಕೆಂಡವನ್ನು ತಟ್ಟೆಯಲ್ಲಿಟುಕೊಂಡು ಬಂದಳು ಹಾಗೂ ಆ ತಟ್ಟೆ ಮಹಾರಾಜರ ಮುಂದೆ ಇರಿಸಿ ಹೇಳಿದಳು – ಇಂದು ನಾನು ನಿಮಗಾಗಿ ಹೊಸದಾದ ಬಿಸಿ ಪದಾರ್ಥ ತಂದಿರುವೆನು. ಮಹಾರಾಜರು ಒಂದೊಂದು ಕೆಂಡವನ್ನು ಎತ್ತಿ ತಿನ್ನತೊಡಗಿದರು. ನೋಡು ನೋಡುತ್ತಾ ತಟ್ಟೆ ಬರಿದಾಯಿತು. ಆಗ ಮಾತ್ರ ಜೀಜಾಬಾಯಿ ಪಶ್ಚಾತ್ತಾಪ ಪಟ್ಟಳು – ನಾನು ಬಹಳ ದೊಡ್ಡ ಸಿದ್ಧಪುರುಷನ ಮೇಲೆ ಸಂಶಯ ಪಟ್ಟೆ, ನಾನು ನಿಜವಾಗಿ ಮಹಾಪಾತಕಿಯಾಗಿದ್ದೇನೆ. ಅಪರಾಧೀ ಭಾವದಿಂದ ಜೀಜಾಬಾಯಿಯು ಮಹಾರಾಜರ ಚರಣಗಳಲ್ಲಿ ಶಿರಸ್ಸನ್ನಿಟ್ಟಳು, ಕಣ್ಣುಗಳಿಂದ ಅಶ್ರು ಹರಿಯ ತೊಡಗಿದವು, ಅವಳು ಪದೇ – ಪದೇ ಕ್ಷಮೆ ಯಾಚಿಸ ತೊಡಗಿದಳು – ''ಮಹಾರಾಜರೇ! ನಾನು ಪಾಪಿಯಾಗಿದ್ದೇನೆ, ಸತ್ಪುರುಷರ ಮೇಲೆ ಸಂಶಯ ಪಟ್ಟೆ, ನಿಮ್ಮನ್ನು ಪರೀಕ್ಷಿಸಲು ನಾನು ಅತಿಶಯ ಘೋರ ಮತ್ತು ಕ್ರೂರ ಕರ್ಮ ಮಾಡಿದೆ. ''ಕ್ಷಮಾ ಮೂರ್ತಿ ಶ್ರೀಮಹಾರಾಜರು ಹೇಳಿದರು'' – ತಾಯಿ ! ಪರೀಕ್ಷಿಸುವ ಅಧಿಕಾರ ಲಕ್ಷದಲ್ಲಿ ಒಬ್ಬರಿಗಿರುತ್ತದೆ, ನಾವು ಆ ಅಧಿಕಾರವನ್ನು ಸ್ವತಃ ಪಡೆಯಬಾರದು. ಬೇಸರ ಪಡಬೇಡಿ, ರಾಮನಾಮ ಜಪಿಸಿರಿ, ಆ ಮರ್ಯಾದಾ ಪುರುಷೋತ್ತಮ ನಿಮ್ಮ ಶ್ರೇಯಸ್ಸನ್ನು ಮಾಡುವನು.' ಅನಂತರ ಜೀಜಾಬಾಯಿ ಶ್ರೀಮಹಾರಾಜರನ್ನು ಮನೆಯಲ್ಲಿ ಬಂದು ಇರಲು ವಿನಂತಿಸಿದಳು. ಶ್ರೀಮಹಾರಾಜರು ಇನಾಮದಾರರ ಮನೆಗೆ ಬಂದು ಇರತೊಡಗಿದರು.

ಇನಾಮದಾರರ ಮನೆಯಲ್ಲಿ ಶ್ರೀಮಹಾರಾಜರ ಸತತ ನಾಮಸ್ಮರಣ ಸಾಧನೆ ನಡೆದೇ ಇತ್ತು. ಭಕ್ತಿಭಾವದಿಂದ ಬಂದವರ ಬಳಿ ಅವರೊಡನೆ ವಿಲಕ್ಷಣ ಪ್ರೇಮದಿಂದ ಮಾತನಾಡುತ್ತಿದ್ದರು. ಅವರ ಆಧ್ಯಾತ್ಮಿಕ ಶಕ್ತಿಯ ಪರೀಕ್ಷೆ ಮಾಡಲು ಬಂದವರ ಏನೂ

ನಡೆಯುತ್ತಿರಲಿಲ್ಲ. ಯಾರು ಭಾವಿಕ, ಸಾಧಕ ಬಂದರೆ ಅವರೊಡನೆ ಅವರು ಸಾತ್ವಿಕ ಸಂವಾದ ಮಾಡುತ್ತಿದ್ದರು. ನಾಮಸ್ಮರಣೆಯ ಮಾರ್ಗವನ್ನು ಅವರು ಎಲ್ಲರಿಗೂ ತೋರಿಸುತ್ತಿದ್ದರು. ಶ್ರೀಮಹಾರಾಜರ ಸುತ್ತಲು ಹಿರಿಯರಂತೆ ಮಕ್ಕಳು ಬರುತ್ತಿದ್ದರು. ಅವರು ಮಕ್ಕಳೊಡನೆ ಮಕ್ಕಳೇ ಆಗುತ್ತಿದ್ದರು. ಜೀಜಾಬಾಯಿಗೆ ಓರ್ವ ಎಂಟು-ಒಂಭತ್ತು ವರ್ಷದ ಹುಡುಗಿ ಇದ್ದಳು, ಅವಳ ಹೆಸರು ತಾಯಿ ಎಂದಿತ್ತು. ಮಹಾರಾಜ ಮತ್ತು ತಾಯಿಯ ಸ್ನೇಹ ದೃಢವಾಗಿತ್ತು.

ಒಮ್ಮೆ ತಾಯಿ ಮತ್ತು ಮಹಾರಾಜರು ಆಟವಾಡುತ್ತಿರುವಾಗ ಅವರನ್ನು ಭೆಟ್ಟಿಯಾಗಲು ಓರ್ವ ಬೈರಾಗಿ ಬಂದರು. ಹಾಗಂತ ಅವನು ಹಿಂದೆ ಸಂಸಾರಿಯಾಗಿದ್ದ, ಕುಟುಂಬದಲ್ಲಿ ರಮಮಾಣನಾಗಿದ್ದ, ಆದರೆ ಸಂಸಾರ ನಡೆಸುತ್ತಿರುವಾಗಲೂ ಅವನು ಯೋಗಸಾಧನೆ ಮಾಡುತ್ತಿದ್ದ ಮುಂದೆ ಅವರ ಪತ್ನೀ ದೈವಾಧೀನಳಾದಳು. ಇವರು ಸಂಸಾರದ ಹೊಣೆ ಮಗನಿಗೆ ಒಪ್ಪಿಸಿ, ಅವರು ಸದ್ಗುರುಗಳನ್ನು ಹುಡುಕಲಿಕ್ಕಾಗಿ ಹಿಮಾಲಯಕ್ಕೆ ಹೋದರು. ಅವರಿಗೆ ಭಾಗ್ಯದಿಂದ ಅಲ್ಲಿ ಓರ್ವ ಯೋಗೀ ಭೆಟ್ಟಿಯಾದರು. ಆ ಯೋಗಿಯು ಅವರಿಗೆ ಆರು ವರ್ಷ ಮರ್ಗದರ್ಶನ ಮಾಡಿದರು. ಅನಂತರ ಮಹಾರಾಜರ ಪರಿಚಯ ತಿಳಿಸಿ 'ಅವರನ್ನು ಭೆಟ್ಟಿಯಾಗು' ಎಂದು ಸಲಹೆ ಕೊಟ್ಟರು. ಅದಕ್ಕನುಸಾರ ಈ ಬೈರಾಗಿ ಶ್ರೀಮಹಾರಾಜರನ್ನು ಭೆಟ್ಟಿಯಾಗಲು ಬಂದಿದ್ದ ಆದರೆ ಅವರು ಸಣ್ಣ ಹುಡುಗಿಯೊಂದಿಗೆ ಆಟವಾಡುತ್ತಿದ್ದರು. ಅವರು ನಿರಾಶರಾಗಿ ಗೊಣಗುತ್ತಾ ಹಿಂದಕ್ಕೆ ಹೊರಟ. ಮಹಾರಾಜರು ಅವರನ್ನು ಕರೆದು ಪ್ರೇಮಾದರದಿಂದ ಅವರ ಆದರ ಸತ್ಕಾರ ಮಾಡಿದರು. ಆ ಬೇರಾಗಿ ಅವರಲ್ಲಿ ಹೇಳಿದ - ''ಮಹಾರಾಜ! ನನಗೆ ಹಿಮಾಲಯದಲ್ಲಿ ಓರ್ವ ಯೋಗಿರಾಜ ಭೆಟ್ಟಿಯಾದರು, ಅವರ ಅನುಮತಿಯಂತೆ ಅವರಲ್ಲಿ ಇದ್ದು ನಾನು ಕಳೆದ ಐದಾರು ವರ್ಷ ಯೋಗಾಭ್ಯಾಸ ಮಾಡಿದೆ. ಬಳಿಕ ಅವರು ಇಂದೋರಿಗೆ ಹೋಗಿ ನಿಮ್ಮನ್ನು ಭೆಟ್ಟಿಯಾಗಿ ಮುಂದಿನ ಮಾರ್ಗದರ್ಶನ ಪಡೆ ಎಂದು ಆಜ್ಞಾಪಿಸಿದರು. ಅವರು ನಿಮ್ಮನ್ನು ವರ್ಣಿಸಿದಂತೆ ನೀವಿದ್ದೀರಿ, ಆದರೆ ಸಣ್ಣ ಮಕ್ಕಳೊಡನೆ ಆಟದಲ್ಲಿ ಮಗ್ನರಾಗಿದ್ದೀರಿ. ಕ್ಷಮಿಸಬೇಕು, ನಾನು ಇಲ್ಲಿಗೆ ಸುಮ್ಮನೆ ಬಂದೆ ಎಂದೆನಿಸಿತು'' ಅವರ ಮಾತನ್ನು ಕೇಳಿ ಮಹಾರಾಜರು ಹೇಳಿದರು - ಹಾಗಂತ ನಾನು ಯೋಗದ ಜ್ಞಾನಿಯಲ್ಲ. ಆದರೆ ಗುರುಗಳ ಬಳಿ ಇರುವಾಗ ಕೆಲವು ಸಂಗತಿ ನಿರೀಕ್ಷಿಸಿದ್ದೆ, ಅಷ್ಟು ಮಾತ್ರ ಸ್ಮರಣೆಯಲ್ಲಿವೆ. ನಿಮಗೆ ನನ್ನಿಂದ ಏನು ಅಪೇಕ್ಷೆ ಇದೆ? ಬೈರಾಗಿ ಹೇಳಿದ - ನನಗೆ ಧ್ಯಾನ ಧಾರಣೆಯ ಕುರಿತು ಕೆಲವು ಶಂಕೆಗಳು ಇವೆ, ಆ ಪ್ರಶ್ನೆಗಳನ್ನು ನಾನು ಬರೆದು ತಂದಿರುವೆನು, ಅದರ ಉತ್ತರ

ನಿಮ್ಮಿಂದ ನನಗೆ ಸಿಗಬೇಕೆಂಬ ಅಪೇಕ್ಷೆ ಇದೆ. ಮಹಾರಾಜರು ಮುಗುಳ್ನಕ್ಕು ಹೇಳಿದರು – ಇಷ್ಟೇ ಅಲ್ಲವೇ! ನಿಮ್ಮ ಶಂಕೆಯ ನಿರಸನವಾದರೋ ನಮ್ಮ ತಾಯಿಯೇ ಮಾಡುವಳು. ಮಹಾರಾಜರು ತಾಯಿಯನ್ನು ಹತ್ತಿರ ಕರೆದು, ತಾಯಿಯ ಮಸ್ತಕದ ಮೇಲೆ ಕೈಯನ್ನಿಟ್ಟು ಹೇಳಿದರು – ಮಗು! ಸಿದ್ಧಾಸನ ಹಾಕಿ, ಸಮಾಧಿ ಹಚ್ಚು. ತಾಯಿಯು ಲಂಗದ ಕಚ್ಚೆ ಹಾಕಿ ಸಿದ್ಧಾಸನದಲ್ಲಿ ಕುಳಿತಳು, ಕೆಲವೇ ಕ್ಷಣದಲ್ಲಿ ಆಕೆಗೆ ಸಮಾಧಿ ಹತ್ತಿತ್ತು ಮತ್ತೆ ಮಹಾರಾಜರು ಆ ಬೈರಾಗಿಗೆ ಹೇಳಿದರು – ಕೇಳಿ ನಿಮ್ಮ ಪ್ರಶ್ನೆ! ಮೊದಲಿಗೆ ಆ ಬೈರಾಗಿ ಗಲಿಬಿಲಿಗೊಂಡ. ಅವನು ಪ್ರಶ್ನೆ ಬರೆದ ಕಾಗದ ತೆಗೆದ, ಒಂದರ ಹಿಂದೆ ಒಂದು ಪ್ರಶ್ನೆ ಕೇಳತೊಡಗಿದನು. ತಾಯಿಯು ಅವರ ಎಲ್ಲ ಪ್ರಶ್ನೆಗಳಿಗೆ ಅತ್ಯಂತ ಸಮರ್ಪಕ ಮತ್ತು ಸಮಾಧಾನಕರ ಉತ್ತರ ಕೊಟ್ಟಳು. ಆ ಬೈರಾಗಿ ಅವಾಕ್ಕಾದನು, ಅವನ ಪ್ರಶ್ನೆ ಮುಗಿದಾಗ ಶ್ರೀ ಮಹಾರಾಜರು ತಾಯಿಯನ್ನು ಎಚ್ಚರಿಸಿದರು. ಅವರು ಆಕೆಗೆ ಪ್ರೇಮದಿಂದ ಹೇಳಿದರು – ಮಗು! ಹೋಗು ಆಟ ಆಡಿಕೋ. ತಾಯಿ ಆಟಕ್ಕೆ ಹೋದಳು. ಆ ಬೈರಾಗಿಯು ಶ್ರೀಮಹಾರಾಜ ಚರಣಗಳಲ್ಲಿ ಹೊರಳಾಡಿದ. ಕೈ ಮುಗಿದುಕೊಂಡು ಹೇಳಿದ–ಮಹಾರಾಜರೇ! ನನ್ನನ್ನು ಕ್ಷಮಿಸಿರಿ. ಮೊದಲಿಗೆ ನಿಮ್ಮ ಸಾಮರ್ಥ್ಯ ತಿಳಿಯಲಿಲ್ಲ. ನನಗೆ ಕ್ಷಮೆ ಕೊಡಿರಿ. ಸಂತರು ಕ್ಷಮಾಶೀಲರಾಗಿರುತ್ತಾರೆ. ಮಹಾರಾಜರು ಆ ಬೈರಾಗಿಗೆ ಎಬ್ಬಿಸಿ, ಅವರನ್ನು ಎಂಟುದಿನ ತಮ್ಮ ಬಳಿ ಇಟ್ಟುಕೊಂಡರು. ಅವರಿಗೆ ಇನ್ನೂ ಕೆಲವು ಯೋಗಕ್ರಿಯೆ ಕಲಿಸಿದರು. ಆ ಬೈರಾಗಿ ಸಮಾಧಾನ ಮನಸ್ಸಿನಿಂದ ಸ್ವಗುರುಗಳ ಕಡೆಗೆ ಹಿಂತಿರುಗಿದರು.

ಅನಂತರ ಶ್ರೀಮಹಾರಾಜರು ಇನಾಮದಾರ, ಜೀಜಾಬಾಯಿ ಮತ್ತು ತಾಯಿಯವರನ್ನು ಬೀಳ್ಕೊಂಡು ಇಂದೋರು ಬಿಟ್ಟರು.



## -: ಹನ್ನೊಂದು :-

# ಕರುಣಾಮೂರ್ತಿ ಶ್ರೀಮಹಾರಾಜರು

ಇಂದೋರನ್ನು ಬಿಟ್ಟು ಶ್ರೀಮಹಾರಾಜರು ಗೊಂದವಲೆಗೆ ಬಂದರು. ನದೀತೀರದ ಮಾರುತೀ ಮಂದಿರದಲ್ಲಿ ಅವರು ಉಳಕೊಂಡರು. ಒಳ್ಳೆಯ ಋಷಿರೂಪವಿತ್ತು . ಬೆಳೆದ ಗಡ್ಡ-ಮೀಸೆ, ಸೊಂಟದಲ್ಲಿ ಕೌಪೀನ, ಸರ್ವಾಂಗದಲ್ಲಿ ಭಸ್ಮ, ಕಾಲಿನಲ್ಲಿ ಪಾದುಕೆ, ಒಂದು ಕೈಯಲ್ಲಿ ಯೋಗದಂಡ ಮತ್ತು ಇನ್ನೊಂದರಲ್ಲಿ ರುದ್ರಾಕ್ಷಿ ಮಾಲೆ, ತೇಜಃಪುಂಜ ಪ್ರಸನ್ನ ಮುದ್ರೆ . ಈ ಸಲ ಅವರೊಂದಿಗೆ ನಾಲ್ಕು ಬೈರಾಗಿ ಶಿಷ್ಯರಿದ್ದರು. ಊರಿನ ಮಾರುತೀ ಮಂದಿರದಲ್ಲಿ ಯಾರೋ ಗೋಸಾವೀ ಬುವಾ ಬಂದಿರುವರು ಎಂಬ ವಾರ್ತೆ ಎಲ್ಲೆಡೆ ಹರಡಿತು. ಹೆಚ್ಚುಕಮ್ಮಿ ಎಂಟು ವರ್ಷಗಳ ಬಳಿಕ ಮಹಾರಾಜರು ಮರಳಿ ಬಂದಿದ್ದರು. ರಾವಜೀ ಮತ್ತು ಗೀತಾಬಾಯಿಯವರ ಸ್ಥಿತಿ ವರ್ಣನಾತೀತ, ಗೀತಾ ಬಾಯಿಯ ಮಾತೃಮನ ಮೃದು, ಅಶ್ರುರೂಪದಲ್ಲಿ ಭಾವನೆಗಳು ಪ್ರಕಟವಾಗುತ್ತಿದ್ದವು. ರಾವಜೀಯವರು ಮೇಲಿಂದ ಶಾಂತ, ನಿರ್ಧಾರಿ ಕಂಡು ಬಂದರೂ, ಒಳಗಿನಿಂದ ಪುತ್ರಸ್ಮರಣೆಯಿಂದ ಅಸ್ವಸ್ಥರಾಗಿದ್ದರು. ಇವರಿಬ್ಬರಿಗೆ ಮೂರು ಮಕ್ಕಳಿದ್ದರು, ಶ್ರೀಮಹಾರಾಜರು, ಅಣ್ಣಾ ಮತ್ತು ಮುಕ್ತಾಬಾಯಿ, ಶ್ರೀ ಮಹಾರಾಜರು ಮೂವರಲ್ಲಿ ಹಿರಿಯರು. ಊರಿನ ಮಾರುತೀ ಮಂದಿರದಲ್ಲಿ ಯಾರೋ ಗೋಸಾವೀ ಬಂದಿರುವುದು ರಾವಜೀ ಮತ್ತು ಗೀತಾಬಾಯಿ ಇವರಿಗೆ ತಿಳಿಯಿತು. ಇಂತಹ ಯಾರಾದರೂ ಸಾಧೂ, ಬೈರಾಗಿ, ಮಹಾತ್ಮಾ ಬಂದಾಗ ಇವರಿಬ್ಬರೂ ಓಡಿ ಹೋಗುತ್ತಿದ್ದರು, ತಮ್ಮ ಮಗನ ಬಗ್ಗೆ ವಿಚಾರಿಸುತ್ತಿದ್ದರು. ಇವರಿಬ್ಬರೂ ಮಂದಿರಕ್ಕೆ ಬಂದರು, ಮಹಾರಾಜರು ಇಬ್ಬರನ್ನೂ ನೋಡಿದರು, ತಂದೆ-ತಾಯಿಯರ ದರ್ಶನದಿಂದ ಅವರು ಧನ್ಯರಾದರು. ಅವರಿಗೆ ಮನಸ್ಸಿನಲ್ಲೇ ಸಾಷ್ಟಾಂಗ ನಮಸ್ಕಾರ ಮಾಡಿದರು. ತಂದೆ-ತಾಯಿಯರೂ ಈ ಗೋಸಾವಿಗಳಿಗೆ ವಂದಿಸಿದರು. ಗೀತಾಬಾಯಿ ಕೈಮುಗಿದು ಕೇಳಿದಳು - ಮಹಾರಾಜ! ನನ್ನ ಹಿರಿಯ

ಮಗ ಮನೆ ಬಿಟ್ಟು ಹೋಗಿರುವನು, ಅವನು ಹೋಗುವಾಗ ಕೇವಲ ಹನ್ನೆರಡು ವರ್ಷದವನಾಗಿದ್ದ, ನೋಡಲು ಸುಂದರ, ಮೃದುವಚನೀ ಆಗಿದ್ದಾನೆ ಮತ್ತು ಅವನ ಬಾಯಲ್ಲಿ ಸಾದಾಕಾಲ ರಾಮನಾಮ ಇರುತ್ತಿತ್ತು . ಎಲ್ಲದಾರೂ ನಿಮಗೆ ಕಂಡನೋ? ಗೀತಾಬಾಯಿಯ ಸ್ವರ ನಡುಗಿತು, ಅವರ ಕಣ್ಣುಗಳಲ್ಲಿ ನೀರು ಒಸರಿತು. ಮಹಾರಾಜರ ಹೃದಯ ಕಂಪಿಸಿತು, ಆದರೂ ಅವರು ಶಾಂತವಾಗಿ ಹೇಳಿದರು - ಮಾತಾಜೀ! ಚಿಂತಿಸಬೇಡಿ, ನೀವು ಹೇಳಿದಂತಹ ಹುಡುಗನನ್ನು ನಾನು ನೋಡಿದ್ದೇನೆ. ಈಗ ಅವನು ತೀರ್ಥಾಟನೆ ಮಾಡುತ್ತಿದ್ದಾನೆ. ನೀವೂ ನಾಮಸ್ಮರಣೆ ಮಾಡಿರಿ, ಒಂದು ವರ್ಷದೊಳಗೆ ಅವನ ಮತ್ತು ನಿಮ್ಮ ಭೇಟ್ಟಿಯಾಗುವುದು. ರಾವಜೀ ಮತ್ತು ಗೀತಾಬಾಯಿ ಸಮಾಧಾನ ಹೊಂದಿ ಮನೆಗೆ ಮರಳಿದರು.

ಆ ರಾತ್ರಿ ಊರಿನಲ್ಲಿ ತಮಾಶಾ ಇತ್ತು , ತುಂಬಾ ಜನರು ಸೇರಿದ್ದರು. ಗಾಂಜಾ ಅಥವಾ ಹಸಿರು ತಂಬಾಕು ಇಂತಹ ಬೈರಾಗಿಗಳ ಬಳಿ ಇರುತ್ತದೆ, ಅವರಿಂದ ಪುಕ್ಕಟೆಯಾಗಿ ದೊರಕಿಸಿಕೊಳ್ಳಲು ಆದರೆ ನೋಡಬೇಕು ಎಂದು ದಾಜಿ ಪಾಟೀಲ ಮತ್ತು ಅಣ್ಣಾ ಬಾರಸವಾಡೇಕರ ಇವರಿಬ್ಬರೂ ತಮಾಷೆಗೆ ಹೋಗದೆ ಮಾರುತಿ ಮಂದಿರಕ್ಕೆ ಬಂದರು. ಶ್ರೀಮಹಾರಾಜರ ಬಳಿ ಅವರ ಉದ್ದೇಶ ಪೂರ್ಣವಾಗಲಿಲ್ಲ. ಆದರೆ ಈ ಗೋಸಾಯಿಯ ಒಂದು ಕಿವಿ ಹರಿದಿದೆ, ಇವರ ಮಾತು, ವರ್ತನೆ ಅವರಿಬ್ಬರ ಗಮನಕ್ಕೆ ಬಂತು. ಇವರು ಬೇರೆ ಯಾರೋ ಆಗಿರದೆ ನಮ್ಮ ಗಣೂಬುವಾ ಆಗಿದ್ದಾನೆ. ಅವರೀರ್ವರೂ ಚರ್ಚಿಸಿ ನಾಳೆ ಬೆಳಿಗ್ಗೆ ರಾವಜೀಯವರಿಗೆ ಗಣೂಬುವಾ ಬಂದಿರುವ ವಾರ್ತೆ ಹೇಳಬೇಕೆಂದು ನಿಶ್ಚಯಿಸಿದರು. ಮಹಾರಾಜರು ಅಂತರ್ಜ್ಞಾನದಿಂದ ತಿಳಿದು, ಬೆಳಗಿನ ಝೂವವೇ ಅವರು ಗೊಂದವಲೆಯನ್ನು ಬಿಟ್ಟರು. ಗೊಂದವಲೆಯಿಂದ ಅವರು ಖಾತವಳಕ್ಕೆ ಬಂದರು, ಅದು ಅವರ ಮಾವನ ಮನೆ ಊರಾಗಿತ್ತು . ಖಾತವಳದ ಮಾರುತೀ ಮಂದಿರದಲ್ಲಿ ಅವರು ವಾಸಿಸಿದರು. ಅಲ್ಲಿಯೂ ಅವರ ತೇಜದ ಕೀರ್ತಿ ಗಾಳಿಯಂತೆ ಹರಡಿತು. ಅನೇಕ ಜನರು ತಮ್ಮ ತಾಪತ್ರಯ ತೆಗೆದುಕೊಂಡು ಬರತೊಡಗಿದರು. ಶ್ರೀಮಹಾರಾಜರು ಎಲ್ಲರಿಗೂ ಅವರ ಪರಿಸ್ಥಿತಿಗನುಗುಣವಾಗಿ ಯೋಗ್ಯ ಮಾರ್ಗದರ್ಶನ ಮಾಡತೊಡಗಿದರು. ಶ್ರೀಮಹಾರಾಜರ ಮುಖ್ಯ ಆಗ್ರಹ ನಾಮಸ್ಮರಣೆ ಮಾಡುವುದಾಗಿತ್ತು .

ಶ್ರೀಮಹಾರಾಜರ ತಾಯಿ-ತಂದೆಯವರ ಅವಸ್ಥೆಯಂತೆಯೇ, ಅತ್ತೆ-ಮಾವನವರ ಸ್ಥಿತಿಯೂ ಹಾಗೆಯೇ ಇತ್ತು. ಅವರ ಪತ್ನೀ ಸರಸ್ವತಿ, ಇವರ ಮನೋಸ್ಥಿತಿಯು ವರ್ಣನಾತೀತವಾಗಿತ್ತು . ಅತ್ತೆಯವರು ತಮ್ಮ ಕನ್ಯೆಯನ್ನು ಕರೆದುಕೊಂಡು ಮಾರುತೀ ಮಂದಿರಕ್ಕೆ ಬಂದರು. ನಮಸ್ಕಾರ ಮಾಡಿದ ಬಳಿಕ ಅವರು ತಮ್ಮ ಸಮಸ್ಯೆ

ಹೇಳತೊಡಗಿದರು – ಮಹಾರಾಜ! ಇವಳು ನನ್ನ ಮಗಳು, ಹತ್ತುವರ್ಷದ ಹಿಂದೆ ಈಕೆಯ ಲಗ್ನವಾಗಿತ್ತು, ಆದರೆ ಎಂಟು ವರ್ಷದ ಹಿಂದೆ ಇವಳ ಪತಿ ಮನೆಬಿಟ್ಟು ಹೋಗಿರುವನು. ನನಗೆ ತುಂಬಾ ಚಿಂತೆ ಉಂಟಾಗಿದೆ, ಮಗಳ ಇಡೀ ಆಯುಷ್ಯ ಮುಂದಿದೆ. ಮಹಾರಾಜರು ಮುಗುಳ್ನಕ್ಕರು. ಅವರು ಹೇಳಿದರು – 'ಚಿಂತಿಸಬೇಡಿ, ಪ್ರಭುರಾಮನ ನಾಮ ಜಪಿಸಿರಿ, ಕರುಣಾಸಾಗರ ಅವನು ಶ್ರೇಯಸ್ಸನ್ನು ಮಾಡುವನು, ಶ್ರೀರಾಮನ ಕೃಪೆಯಿಂದ ನಿಮ್ಮ ಕನ್ಯೆಯ ಸಂಸಾರ ಚೆನ್ನಾಗುವುದು' ಅನಂತರ ಸರಸ್ವತಿಯ ಜೀವನ ಕ್ರಮ ಬದಲಾಯಿತು. ಬೆಳಿಗ್ಗೆ-ಸಂಜೆ ದಾಸಬೋಧದ ಎರಡು ಸಮಾಸ ಓದುವುದು, ಸತತ ನಾಮಸ್ಮರಣ ಮಾಡುವುದು.

ಶ್ರೀಮಹಾರಾಜರ ಚಿಕ್ಕಪ್ಪನ ಮಗಳು ಡಾಂಬೇವಾಡಿಯಲ್ಲಿ ಇದ್ದಳು. ಖಾತವಳದಿಂದ ಅವರು ಡಾಂಬೆವಾಡಿಗೆ ಬಂದರು. ತಮ್ಮ ತಂಗಿಯ ಮನೆಮುಂದೆ ಬಂದು 'ಜಯ ಜಯ ರಘುವೀರ ಸಮರ್ಥ' ಎಂದು ಉಚ್ಚರಿಸಿದರು. ಭೀಮಾತಾಯಿ ಬಾಗಿಲಿಗೆ ಬಂದಾಗ ಅವರು ಹೇಳಿದರು – 'ಭೀಮಾತಾಯಿ! ನನಗೆ ಭಿಕ್ಷೆ ಹಾಕು' ಈ ಗೋಸಾವಿಗೆ ನನ್ನ ಹೆಸರು ಹೇಗೆ ಗೊತ್ತು ? ಎಂದು ಆಕೆ ಆಶ್ಚರ್ಯಗೊಂಡಳು. ಅವಳು ಆಗೋಸಾವಿ ಕಡೆಗೆ ನೋಡುತ್ತಾ ನಿಂತಳು. ಮತ್ತೆ ಮಹಾರಾಜರು ಹೇಳಿದರು – ಗಂಡನ ಮನೆಯಲ್ಲಿ ಒಂದಾಗಿ ಹೋಗಿರುವೆ, ತವರಿನ ಜನರನ್ನು ಮರೆತು ಬಿಟ್ಟೆಯಾ? ಭೀಮಾತಾಯಿಗೆ ಒಮ್ಮೆಲೇ ಗುರುತಾಯಿತು, 'ಗಣೂಽಽ' ಎಂದು ಹೇಳಿ ತಡೆದು, ಗಣುವೇ ಅಲ್ಲವೇ ನೀನು? ಎಂದು ಕೇಳಿದಳು – 'ಹೀಗೆ ಹೇಗೆ ನೀನು ಮನೆ ಬಿಟ್ಟು ಹೊರಟು ಹೋದೆ, ಚಿಕ್ಕಮ್ಮ(ಕಾಕು)ನಿಗೆ ಎಷ್ಟು ನೋವಾಗಿದೆ ಇದರ ಕಲ್ಪನೆ ನಿನಗಿದೆಯೇ? ಎಲ್ಲರನ್ನು ದುಃಖದಲ್ಲಿ ತಳ್ಳಿ ಬೈರಾಗಿಯಾದೆ, ಏನು ಸಿಕ್ಕಿದೆ ನಿನಗೆ? ಆಕೆಯ ಕಣ್ಣುಗಳಿಂದ ನೀರು ಹರಿಯಿತು. ಶ್ರೀಮಹಾರಾಜರು ಹೇಳಿದರು – ಸಿಗುವುದು ಏನು ಉಳಿದಿದೆ? ಇರಲಿ ನನಗೆ ಇನ್ನೂ ದೂರ ಹೋಗಬೇಕಾಗಿದೆ, ನಾನು ಬೇಗನೇ ಹಿಂದಕ್ಕೆ ಬರುವೆನು, ನಾನು ಬಂದಿರುವುದನ್ನು ಮಾತ್ರ ಯಾರಿಗೂ ಹೇಳಬೇಡ. ಮಹಾರಾಜರು ಹೊರಟು ಹೋದರು. ಭೀಮಾತಾಯಿ ಗಣೂ... ಗಣೂ... ಎಂದು ಕರೆಯುತ್ತಾ ಇದ್ದಳು.

ಶ್ರೀಮಹಾರಾಜರು ಡಾಂಬೆವಾಡಿಯಿಂದ ಹೊರಟು ಸಜ್ಜನಗಡಕ್ಕೆ ಬಂದರು. ಸಮರ್ಥ ಶ್ರೀರಾಮದಾಸ ಸ್ವಾಮಿಗಳ ದರ್ಶನ ಪಡೆದು, ಮೂರುದಿನ ಅಲ್ಲಿದ್ದರು. ಅಲ್ಲಿಂದ ಅವರು ರಾಮೇಶ್ವರದ ಮಾರ್ಗದಲ್ಲಿ ತಿರುಪತಿ ಬಾಲಾಜಿಯ ದರ್ಶನ ಪಡೆದು ಬೆಟ್ಟ ಇಳಿದು ಕೆಳಗೆ ಬಂದರು. ಆ ರಸ್ತೆಯ ಒಂದು ಬದಿಗೆ ಒಬ್ಬ ರೋಗೀ ಭಿಕಾರಿ

ಬಿದ್ದಿರುವುದನ್ನು ಅವರು ನೋಡಿದರು. ಸಂತರ ಮನಸ್ಸು ಕರುಣಾಪೂರ್ಣ ಇರುತ್ತದೆ, ಶ್ರೀಮಹಾರಾಜರು ಆ ಭಿಕಾರಿಯ ಬಳಿಗೆ ಹೋಗಿ, ಅವನನ್ನು ಎಬ್ಬಿಸಿ ನೀರು ಕುಡಿಸಿದರು, ತಿನ್ನಲು ಕೊಟ್ಟರು. ಅದರಿಂದ ಅವನು ಸ್ವಲ್ಪ ಚೇತರಿಸಿಕೊಂಡನು. ಮತ್ತೆ ಮಹಾರಾಜರು ಅವನನ್ನು ಕೇಳಿದರು – ಅಪ್ಪಾ! ನೀನು ಯಾರಾಗಿರುವೆ? ನೀನು ಇಂತಹ ಸ್ಥಿತಿಯಲ್ಲಿ ಹೇಗೆ? ಅವನು ತನ್ನ ಕರ್ಮ ಕಥೆಯನ್ನು ಹೇಳತೊಡಗಿದನು – ನಾನು ರೆಡ್ಡಿ ತೆಲುಗಿನವ, ನನ್ನ ಮಾತೃಭಾಷೆ ತೆಲುಗು. ನಾನು ದೊಡ್ಡ ಶ್ರೀಮಂತ ಜಮೀನ್ದಾರನ ಮನೆಯಲ್ಲಿ ಹುಟ್ಟಿದ್ದೆ, ನನ್ನ ತಾಯಿ-ತಂದೆಯವರಿಗೆ ನಾನೊಬ್ಬನೇ ಮಗ. ಮುದ್ದು ಜಾಸ್ತಿಯಾಗಿ ನಾನು ಪೂರ್ಣ ಕೆಟ್ಟು ಹೋದೆ, ನನಗೆ ಬೇರೆ ಬೇರೆ ವ್ಯಸನಗಳು ಅಂಟಿಕೊಂಡವು. ನನಗೆ ಮೂವತ್ತು ವರ್ಷದವನಾಗಿದ್ದಾಗ ನನ್ನ ತಾಯಿ ಸತ್ತರು, ನನ್ನ ತಂದೆ ಎರಡನೇ ಮದುವೆಯಾದರು. ಮಲತಾಯಿ ನನ್ನನ್ನು ದ್ವೇಷಿಸುತ್ತಿದ್ದಳು. ನನ್ನನ್ನು ಮನೆಯಿಂದ ಹೊರ ಹಾಕಲು ಅವಳು ಸಂಚು ಹೂಡುತ್ತಿದ್ದಳು. ಆಕೆಗೆ ನಾನುಬೇಡವಾಗಿದ್ದೆ. ಆಗಲೇ ನನಗೆ ಉಪದಂಶ (ಗುಹ್ಯರೋಗ) ಉಂಟಾಯಿತು. ನನ್ನ ಶರೀರ ಊದಿಕೊಂಡಿತು, ನಾನು ಬಹಳ ಬೇಸರ ಪಟ್ಟೆ, ನನ್ನಲ್ಲಿ ಯಾವುದೇ ಶಕ್ತಿ ಇರಲಿಲ್ಲ, ನಮ್ಮ ಮನೆಯಲ್ಲಿ ಓರ್ವ ಅತಿಶಯ ನಿಷ್ಠೆಯುಳ್ಳ ಪ್ರಾಮಾಣಿಕ ಆಳು ಇದ್ದ. ಅವನು ಈಗ ಮುದುಕನಾಗಿದ್ದ. ಅವನು ಮಾತ್ರ ಮನಃಪೂರ್ವಕ ನನ್ನ ಸೇವಾಶುಶ್ರೂಷೆ ಮಾಡಿದನು. ಹೊತ್ತಿಗೆ ಸರಿಯಾಗಿ ಔಷಧ ಕೊಡುವುದು, ತಿನ್ನಲು ಕೊಡುವುದು ಎಲ್ಲ ಹೊಣೆ ಅವನೇ ಹೊರುತ್ತಿದ್ದ. ನನ್ನ ಪ್ರಕೃತಿ ಕೆಟ್ಟಿತು. ನಿಶ್ಶಕ್ತನಾಗಿದ್ದೆ. ಮಲತಾಯಿಗೆ ನಾನು ಮನೆಯಲ್ಲೇ ಬೇಡವಾಗಿದ್ದೆ. ಅನ್ನದಲ್ಲಿ ವಿಷ ಬೆರೆಸಿ ನನ್ನನ್ನು ಕೊಲ್ಲುವ ಸಂಚು ಹೂಡಿದಳು. ಪ್ರಾಮಾಣಿಕ ಮತ್ತು ವೃದ್ಧ ಆಳಿಗೆ ಅದು ತಿಳಿಯಿತು. ಅವನು ನನ್ನನ್ನು ಎಚ್ಚರಿಸಿದ. ಅವನನ್ನು ವಶಪಡಿಸಿಕೊಳ್ಳಲು ಆಕೆಯು ಭಾರೀ ಮೊತ್ತದ ಆಮಿಷ ತೋರಿಸಿದಳು. ಆದರೆ ಇವನ ನಿಯತ್ತು ಕದಲಲಿಲ್ಲ. ನಾನು ಪೂರ್ಣ ಖಿನ್ನನಾದೆ, ಬಳಿಕ ಶಾಂತನಾದೆ. ಇಂದು ನಾನು ವ್ಯಾಧಿಯಿಂದ ದುಃಖಿತನಾಗಿದ್ದೇನೆ, ಮಲತಾಯಿಯ ಕುಚಕ್ರದಲ್ಲಿ ಸಿಲುಕಿರುವೆನು, ಆದರೆ ಅದಕ್ಕೆ ಮೊದಲು ನಾನು ಎಷ್ಟು ಸುಖ ಅನುಭವಿಸಲಿಲ್ಲ ! ನನ್ನ ಪ್ರತಿಯೊಂದು ಇಚ್ಛೆ ಪೂರ್ಣವಾಗುತ್ತಿತ್ತು . ಬಾಲ್ಯದಿಂದಲೂ ನನಗೆ ರಾಮೇಶ್ವರನ ಮೇಲೆ ಶ್ರದ್ಧೆ ಇತ್ತು . ಅವನ ಭಕ್ತಿ ಮಾಡದೆ ಭೋಗದದಾರಿ ಹಿಡಿದೆ, ಈಗ ರಾಮೇಶ್ವರನ ನೆನಪು ಆಯಿತು, ಮುಂದಿನ ದಾರಿ ನಾನು ನಿಶ್ಚಯಿಸಬೇಕು. ಭಕ್ತಿರಹಿತ ಜೀವನ ಕಳೆದೆ, ಈಗ ಅಂತ್ಯಕಾಲವಾದರೂ ಶ್ರೀರಾಮೇಶ್ವರನ ಚರಣಗಳಲ್ಲಿ ಕಳೆಯಬೇಕೆಂದು ಯೋಚಿಸಿದೆ.

ನಾನು ಆ ವೃದ್ಧ ಸೇವಕನಲ್ಲಿ ವಿನಂತಿಸಿದೆ, ನನ್ನನ್ನು ರಾಮೇಶ್ವರನ ದಾರಿಯಲ್ಲಿ ಇಡು, ಅವನಿಗೆ ತುಂಬಾ ದುಃಖವಾಯಿತು, ಆ ಮಧ್ಯರಾತ್ರಿಯಲ್ಲಿ ಯಾರಿಗೂ ತಿಳಿಯದಂತೆ ಅವನು ಹೊತ್ತುಕೊಂಡು ರಾಮೇಶ್ವರನ ದಾರಿಯಲ್ಲಿ ತಂದು ಬಿಟ್ಟನು. ನನ್ನನ್ನು ಬೀಳ್ಕೊಳ್ಳುವಾಗ ಅವನು ಅತ್ತುಬಿಟ್ಟನು. ಅವನ ಪ್ರಾಮಾಣಿಕತೆಯನ್ನು ನಾನು ಜನ್ಮಾಂತರದಲ್ಲಿ ಮರೆಯಲಾರೆ. ಮತ್ತೆ ನನ್ನ ಒಂಟಿಯಾಗಿ ಪ್ರವಾಸ ಪ್ರಾರಂಭವಾಯಿತು. ಈ ವ್ಯಾಧಿಗ್ರಸ್ತ ದೇಹದಿಂದ ಸಾಧ್ಯವಿದ್ದಷ್ಟು ನಡೆಯುತ್ತೇನೆ, ಜನರು ಕೊಟ್ಟಿದ್ದನ್ನು ತಿನ್ನುತ್ತೇನೆ, ಆದರೆ ನನ್ನಿಂದ ಸತತ ಶ್ರೀರಾಮೇಶ್ವರನ ಅಖಂಡ ಚಿಂತನೆ, ನಾಮಸ್ಮರಣೆ ಆಗ ತೊಡಗಿತು. ಆ ನಾಮಸ್ಮರಣೆಯಲ್ಲಿ ಅವನ ಭೇಟಿಯ ಆರ್ತತೆಯಿಂದ ನಾನು ಇಲ್ಲಿಯವರೆಗೆ ಬಂದಿದ್ದೇನೆ, ಮುಂದಿನದು ಆ ರಾಮೇಶ್ವರನ ಕೈಯಲ್ಲಿ. ಆದರೆ ಇಂದು ನನಗೆ ಈ ಎಲ್ಲ ನೋವಿನಲ್ಲಿಯೂ ಒಂದು ಬೇರೆಯೇ ಸಮಾಧಾನ, ಬೇರೆಯೇ ಶಾಂತಿ ಲಭಿಸಿದೆ.

ಶ್ರೀಮಹಾರಾಜರೊಂದಿಗೆ ನಾಲ್ಕು ಬೈರಾಗಿಗಳಿದ್ದರು. ಆ ಮನುಷ್ಯನ ಜೀವನ ಕಥೆ ಕೇಳಿ ಅವರು ದಂಗಾದರು. ಶ್ರೀಮಹಾರಾಜರು ಅವನಿಗೆ ಮಾತು ಕೊಟ್ಟರು - ನೀವು ನಾಮಸ್ಮರಣೆ ಮಾಡುತ್ತಾ ಇರಿ. ನಾವು ನಿಮ್ಮನ್ನು ರಾಮೇಶ್ವರಕ್ಕೆ ಕೊಂಡು ಹೋಗುವೆವು. ಎರಡು ಬಿದಿರು ತಂದು ದಪ್ಪ ಬಟ್ಟೆಯ ಜೋಳಿಗೆ ಸಿದ್ಧವಾಯಿತು. ಅದರಲ್ಲಿ ಅವನನ್ನು ಕುಳಿರಿಸಿ, ಅವನನ್ನು ಎತ್ತಿಕೊಂಡು, ಬದಲಿಸಿ, ಬದಲಿಸಿ, ಹಂತ-ಹಂತವಾಗಿ ರಾಮೇಶ್ವರಕ್ಕೆ ಬಂದರು. ರಾಮೇಶ್ವರವು ಹತ್ತಿರ - ಹತ್ತಿರ ಬರುತ್ತಿದ್ದಂತೆ, ಆ ಗೃಹಸ್ಥನ ಮುಖದ ಮೇಲೆ ಹೆಚ್ಚೆಚ್ಚು ಆನಂದ ಕಾಣಿಸ ತೊಡಗಿತು. ರಾಮೇಶ್ವರಕ್ಕೆ ಬಂದು ಶ್ರೀ ಮಹಾರಾಜರು ಅವನಿಗೆ ಸ್ವಚ್ಛ ಸ್ನಾನ ಮಾಡಿಸಿದರು, ದೇವರ ದರ್ಶನಕ್ಕಾಗಿ ದೇವಸ್ಥಾನಕ್ಕೆ ಕೊಂಡು ಹೋದರು, ಆ ಗೃಹಸ್ಥನ ಆನಂದಕ್ಕೆ ಪಾರವೇ ಇರಲಿಲ್ಲ. ಶ್ರೀರಾಮೇಶ್ವರನ ದರ್ಶನವಾದಾಗ ಅವನ ಬಾಯಿಂದ ತೆಲುಗು ಭಾಷೆಯಲ್ಲಿ ಒಂದು ಸುಂದರ ಕಾವ್ಯ ಪ್ರಕಟವಾಯಿತು. ಅವನು ರಾಮೇಶ್ವರನ ಚರಣದಲ್ಲಿ ಶಿರವನ್ನಿಟ್ಟನು, ಮತ್ತೆ ಏಳಲೇ ಇಲ್ಲ. ಅವನು ರಾಮೇಶ್ವರ ಚರಣದಲ್ಲಿ ಪ್ರಾಣಾರ್ಪಣೆ ಮಾಡಿದ್ದನು. ಮುಂದೆ ಅವನ ಅಂತ್ಯ ಸಂಸ್ಕಾರ ಸ್ವತಃ ಮಹಾರಾಜರೇ ಮಾಡಿ ಅವನ ಉದ್ಧಾರ ಮಾಡಿದರು.

□□

-: ಹನ್ನೆರಡು :-

# ಗೃಹಸ್ಥಾಶ್ರಮೀ ಶ್ರೀಮಹಾರಾಜರು

ಮಹಾರಾಜರು ರಾಮೇಶ್ವರದಿಂದ ಹೊರಟು ವರದರಾಜ (ಬಹುಶಃ ಕಂಚಿ ಇರಬೇಕು) ದರ್ಶನಾರ್ಥ ಕಾಶಿಗೆ ಬಂದರು. ಕಾಶಿಯಲ್ಲಿ ಓರ್ವ ಶ್ರೀಮಂತ ಬೆಳ್ಳಿಯ ವ್ಯಾಪಾರಿಯಿದ್ದನು. ಈ ವ್ಯಾಪಾರಿ ಅತಿಶಯ ಶ್ರೀಮಂತನಾಗಿದ್ದರೂ ಅವನಿಗೆ ಒಂದು ದುಃಖವಿತ್ತು. ಅವನ ಮದುವೆಯಾಗಿ ಅನೇಕ ವರ್ಷಗಳು ಕಳೆದರೂ ಸಂತಾನ ಇರಲಿಲ್ಲ. ಪತಿ-ಪತ್ನಿಗಳಿಬ್ಬರೂ ವರದರಾಜನ ಭಕ್ತರಾಗಿದ್ದರು. ಪತ್ನೀಯಾದರೋ ಪರಮಭಕ್ತಳಾಗಿದ್ದಳು, ಅಖಂಡ ನಾಮಸ್ಮರಣೆ ಮಾಡುತ್ತಿದ್ದಳು. ಈ ಉಪಾಸನೆಯಿಂದ ಅವಳಿಗೆ ದಿವ್ಯದೃಷ್ಟಿ ಉಂಟಾಗಿತ್ತು. ಶ್ರೀಮಹಾರಾಜರು ಅವರ ಮನೆಯ ಮುಂದಿನಿಂದ ಹೋಗುತ್ತಿದ್ದರು, ಆಕೆಯು ಒಳಗೆ ದೇವರ ಮನೆಯಲ್ಲಿ ದೇವರ ಮುಂದೆ ಇದ್ದಳು, ಅವಳು ಆಳನ್ನು ಕರೆದು ಹೇಳಿದಳು-ನಮ್ಮ ಮನೆಯು ಮುಂದಿನಿಂದ ಓರ್ವ ಮಹಾ ಸಾಧು ಹೋಗುತ್ತಿದ್ದಾರೆ, ಅವರನ್ನು ನಮ್ರತೆಯಿಂದ ನಮ್ಮ ಮನೆಗೆ ಕರೆದುಕೊಂಡು ಬಾ. ಮಹಾರಾಜರು ಒಳಗೆ ಬರುತ್ತಲೇ ಅವರ ಚರಣಗಳಲ್ಲಿ ಮಸ್ತಕವನ್ನಿಟ್ಟಳು. ಆ ದಂಪತಿಗಳು ಮಹಾರಾಜರನ್ನು ತಮ್ಮ ಮನೆಯಲ್ಲೇ ಇರುವಂತೆ ಪ್ರಾರ್ಥಿಸಿದರು. ಶ್ರೀಮಹಾರಾಜರನ್ನು ನೋಡುತ್ತಲೇ ಆ ಸಾಧ್ವಿಯ ಸ್ತನಗಳಿಂದ ಹಾಲು ಹರಿಯ ತೊಡಗಿತು. ಮೂರು ದಿನಗಳಲ್ಲಿ ಶ್ರೀಮಹಾರಾಜರು ಅವರ ಮನೆಯನ್ನು ಮತ್ತು ಕಾಶಿಯನ್ನು ಬಿಟ್ಟರು. ಎಲ್ಲೆಲ್ಲಿ ಯಾರ ಯಾರ ಉದ್ಧಾರವಾಗಬೇಕೋ, ಅಥವಾ ಯಾರಿಗೆ ದರ್ಶನ ಕೊಡುವುದಿರುತ್ತದೋ ಅಲ್ಲಲ್ಲಿಗೆ ಆಗ ಸಾಧೂ ಅಥವಾ ಸಂತರು ಹೋಗುತ್ತಾರೆ ಎಂಬ ಇತಿಹಾಸವಿದೆ.

ಮುಂದೆ ಶ್ರೀಮಹಾರಾಜರು ಸದ್ಗುರುಗಳ ಭೆಟ್ಟಿಗಾಗಿ ಯೆಹಳೆ ಊರಿಗೆ ಹೋದರು ಮತ್ತು ಒಂದು ವರ್ಷದ ಬಳಿಕ ಅವರು ಗೊಂದವಲೆಗೆ ಮರಳಿದರು.

ಸಾಯಂಕಾಲದ ಸಮಯ ಅವರು ತಮ್ಮ ಮನೆ ಮುಂದೆ ಬಂದು 'ಜಯ ಜಯ ರಘುವೀರ ಸಮರ್ಥ' ಎಂದು ಗಟ್ಟಿಯಾಗಿ ಹೇಳಿದರು. ಅವರ ತಾಯಿ ಭಿಕ್ಷೆ ಎತ್ತಿಕೊಂಡು ಹೊರಗೆ ಬಂದರು. ಭಿಕಾರಿಯು ಆ ಸಿಧಾ ಸ್ವೀಕರಿಸಲಿಲ್ಲ. ಅವನೆಂದ – ಅಮ್ಮಾ! ನನಗೆ ಈ ಭಿಕ್ಷೆ ಬೇಡ, ಒಳ ಮನೆಯ ಮೂಲೆಯ ಗಟ್ಟಿ ಮೊಸರಿನ ಪಾತ್ರೆ ನನಗೆ ಕೊಡು. ಬಾಲ್ಯದಲ್ಲಿ, ಮಹಾರಾಜರಿಗೆ ಗಟ್ಟಿ ಮೊಸರು ತುಂಬಾ ಮೆಚ್ಚುಗೆಯಾಗುತ್ತಿತ್ತು . ಮಾತೃಹೃದಯ ಹೇಗಿರುತ್ತದೆ! ಗೀತಾಬಾಯಿಯು ಇಂದು ನನ್ನ ಗಣೂ ಮರಳಿ ಬರುವನು ಎಂಬ ಆಶೆಯಿಂದ ಪ್ರತಿದಿನ ಆ ಪಾತ್ರೆಯಲ್ಲಿ ಮೊಸರು ಹೆಪ್ಪಿಟ್ಟು ಇಡುತ್ತಿದ್ದರು, ಕಣ್ಣುಗಳಲ್ಲಿ ಪ್ರಾಣತಂದು ಅವನ ಪ್ರತೀಕ್ಷೆ ಮಾಡುತ್ತಿದ್ದರು. ಅವರು ಒಳಗೆ ಹೋಗಿ ಒಳಮನೆಯಿಂದ ಮೊಸರಿನ ಪಾತ್ರೆ ತಂದರು. ಶ್ರೀಮಹಾರಾಜರು ಆ ಪಾತ್ರೆಯನ್ನು ತೆಗೆದು ಕೊಳ್ಳದೆ ತನ್ನ ತಾಯಿಯ ಕಡೆ ನೋಡಿ ಅತೀವ ಸ್ನೇಹದಿಂದ ನಕ್ಕುಬಿಟ್ಟರು. ತಾಯಿಯು ತತ್‌ಕ್ಷಣ ಮುಂದೆ ಹೋಗಿ ಮಹಾರಾಜರನ್ನು ಅಪ್ಪಿಕೊಂಡರು. 'ಗಣೂ, ನನ್ನ ಗಣೂ' ಇಷ್ಟೇ ಆಕೆಯಿಂದ ಉಚ್ಚರಿಸಲಾಯಿತು. ಗೀತಾಬಾಯಿ ಮತ್ತು ಮಹಾರಾಜ ಇಬ್ಬರ ಕಣ್ಣುಗಳಿಂದಲೂ ಅಶ್ರುಧಾರೆ ಹರಿಯಿತು. ಗದ್ದಲ ಕೇಳಿ ರಾವಜೀ ಬಂದರು, ಶ್ರೀಮಹಾರಾಜರು ತಮ್ಮ ತಂದೆ-ತಾಯಿಯವರ ಚರಣಗಳಲ್ಲಿ ತಲೆಯನ್ನಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿದರು. ಚಿಂತೂಬುವಾನೂ ಬಂದ, ಮನೆಯ ಎಲ್ಲರೂ ಸೇರಿದರು, ಕುತೂಹಲದಿಂದ ಅಕ್ಕ-ಪಕ್ಕದ ಪರಿಚಿತರು ಮಹಾರಾಜರನ್ನು ಭೆಟ್ಟಿಯಾಗಲು ಬಂದರು. ಒಂಭತ್ತು ವರ್ಷದ ಬಳಿಕ ಬಂದ ಮಹಾರಾಜರು ಅತಿಶಯ ತೇಜಃ ಪುಂಜ, ಮೃದುಭಾಷಿ ಮತ್ತು ಮಧುರಭಾಷಿ ಅವರನ್ನು ನೋಡಿ ಜನರು ತಮ್ಮ ಪ್ರಾಪಂಚಿಕ ಸಮಸ್ಯೆ ಹೇಳತೊಡಗಿದರು. ಶ್ರೀಮಹಾರಾಜರು ಸರಿಯಾದ ಉಪಾಯ ಹೇಳುತ್ತಿದ್ದರು, ಆದರೆ ಪ್ರತಿಯೊಬ್ಬರಿಗೂ ಶ್ರೀರಾಮ ನಾಮಸ್ಮರಣೆ ಮಾಡಲು ತಿಳಿಸುತ್ತಿದ್ದರು. ಅವರು ಹೇಳುತ್ತಿದ್ದರು – 'ಪ್ರಭು ರಾಮಚಂದ್ರನ ನಾಮಸ್ಮರಣೆ ನಿಮ್ಮನ್ನು ಪ್ರಪಂಚದಿಂದ, ಭವಸಾಗರದಿಂದ ದಾಟಿಸೀತು' ಮಹಾರಾಜರು ಅತ್ಯಂತ ಲಜ್ಜಾಸ್ವಭಾವದವರು, ಜನರು ಬರುತ್ತಾರೆ, ತನ್ನ ತಂದೆಯ ಎದುರಿಗೇ ತನ್ನ ಚರಣ ವಂದನೆ ಮಾಡುತ್ತಾರೆ, ಇದು ಸರಿಯಲ್ಲ. ಅಲ್ಲದೆ ದಿನದಿಂದ ದಿನಕ್ಕೆ ಊರೂರುಗಳಿಂದ ಭಕ್ತರು ಬರತೊಡಗಿದರು, ಜನರ ದಟ್ಟಣೆ ಹೆಚ್ಚಾಯಿತು, ಮನೆಯಲ್ಲಿ ಅನಾನುಕೂಲವೆಂದು ತಿಳಿದು, ಮಹಾರಾಜರ ಮನೆಯ ಮುಂದೆ ಒಂದು ವಿಟ್ಠಲ ಮಂದಿರವಿತ್ತು , ಆ ಮಂದಿರದ ಎದುರಿಗೆ ಒಂದು ಹಜಾರಕಟ್ಟಿ ಮಹಾರಾಜರು ಅಲ್ಲಿ ಕುಳಿತುಕೊಳ್ಳ ತೊಡಗಿದರು.

ತೇಜಸ್ವೀ ಮುಖ, ಗಡ್ಡ-ಮೀಸೆ ಬೆಳೆದಿರುವ, ಕೌಪೀನಧಾರೀ, ಮೈಗೆ ಭಸ್ಮ, ಕಾಲಲ್ಲಿ ಪಾದುಕೆ, ಒಂದು ಕೈಯಲ್ಲಿ ಯೋಗದಂಡ, ಇನ್ನೊಂದರಲ್ಲಿ ರುದ್ರಾಕ್ಷಿ ಮಾಲೆ, ಹೀಗಿದ್ದರು ಶ್ರೀಮಹಾರಾಜರು, ಗೊಂದವಲೆಯ ಮುದ್ದಿನ ಗಣೂಬುವಾ, ದೊಡ್ಡ - ದೊಡ್ಡ ಹುದ್ದೆಯಲ್ಲಿದ್ದವರು, ಹೆಸರಾಂತ ಧನಿಕರು, ಇಂತಹ ಜನರೂ ಶ್ರೀಮಹಾರಾಜರಿಗೆ ಭೆಟ್ಟಿಯಾಗ ತೊಡಗಿದರು. ಶ್ರೀಮಹಾರಾಜರ ಸಾತ್ವಿಕ ವೃತ್ತಿಯಿಂದ ಜನರು ಪ್ರಭಾವಿತರಾಗ ತೊಡಗಿದರು. ಒಂದು ವ್ಯಕ್ತಿಗೆ ಇಷ್ಟು ಮಾನ-ಸಮ್ಮಾನ ಸಿಗುವುದು ಎಲ್ಲರಿಗೆ ಹೇಗೆ ಮೆಚ್ಚಿಕೆಯಾಗುವುದು? ದೂರದವರನ್ನು ಬಿಡಿ, ಹತ್ತಿರದವರಿಗೂ ಸಹನೆಯಾಗುತ್ತಿರಲಿಲ್ಲ. ಶ್ರೀಮಹಾರಾಜರು ಭಕ್ತರಿಗೆ ಹೇಳುವುದನ್ನು ನಿರಪೇಕ್ಷಭಾವದಿಂದ, ಅದರಲ್ಲಿ ಅವರ ಸ್ವಂತದ ಯಾವುದೇ ಇಚ್ಛೆ ಇರಲಿಲ್ಲ. ಯಾರಲ್ಲಿಯೂ ಅವರು ಏನನ್ನೂ ಬೇಡುತ್ತಿರಲಿಲ್ಲ. ಭಕ್ತರಿಗೆ ಅವರು ನಿರ್ದಿಷ್ಟ ಮಾರ್ಗ ಹೇಳುತ್ತಿದ್ದರು. ಕೇಳುವವನು ಸಂತೋಷ ಪಡುತ್ತಿದ್ದ, ಮುಖ್ಯ ಉಪದೇಶವೆಂದರೆ ನಾಮಸ್ಮರಣೆಯದು, ನಿರಪೇಕ್ಷ ವೃತ್ತಿಯಿಂದ ರಾಮನಾಮ ಸ್ಮರಿಸುವ, ನಾಮಕ್ಕಾಗಿ ನಾಮ ಸ್ಮರಣೆಯದು.

ಹೊರಗಿನ ಜನರು ಶ್ರೀಮಹಾರಾಜರ ಜನಸಂಗ್ರಹ, ಅವರ ಕೀರ್ತಿ ನೋಡಿ ಅವಾಕ್ಕಾಗುತ್ತಿದ್ದರು. ಅದರಲ್ಲಿಯೂ ಯಾರು ತನ್ನನ್ನು ಧಾರ್ಮಿಕ, ಆಧ್ಯಾತ್ಮಿಕ ಎಂದು ತಿಳಿಯುತ್ತಿದ್ದರೋ ಅವರ ಅಸೂಯೆ ಎಷ್ಟಾಗಬೇಕು! ದೂರದವರನ್ನು ಬಿಡಿ, ಕೆಲವು ಆಪ್ತರೂ ಒಳಗಿನಿಂದ ಅಸ್ವಸ್ಥರಾದರು. ಇವನು ಗೊಂದವಲೆಗೆ ಬಂದು ಎಲ್ಲವೂ ಅವನ ಕೈವಶವಾಯಿತು. ಇವನ ಮದುವೆಯಾದರೋ ಆಗಿಯೇ ಹೋಗಿದೆ, ಇವನನ್ನು ಪ್ರಪಂಚದಲ್ಲಿ ತೊಡಗಿಸಿದರೆ ಇವನ ಸಾಧುತನ ಮುಗಿದೀತು. ಒಂದು ದಿನ ಚಿಂತು ಬುವಾರವರು ಜಟಾಭಾರ ಇಳಿಸುವ ವಿಷಯ ಮಹಾರಾಜರಲ್ಲಿ ತೆಗೆದ, ಶ್ರೀಮಹಾರಾಜರು ಇದರ ಹಿಂದಿನ ಉದ್ದೇಶ ತಿಳಿದರು, ಜಟೆ ಇರಲಿ ಇಲ್ಲದಿರಲಿ, ಕೌಪೀನ ಸಾಧುವೇಷ ಇರಲಿ ಬಿಡಲಿ, ಈಶ ಭಕ್ತಿಯು ಬಾಹ್ಯ ವಿಷಯವನ್ನು ಅವಲಂಬಿಸಿ ಇರುವುದಿಲ್ಲ, ಇದು ನಿಶ್ಚಿತ. ಮುಗಳ್ನಕ್ಕು ಮಹಾರಾಜರು ಹೇಳಿದರು-ಜಟೆಯನ್ನು ವಿಸರ್ಜಿಸಬೇಕು, ಆದರೆ ಅದಕ್ಕೆ ದೊಡ್ಡ ಸಾಂಗತಾ ಧರ್ಮದಲ್ಲಿ ಹೇಳಿದೆ, ಆಶ್ಚರ್ಯವೆಂದರೆ ಜನರು, ಆಪ್ತರು ದೊಡ್ಡ ಖರ್ಚು ಮಾಡಿದರು. ಯಥಾ ಸಾಂಗವಾಗಿ ವಿಧಿ ನಡೆಯಿತು. ವಿಪುಲ ಅನ್ನದಾನವಾಯಿತು. ಈ ಸಮಾರಂಭಕ್ಕೆ ಅತ್ತೆ ಮಾವಂದಿರೂ ಆಗಮಿಸಿದ್ದರು.

ಮಹಾರಾಜರ ಪತ್ನೀ ಸರಸ್ವತಿಯ ವಿಷಯ ಬಂತು, ಶ್ರೀಮಹಾರಾಜರು ಕೂಡಲೇ ಒಪ್ಪಿಗೆ ಕೊಟ್ಟರು, ಮರುದಿನವೇ ಅವರು ಮಾವನ ಜೊತೆಗೆ ಖಾತವಳಕ್ಕೆ ಬಂದರು. ಮುಂಡನ ಮಾಡಿದ, ಸಂಸಾರೀ ಪತಿರಾಜರು ತನ್ನನ್ನು ಕರೆದುಕೊಂಡು ಹೋಗಲು ಬಂದಿರುವರೆಂದು ತಿಳಿದು ಸರಸ್ವತಿಗೆ ಸಮಾಧಾನವಾಯಿತು. ತನ್ನ ಸಾಧನೆ, ಉಪಾಸನೆ ಫಲಿಸಿತು ಎಂದೆನಿಸಿತು ಆಕೆಗೆ. ಅವಳಿಗೆ ಆದ ಆನಂದದ ವರ್ಣನೆ ಶಬ್ದಾತೀತ. ನಾಲ್ಕು ದಿನ ಮಾವನ ಮನೆಯಲ್ಲಿ ಆದರ ಆತಿಥ್ಯ ಪಡೆದು ಶ್ರೀಮಹಾರಾಜರು ಪತ್ನಿಯನ್ನು ಕರೆದುಕೊಂಡು ಗೊಂದವಲೆಗೆ ಮರಳಿದರು. ರಾವಜೀ, ಗೀತಾಬಾಯಿಯವರಿಬ್ಬರಿಗೂ ಅತೀವ ಆನಂದವಾಯಿತು. ಶ್ರೀಮಹಾರಾಜರ ಗೃಹಸ್ಥಾಶ್ರಮ ಪ್ರಾರಂಭಗೊಂಡಿತು.

ಬೆಳಿಗ್ಗೆ ಐದೂವರೆಗೆ ಎದ್ದು ಪ್ರಾತರ್ವಿಧಿಗಳನ್ನು ಪೂರೈಸಿ, ವಿಟ್ಠಲ-ರುಕ್ಮಿಣಿಯರ ದರ್ಶನ ಮಾಡುವುದು, ಮತ್ತೆ ತಂದೆ-ತಾಯಿಯರನ್ನು ಕಂಡು ಪಾದಾಭಿವಂದನ, ಕಾಕಡಾರತಿ ಮಾಡಿ ಭಜನೆ ಹಾಡುವುದು, ಕಾಕಡಾರತಿಗೆ ಕೆಲವು ಭಕ್ತರು ಬರುತ್ತಿದ್ದರು. ಆರತಿ ಭಜನೆಯ ಬಳಿಕ ಸ್ವಲ್ಪ ದಾಸಬೋಧ ನಿರೂಪಣ ಮಾಡುವುದು, ಬೆಳಗ್ಗಿನ ಎಂಟುಗಂಟೆಯವರೆಗೆ ಈ ನಿರೂಪಣ ನಡೆಯುವುದು. ಅನಂತರ ಶಂಕೆ, ಸಮಸ್ಯೆ ಎತ್ತಿಕೊಂಡು ಬಂದವರ ಭೇಟ್ಟಿಯಾಗಿ ಶಂಕಾಸಮಾಧಾನ, ಸಮಸ್ಯಾನಿವಾರಣ ಮೂರು ತಾಸು ನಡೆಯುವುದು; ಹನ್ನೊಂದು ಗಂಟೆಗೆ ವಿಠೋಬ ಮಂದಿರದಲ್ಲಿ ಪೋಥಿ (ಗ್ರಂಥ) ವಾಚನ, ಅದರಲ್ಲಿ ಅಧ್ಯಾತ್ಮ ರಾಮಾಯಣ, ಏಕನಾಥೀ ಭಾಗವತ, ಜಗದ್ಗುರು ತುಕಾರಾಮರ ಗಾಥಾ ಬಳಿಕ ಗ್ರಂಥ ನಿರೂಪಣ ಆಗುತ್ತಿತ್ತು . ನಿರೂಪಣೆಗಾಗಿ ಮುಖ್ಯವಾಗಿ ಗೋಸ್ವಾಮೀ ತುಲಸೀದಾಸರ ಶ್ರೀರಾಮಚರಿತ ಮಾನಸ ಇರುತ್ತಿತ್ತು . ರಾತ್ರೆ ಫಲಾಹಾರ ಆದ ಬಳಿಕ ದೇವರ ಭಜನೆ ಆರತಿ, ಅನಂತರ ಶ್ರೀಮಹಾರಾಜರು ತಂದೆ-ತಾಯಿಯರಿಗೆ ನಮಸ್ಕರಿಸಿ ನಿದ್ದೆಗಾಗಿ ತೇರಳುತ್ತಿದ್ದರು.

ಶ್ರೀಮಹಾರಾಜರ ನಿತ್ಯಕ್ರಮ ಎಂದೂ ತಪ್ಪುತ್ತಿರಲಿಲ್ಲ. ಅವರ ಪತ್ನೀ ಸರಸ್ವತೀ ಅವರಿಗೆ ತಕ್ಕಂತೆ ಇದ್ದರು. ಅತ್ತೆ-ಮಾವಂದಿರಲ್ಲಿ ನಮ್ರವಾಗಿ ನಡೆಯುತ್ತಿದ್ದರು. ಮನೆಯಲ್ಲಿ ಯಾರೂ ನೋಯುವಂತೆ ಮಾತು ಮತ್ತು ವರ್ತನೆ ಅವರಿಂದ ಎಂದೂ ಆಗಲಿಲ್ಲ. ಪೂಜೆಗೆ ಸಿದ್ಧತೆ, ಆರ್ಥಿಕ-ವ್ಯವಹಾರ ಹೀಗೆ ಅನೇಕ ಸಂಗತಿಗಳನ್ನು ಅವರು ಪತಿಯಿಂದ ಮತ್ತು ನಿರೀಕ್ಷಣದಿಂದ ಕಲಿತುಕೊಂಡರು. ಭಗವದ್ಭಜನೆ, ನಾಮಸ್ಮರಣೆ ಮತ್ತು ಅನ್ನದಾನ ಇದು ಮಹಾರಾಜರ ತ್ರಿಸೂತ್ರಿಯನ್ನು ಅವರು ಮನಃಪೂರ್ವಕ ಅಂಗೀಕರಿಸಿದ್ದರು. ಬಹಳ ಜನರಿರಲೀ, ಅಥವಾ ಹಿರಿಯ ಜನರಿರಲೀ ಅವರು ಎಲ್ಲರೊಂದಿಗೆ ಪ್ರೇಮದಿಂದ ವ್ಯವಹರಿಸುತ್ತಿದ್ದರು. ಇದೆಲ್ಲ ಕರ್ತವ್ಯಗಳಲ್ಲಿ ಅವರು ಭಗವಂತನ ಅನುಸಂಧಾನ ಬಿಟ್ಟಿಲ್ಲ. ನಿರಪೇಕ್ಷ ನಾಮಸ್ಮರಣೆ ಸದಾ ಇರುತ್ತಿತ್ತು. ತನ್ನ

ಪತ್ನೀಯ ವರ್ತನೆಯಿಂದ ಮಹಾರಾಜರಿಗೆ ವಿಲಕ್ಷಣ ಸಂತೋಷವಾಗುತ್ತಿತ್ತು. ಅವರು ತಮ್ಮ ಪ್ರವಾಸದಲ್ಲಿನ ಅನುಭವ, ಗಮ್ಮತ್ತು ಪತ್ನಿಗೆ ಏಕಾಂತದಲ್ಲಿ ಹೇಳುತ್ತಿದ್ದರು. ಆಗ ಸರಸ್ವತೀದೇವಿಯೂ ಪತಿದೇವರ ಸದ್ಗುರುಗಳನ್ನು ಭೇಟಿಯಾಗುವ ಇಚ್ಛೆ ಪ್ರಕಟಿಸುತ್ತಿದ್ದರು.

ಮಹಾರಾಜರ ಪೂರ್ವಜರಿಂದಲೂ ಅವರಲ್ಲಿ ಕುಲಕರ್ಣಿತನ ಇತ್ತು. ಈ ಮನೆತನ ಅತ್ಯಂತ ಧಾರ್ಮಿಕ, ಸೌಮ್ಯ ಮತ್ತು ನ್ಯಾಯಿಯಾಗಿತ್ತು. ಅದರಿಂದ ಈ ಕುಲಕರ್ಣಿತನಕ್ಕೆ ಪಂಚಕ್ರೋಶದಲ್ಲಿ ಭಾರೀ ಸಮ್ಮಾನವಿತ್ತು . ಈ ಕೆಲಸದ ಬದಲಿಗೆ ಕುಲಕರ್ಣಿಯವರಿಗೆ ಜಹಗೀರ (ಹೊಲ-ಮನೆ) ಕೊಡಲಾಗುತ್ತಿತ್ತು. ಸರಕಾರಿ ಕರ ವಸೂಲಿ ಮಾಡುವುದು, ಜಮೀನಿನ ಅಳತೆ ಮಾಡುವುದು, ಜಮೀನು-ಹೊಲದ ಕೊಟ್ಟು ಕೊಳ್ಳುವಿಕೆಯ ವ್ಯವಹಾರ ಸರಿಯಾಗಿದೆಯೇ ನೋಡುವುದು, ಗ್ರಾಮದಲ್ಲಿನ ಹನ್ನೆರಡು ಉದ್ದಿಮೆ ಗಾರರು -ಬಡಿಗ, ಅಗಸ, ಕಮ್ಮಾರ, ಕುಂಬಾರ ಮುಂತಾದವರಿಗೆ ಸಿಗುವ ಕೆಲಸ, ಅವರ ಪರಿಶ್ರಮಕ್ಕೆ ತಕ್ಕ ಪ್ರತಿಫಲ ವ್ಯವಸ್ಥೆ ನೋಡುವುದು, ಹೀಗೆ ಕುಲಕರ್ಣಿಗಳ ಹೊಣೆಗಾರಿಕೆ ಇರುತ್ತಿದ್ದವು. ತಾಯಿಯ ಇಚ್ಛೆಯಂತೆ ಮಹಾರಾಜರು ಈ ಕುಲಕರ್ಣಿಕೆ ಸ್ವೀಕರಿಸಿದರು. ರಾವಜೀಯವರಿಗೆ ವಯಸ್ಸಾಗಿತ್ತು, ಅವರು ಬಳಲಿದ್ದರು. ಅತಿಶಯ ನಿರಪೇಕ್ಷರಾದ ಮಹಾರಾಜರು, ನಿರಪೇಕ್ಷ ವೃತ್ತಿಯಿಂದ ವ್ಯವಹಾರ ಮಾಡುವುದರಿಂದ ಬಂದ ಜನರು ಅವಾಕ್ಕಾಗುತ್ತಿದ್ದರು. ತಂಟೆ-ತಕರಾರು ಬಿಡಿಸುವಾಗ ಅತಿಶಯ ಸಮಭಾವ ಕಾಪಾ ಡುವುದರಿಂದ ಎರಡೂ ಪಕ್ಷಗಳು ಸಮಾಧಾನ ಹೊಂದುತ್ತಿದ್ದರು. ಯಾರಿಗಾದರೂ ಆರ್ಥಿಕ ನಷ್ಟ ಉಂಟಾದಾಗ ಶ್ರೀಮಹಾರಾಜರು ಸ್ವಂತದ ಹಣಕೊಟ್ಟು ಅವರಿಗೆ ಸಹಾಯ ಮಾಡುತ್ತಿದ್ದರು. ಪಡೆಯುವವನು ನಾಚಿ ಹೇಳುತ್ತಿದ್ದ - ಮಹಾರಾಜ! ನೀವು ಏಕೆ ಕೊಡುತ್ತಿದ್ದೀರಿ? ಆಗ ಮಹಾರಾಜರು ಹೇಳುತ್ತಿದ್ದರು - ಹಾಗಲ್ಲ! ಕೊಡುವನು ನಾನಲ್ಲ, ಆ ರಾಮಚಂದ್ರನಿದ್ದಾನೆ. ಅವನ ಆಭಾರ ತಿಳಿಯುವುದು, ಋಣವೆಂದು ತಿಳಿಯುವುದಿದ್ದರೆ ಪ್ರಭುರಾಮಚಂದ್ರನ ತಿಳಿಯುವಾ, ಅವನ ನಾಮಸ್ಮರಣೆ ಮಾಡುವಾ.

ಶ್ರೀಮಹಾರಾಜರು ಕುಲಕರ್ಣಿಯಾದಾಗಿನಿಂದ ಎಲ್ಲೆಲ್ಲೂ ಶಾಂತತೆ, ಸಮಾಧನವಿತ್ತು. ಗೃಹಸ್ಥಾಶ್ರಮೀ ಮಹಾರಾಜರು ತಮ್ಮ ಆದರ್ಶ ವರ್ತನೆಯಿಂದ ಮನೆಯ ಮಂದಿ, ಅವರ ತಂದೆ-ತಾಯಿ ಅತಿಶಯ ಆನಂದದಲ್ಲಿದ್ದರು ಬರುವ ಸರಕಾರಿ ಅಧಿಕಾರೀ ಶ್ರೀಮಹಾರಾಜರ ವ್ಯವಹಾರ, ಅವರ ನ್ಯಾಯವೃತ್ತಿ ನೋಡಿ ಸಂತುಷ್ಟರಾಗುತ್ತಿದ್ದರು. ಶ್ರೀಮಹಾರಾಜರು ಆದರ್ಶ ಗೃಹಸ್ಥಾಶ್ರಮಿ ಆಗಿದ್ದರು. ಆಗಲೂ ಅವರ ಸಾಧನೆ ನಾಮಸ್ಮರಣೆ ನಡೆದೇ ಇತ್ತು.

□□

-: ಹದಿಮೂರು :-

# ಮಹಾರಾಜರು ಮತ್ತು ಸರಸ್ವತೀದೇವೀ

ಶ್ರೀ ಮಹಾರಾಜರು 28-29 ವಯಸ್ಸಿನವರು, ಉತ್ತಮವಾಗಿ ಕುಲಕರ್ಣಿಕೆ ನಡೆಸುವವರು, ಆದರ್ಶ ಗೃಹಸ್ಥಾಶ್ರಮೀ. ಕುಲಕರ್ಣಿಕೆ ನಿಮಿತ್ತವಾಗಿ ದಹಿವಡೀ, ಆಟಪಾಡೀ, ಗೋಮೆವಾಡೀ, ಮ್ಹಸವಡ, ಪಂಡರಪುರ, ಕುರವಲೀ, ಗಿರವೀ, ಕರ್ಹಾಡ, ಹೀಗೆ ಬೇರೆ - ಬೇರೆ ಊರುಗಳಿಗೆ ಹೋಗಬೇಕಾಗಿತ್ತು. ಸರಕಾರೀ ಕಾರ್ಯ ಕರ್ತವ್ಯವಾದರೋ ನಿಷ್ಠೆಯಿಂದ ನೆರವೇರಿಸುವುದು, ಜನರನ್ನು ಭೆಟ್ಟಿಯಾಗುವುದು, ಮಾತನಾಡುವುದು, ಜೊತೆಗೆ ಜನರಿಗೆ ರಾಮನಾಮ ಹೇಳಲು ಒತ್ತಾಯಿಸಿ ಹೇಳುತ್ತಿದ್ದರು. ತಮ್ಮ ಮಗ ಸಂಸಾರ ಮತ್ತು ಕುಲಕರ್ಣಿಕೆ ಎರಡನ್ನೂ ಚೆನ್ನಾಗಿ ನಡೆಸಿಕೊಂಡು ಹೋಗುತ್ತಾನೆ ಎಂದು ಗೀತಾಬಾಯಿಗೆ ಸಮಾಧಾನವಾಗುತ್ತಿತ್ತು ಆದರೂ ಅದು ಹೆಚ್ಚುದಿನ ನಡೆಯಲಿಲ್ಲ. ಒಂದು ದಿನ ಮಹಾರಾಜರು ಅವರಿಗೆ ಹೇಳಿದರು- ಈ ಕೆಲಸ ತುಂಬಾ ಆಯಿತು, ನನಗೆ ಬೇಸರ ಬಂದಿದೆ, ಸದ್ಗುರುಗಳ ದರ್ಶನಕೆ ಹೋಗಬೇಕೆಂದು ಯಾವಾಗಲೂ ಅನಿಸುತ್ತಿದೆ. ತಾಯಿಯ ಪ್ರತಿಕ್ರಿಯೆ ನೋಡದೆ ಅವರು ಕುಲಕರ್ಣಿಕೆ ನಡೆಸಲು ಬೇರೊಬ್ಬರನ್ನು ನೇಮಿಸಿ, ಅವರು ಮುಕ್ತರಾದರು.

ಗೊಂದವಲೆಯ ಮಾರುತಿ ಮಂದಿರದಲ್ಲಿ ಭಾವುಸಾಹೇಬ ಕೆತಕರ ಇವರ ಮುಕ್ಕಾಂ ಇತ್ತು. ಆಗ ಗಣೇಶ ಟೋಪಿ ತಲೆಯಲ್ಲಿ, ಕಫನಿ, ಹಣೆಗೆ ಕೇಶರ ಗಂಧ, ಕೈಯಲ್ಲಿ ಮಾಲೆ ಕಾಲಲ್ಲಿ ಪಾದುಕೆ (ಮರದಿಂದ ಮಾಡಿದ ಪಾದತ್ರಾಣ) ಹೀಗೆ ಮಹಾರಾಜರು ಅಲ್ಲಿಗೆ ಬಂದರು. ಶ್ರೀ ಮಹಾರಾಜರು ಕೇತಕರರನ್ನು ತಮ್ಮ ಮನೆಗೆ ಕರೆದುಕೊಂಡು ಹೋದರು. ಭಾವುಸಾಹೇಬ ನಿತ್ಯ ಗೀತೆ ಓದುತ್ತಿದ್ದರು. ಶ್ರೀಮಹಾರಾಜರು ಅವರಿಗೆ ಗೀತೆಯ ಒಂಭತ್ತನೆಯ ಅಧ್ಯಾಯ ಓದಲು ಹೇಳಿದರು. ಮುಂದೆ ಒಂದು ತಿಂಗಳಲ್ಲಿ ಬಾವುಸಾಹೇಬ ಮತ್ತು ಮಹಾರಾಜ ಇವರ ಭೆಟ್ಟಿ ಗೊಂದವಲೆಯಲ್ಲಿ ಪುನಃ ಆಯಿತು.

ಶ್ರೀಮಹಾರಾಜರು ಭಾವುಸಾಹೇಬರೊಂದಿಗೆ ಮ್ಹಸವಡಕ್ಕೆ ಹೋದರು. ಅಲ್ಲಿಂದ ಅವರು ಪಂಢರಪುರಕ್ಕೆ ಹೋದರು. ಪಂಢರಪುರದಿಂದ ಮರಳಿ ಬಂದು ಕೆಲದಿನಗಳಲ್ಲಿ ಅವರು ಪುನಃ ಸದ್ಗುರುಗಳ ಭೆಟಿಗೆ ಹೋಗಲು, ತಾಯಿಯ ಬಳಿ ಅನುಮತಿ ಬೇಡಿದರು. ಅನುಮತಿ ಕೊಡುವುದು, ಕೊಡದಿರುವುದರಲ್ಲಿ ಯಾವುದೇ ಅರ್ಥವಿಲ್ಲ ಇದು ಗೀತಾಬಾಯಿಯು ತಿಳಿದಿದ್ದರು. ಅವರೆಂದರು – ನಿನ್ನ ಮನಸ್ಸಿಗೆ ಬಂದ ಹಾಗೇ ಮಾಡು, ಆದರೆ ಹೋಗುವಾಗ ನಿಮ್ಮ ಪತ್ನಿಯನ್ನೂ ಕರೆದುಕೊಂಡು ಹೋಗು. ಒಬ್ಬನೇ ಹೋಗಬೇಡ. ಸರಸ್ವತಿಗೂ ತುಕಾಮಾಯಿಯ ದರ್ಶನ ಪಡೆಯುವ ಇಚ್ಚೆ ಇತ್ತು. ಜೊತೆಗೆ ಹೋಗಲು ಅವರು ಹಟ ಹಿಡಿದರು.

ಶ್ರೀತುಕಾಮಾಯಿಯ ದರ್ಶನ ಅಷ್ಟು ಸುಲಭ ಇರಲಿಲ್ಲ. ಕ್ರಿ.ಶ. 1874ರಲ್ಲಿ ಒಂದು ಮಧ್ಯರಾತ್ರಿ ಶ್ರೀಮಹಾರಾಜರು ಸರಸ್ವತಿಯೊಂದಿಗೆ ಮನೆಯಿಂದ ಹೊರಟರು. ಮಹಾರಾಜರು ಓಡತೊಡಗಿದರು, ಸರಸ್ವತಿಯೂ ಅವರ ಹಿಂದೆ ಓಡತೊಡಗಿದರು. ತನ್ನ ಪತ್ನಿಗೆ ಭಯವಾಗಬೇಕೆಂದು ಅವರು ಆಕೆಯ ಕಡೆಗೆ ಕಲ್ಲು ತೂರಲು ತೊಡಗಿದರು. ಅವಳಿಗೆ ತಾಗದೆ ಅವಳ ಪಕ್ಕದಿಂದ ಹಾದು ಹೋಗುವ ಹಾಗೆ ಕಲ್ಲು ತೂರಿದರು. ಆದರೆ ಸರಸ್ವತಿಯ ನಿರ್ಧಾರ ಗಟ್ಟಿಯಾಗಿತ್ತು, ನಿರ್ಭಯವಾಗಿ ಅವರು ಶ್ರೀಮಹಾರಾಜರ ಹಿಂದೆ ಓಡುತ್ತಲೇ ಇದ್ದರು. ಶ್ರೀಮಹಾರಾಜರು ತನ್ನ ಪತ್ನಿಯನ್ನು ಪರೀಕ್ಷಿಸುತ್ತಿದ್ದರು. ಅವರ ಪತ್ನಿಗೆ ನಿಜವಾಗಿಯೂ ಸದ್ಗುರುಗಳ ಭೇಟಿಯ ಆಸೆ ಇದೆ ಎಂದು ಅವರು ತಿಳಿದರು. ಈಗ ಇಬ್ಬರೂ ಸೇರಿ ಸದ್ಗುರುಗಳ ದರ್ಶನಕ್ಕಾಗಿ ಹೊರಟರು. ಯೆಹಳೆಗಾಂವ ಬಂತು. ಇಬ್ಬರೂ ಸದ್ಗುರುಗಳಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಶ್ರೀತುಕಾಮಾಯಿ ಇಬ್ಬರ ಬಾಯಿಗೂ ಸಕ್ಕರೆ ಹಾಕಿದರು. ಅವರು ಆ ಇಬ್ಬರನ್ನು ತಮ್ಮ ಬಳಿ ಎಂಟುದಿನ ಇರಿಸಿಕೊಂಡರು. ಈಗ ಅಲ್ಲಿಂದ ಹೊರಡುವ ಸಮಯ ಶ್ರೀಮಹಾರಾಜರು ಸದ್ಗುರುಚರಣಗಳಲ್ಲಿ ಮಸ್ತಕನಿಟ್ಟರು, ಸರಸ್ವತಿಯೂ ಶಿರವನ್ನಿಟ್ಟಳು. ತುಕಾಮಾಯಿ ಕೇಳಿದರು – ತಾಯಿ! ಹೇಳು ನಿನಗೇನು ಇಚ್ಛೆ ಇದೆ? ಸರಸ್ವತೀ ಹೇಳಿದಳು – ನನಗೆ ಇವರಂತಹ ಪುತ್ರ ಪ್ರಾಪ್ತಿಯಾಗಬೇಕು, ಇದೊಂದೇ ಇಚ್ಛೆ ಇದೆ. ಪ್ರಪಂಚದ ಅಶಾಶ್ವತ ಬೇಡಿಕೆ ಕೇಳಿ ಗುರುಶಿಷ್ಯರು ಪರಸ್ಪರ ನೋಡಿ ನಕ್ಕರು. ತುಕಾಯಿಯವರು 'ತಥಾಸ್ತು' ಎಂದರು.

ಶ್ರೀಮಹಾರಾಜರು ಮತ್ತು ಸರಸ್ವತಿಯವರು ಯೆಹಳೆಯಿಂದ ಹೊರಟರು. ದಾರಿಯಲ್ಲಿ ಅವರು ತನ್ನ ಪತ್ನಿಗೆ ಹೇಳಿದರು – ನೀನು ಸದ್ಗುರುಗಳ ಬಳಿ ಅಶಾಶ್ವತದ ಬೇಡಿಕೆ ಮಾಡಿದೆ. ಅವರ ಕೃಪೆಯಿಂದ ಗಂಡು ಮಗು ಆದೀತು, ಆದರೆ ಅವನು

ಅಲ್ಪಾಯುಷಿಯಾಗುವನು. ಸರಸ್ವತಿಗೆ ಪತಿಯ ಮಾತು ತಿಳಿಯಿತು. ಆದರೆ ಈಗ ಎಲ್ಲ ಆಗಿಹೋಗಿತ್ತು. ಅವಳೆಂದಳು - ತಾಯಿಗೆ ಪುತ್ರವಾಗಬೇಕು ಎಂದೇ ಅನಿಸುತ್ತದೆ. ಕೇವಲ ಸ್ತ್ರೀಬುದ್ಧಿಯಿಂದ ನಾನು ಬೇಡಿದೆ, ತಪ್ಪಾಯಿತು ಇನ್ನು ನೀವೇ ದಾರಿ ತೋರಿರಿ.

ಶ್ರೀಮಹಾರಾಜರು ಪತ್ನಿಯನ್ನು ಕರೆದುಕೊಂಡು ನಾಸಿಕಕ್ಕೆ ಬಂದರು. ಅಲ್ಲಿ ಅವರು ಗೋದಾವರಿಯ ತೀರದ ಒಂದು ಮಂದಿರದಲ್ಲಿ ಉಳಕೊಂಡರು. ಶ್ರೀಮಹಾರಾಜರು ಸರಸ್ವತಿಯ ಕೂದಲುಗಳಿಗೆ ಆಲದ ಮೇಣ ಹಚ್ಚಿದರು, ಕೊರಳ ಮಂಗಳ ಸೂತ್ರ ತೆಗೆದು ತುಳಸೀಮಾಲೆ ತೊಡಸಿದರು. ಕೈಗಳು ಬಳೆ ತೆಗೆದು ಅಲ್ಲಿಗೆ ತುಳಸೀಪತ್ರದ ಕಂಕಣ ಬಂತು, ಹಣೆಯ ಕೆಂಪು ಕುಂಕುಮ ತಿಲಕ ಹೋಗಿ ಅಲ್ಲಿ ಭಸ್ಮ ಹಚ್ಚಿದರು, ಮೈಮೇಲಿನ ಬಣ್ಣದ ಸೀರೆ ಬದಲು ಬಿಳಿಯ ಸೀರೆ ಬಂತು, ಆಕೆಯ ಕೈಗೆ ರುದ್ರಾಕ್ಷಿ ಮಾಲೆ ಕೊಟ್ಟರು. ಶ್ರೀಮಹಾರಾಜರು ಆಕೆಯನ್ನು ಜೊಗತಿಯಾಗಿಸಿದರು. 27-28 ವರ್ಷದ ಗೌರವರ್ಣೆ ಸರಸ್ವತೀ ಈ ವೇಷದಲ್ಲಿ ಹೆಚ್ಚು ತೇಜಸ್ವೀಯಾಗಿ ಕಂಡರು. ಮಂದಿರದ ಒಂದು ಮೂಲೆಯಲ್ಲಿ ಶ್ರೀಮಹಾರಾಜರು ಮತ್ತು ಅವರ ಎದುರಿನ ಮೂಲೆಯಲ್ಲಿ ಸರಸ್ವತೀದೇವಿಯು ನಾಮಸಾಧನೆಗಾಗಿ ಕುಳಿತುಕೊಳ್ಳ ತೊಡಗಿದರು. ಏಳೆಂಟು ದಿನಗಳಲ್ಲಿ ಒಬ್ಬ ಫೌಜದಾರ ಬಂದ, ಅವನು ಅವರಿಬ್ಬರ ಪರಿಚಯ ಕೇಳಿದ. ಅವನು ಸರಸ್ವತೀ ದೇವಿಯೊಡನೆ ಅಸಭ್ಯವಾಗಿ ವರ್ತಿಸಿದ. ಆದರೆ ಸರಸ್ವತೀ ದೇವಿ ಕೆರಳಿದ ಸಿಂಹಿಣಿಯಂತೆ ಅವನತ್ತ ಧಾವಿಸಿದಳು. ಆ ಫೌಜದಾರ ಗಾಬರಿಗೊಂಡು ಓಡಿಹೋದನು.

ನಾಸಿಕ, ಪಂಚವಟಿ, ಶ್ರೀರಾಮ ಮತ್ತು ಸಾಧ್ವಿ ಸೀತೆಯು ವನವಾಸದ ಬಹಳಕಾಲ ಇಲ್ಲೇ ಕಳೆದಿದ್ದರು. ಸರಸ್ವತಿಗೆ ಆ ರಾಮಸೀತೆಯರ ಸ್ಮರಣೆಯಾಯಿತು. ಶ್ರೀಮಹಾರಾಜರು ಅವರಿಗೆ ಸಿದ್ಧಾಸನ ಹಾಕಿ ನಾಮಸ್ಮರಣೆ ಅಭ್ಯಾಸ ಕಲಿಸಿದರು. ನಿಧಾನವಾಗಿ ಶ್ವಾಸದೊಂದಿಗೆ ನಾಮ ಜಪಿಸತೊಡಗಿದರು. ಮಾನಸಪೂಜೆಯಿಂದ ಮೂಲಕ ಆಧ್ಯಾತ್ಮಿಕ ಧಾರಣೆ ಹೆಚ್ಚು ದೃಢವಾಯಿತು. ಮಾನಸಪೂಜೆ ಮತ್ತು ಅದರಲ್ಲಿನ ತನ್ಮಯತೆ ಸಾಧಿಸಿದ ಮೇಲೆ ಕೆಲವು ಯೋಗ ಮುದ್ರೆಗಳನ್ನೂ ಅವರು ಪತ್ನೀಗೆ ಕಲಿಸಿದರು. ಈಗ ಸರಸ್ವತೀ ದೇವಿ ಧ್ಯಾನಮಗ್ನಳಾಗ ತೊಡಗಿದರು.

ಮಹಾರಾಜರು ಭಿಕ್ಷೆ ಬೇಡಿ ತರುತ್ತಿದ್ದರು. ಇಬ್ಬರೂ ಆ ಭಿಕ್ಷೆಯಿಂದ ಉದರಭರಣ ಮಾಡುತ್ತಿದ್ದರು. ಕೆಲವೊಮ್ಮೆ ಅವರು ಧ್ಯಾನಧಾರಣೆಯಿಂದಾಗಿ ಭಿಕ್ಷೆ ತರಲು ಹೋಗುತ್ತಿರಲಿಲ್ಲ. ಆಗ ಉಪವಾಸ ಆಗುತ್ತಿತ್ತು . ಅನ್ನ ಸಿಗುವುದು, ಉಪವಾಸ ಇರುವುದು ಇಬ್ಬರಿಗೂ ಒಂದೇ ಆಗಿತ್ತು. ಶ್ರೀಮಹಾರಾಜರು ಸರಸ್ವತಿಯನ್ನು ಮನೆಗೆ

ಕಳಿಸಲು ನಿಶ್ಚಯಿಸಿದರು. ಕೃಷ್ಣಾಜೀ ತ್ರ್ಯಂಬಕ ಎಂಬ ಶ್ರೀಮಹಾರಾಜರಿಗೆ ನಾಸಿಕದಲ್ಲಿ ಒಬ್ಬ ಶಿಷ್ಯನಿದ್ದನು. ಶ್ರೀಮಹಾರಾಜರು ಸರಸ್ವತೀದೇವಿಯನ್ನು ಮನೆಗೆ ತಲುಪಿಸುವ ಜವಾಬ್ದಾರಿ ಅವನಿಗೆ ಒಪ್ಪಿಸಿದರು ಮತ್ತು ಅವರು ಉತ್ತರದ ಕಡೆಗೆ ಹೋದರು. ಕೃಷ್ಣಾಜೀಪಂತರು ಸರಸ್ವತೀದೇವಿಯರನ್ನು ತಮ್ಮ ಮನೆಗೆ ಕರಕೊಂಡು ಹೋದರು. ಇಂತಹ ಜೋಗಿತಿಯ ರೂಪದಲ್ಲಿ ಅವರನ್ನು ಮನೆಯಲ್ಲಿ ಬಿಡುವುದು ಸರಿಯಲ್ಲ ಎಂದು ಅವರಿಗೆ ಅನಿಸಿತು. ಕೃಷ್ಣಾಜೀಪಂತರ ಪತ್ನಿಯು ಸರಸ್ವತೀದೇವಿಯ ಜಟೆ ಬಿಡಿಸಿದಳು, ಅವರಿಗೆ ಸ್ನಾನ ಮಾಡಿಸಿ, ಕೈಯಲ್ಲಿ ಬಳೆ, ಕೊರಳಲ್ಲಿ ಮಂಗಳಸೂತ್ರ ಹಾಕಿದರು. ಬಣ್ಣದ ಸೀರೆ ಉಡಿಸಿದರು. ಹಣೆಯಲ್ಲಿ ಕೆಂಪು ಕುಂಕುಮ ತಿಲಕ ಹಚ್ಚಿದರು. ಎರಡು ದಿನ ಉತ್ತಮ ಆತಿಥ್ಯ ನೀಡಿ, ಮತ್ತೆ ಕೃಷ್ಣಾಜೀಪಂತರು ಸರಸ್ವತೀದೇವಿಯರನ್ನು ಅವರ ತಂಗಿಯಮನೆ ನಾತ್ಯಾಪುತ್ಯಾಗೆ ತಂದು ಬಿಟ್ಟರು.

ತಂದೆ-ತಾಯಿ ಹಾಗೂ ಇತರ ಸಂಬಂಧಿಗಳು ಸರಸ್ವತಿಯನ್ನು ಭೆಟ್ಟಿಯಾಗಲು ನಾತ್ಯಾಪುತ್ಯಾಗೆ ಬಂದರು. ಸರಸ್ವತಿಯು ಅವರಿಗೆ ಎಲ್ಲ ವೃತ್ತಾಂತವನ್ನು ತಿಳಿಸಿದರು. ತಾಯಿಯು ಕಣ್ಣೀರನಿಟ್ಟಳು, ಸರಸ್ವತೀದೇವೀ ಈ ಅನುಭೂತಿಯನ್ನು ಸಾತ್ವಿಕ ಆನಂದ ವೆಂದು ಹೇಳಿದರು, ಆಧ್ಯಾತ್ಮಿಕ ತೃಪ್ತಿಯನ್ನು ವರ್ಣಿಸಿದರು. ಶ್ರೀಮಹಾರಾಜರಿಗೆ ಎಷ್ಟು ಜನರು ಭೇಟಿಗೆ ಬರುತ್ತಾರೆ, ಅವರನ್ನು ಎಷ್ಟು ಗೌರವಿಸುತ್ತಾರೆ ಎಂಬುದನ್ನು ವರ್ಣಿಸಿದರು. ಶ್ರೀತುಕಾಮಾಯಿಯ ಭೆಟ್ಟಿ, ತಾನು ಮಾಡಿದ ಸಾಮಾನ್ಯ ಬೇಡಿಕೆ, ಇತ್ಯಾದಿ ಎಲ್ಲ ವೃತ್ತಾಂತ ತವರು ಮನೆಯವರಿಗೆ ತಿಳಿಸಿದರು. ಕೆಲವು ದಿನ ತವರಿನಲ್ಲಿ ಇದ್ದು, ಅವರು ಗೊಂದವಲೆಗೆ ಬಂದರು. ಗಂಡನ ಮನೆಯಲ್ಲಿ ಎಲ್ಲವನ್ನೂ ವಿಸ್ತಾರವಾಗಿ ಹೇಳಿದರು.

ಶ್ರೀಮಹಾರಾಜರು ನಾಸಿಕದಿಂದ ಇಂದೋರಿಗೆ, ಇಂದೋರಿನಿಂದ ಕಾಶಿಗೆ, ಕಾಶಿಯಿಂದ ಅಯೋಧ್ಯೆಗೆ ಮತ್ತು ಅಯೋಧ್ಯೆಯಿಂದ ನೈಮಿಷಾರಣ್ಯಕ್ಕೆ ಹೋದರು. ಅಲ್ಲಿ ಅವರು ಕೆಲವು ಕಾಲ ವಾಸ್ತವ್ಯ ಮಾಡಿದರು. ಸುಮಾರು ಎಂಟತ್ತು ತಿಂಗಳಲ್ಲಿ ಮಹಾರಾಜರು ಗೊಂದವಲೆಗೆ ಬಂದರು. ಮುಂದೆ ಅವರು ಹೆಚ್ಚುಕಾಲ ಗೊಂದವಲೆಯಲ್ಲೇ ಉಳಿದರು.

ಕ್ರಿ.ಶ. 1876-77ರಲ್ಲಿ ಕ್ಷಾಮ ತಾಂಡವವಾಡಿತ್ತು, ಮಳೆಯಿಲ್ಲ. ನೆಲಬಾಯಿ ಬಿಟ್ಟಿದೆ, ರೈತರು ಮತ್ತು ಪ್ರಜೆಗಳು, ಸಂಕಟಪಟ್ಟರು, ಸರಕಾರವು ಕ್ಷಾಮಪರಿಹಾರ ಕೆಲಸ ಪ್ರಾರಂಭಿಸಿತು. ಆದರೆ ಅದು ಸಾಕಾಗುತ್ತಿರಲಿಲ್ಲ, ಜನರು ಉಪವಾಸ ಬಿದ್ದರು, ಆಗ ಶ್ರೀಮಹಾರಾಜರು ಗೊಂದವಲೆಯಲ್ಲಿ ತಮ್ಮ ಸ್ವಂತ ಹೊಲದಲ್ಲಿ ಬರಗಾರ ಕೆಲಸ

ಶುರು ಮಾಡಿದರು. ಈ ಹೊಲದಿಂದ ಆ ಹೊಲಕ್ಕೆ ಮಣ್ಣು ಹಾಕುವುದು, ಇನ್ನೂರೈವತ್ತು ಎತ್ತಿನ ಬಂಡಿ ಕೆಲಸಕ್ಕೆ ಹಚ್ಚಿದರು. ಕೆಲಸ ಮಾಡುವವರಿಗೆ ಪ್ರತಿದಿನ ಒಂದು ದೊಡ್ಡ ರೊಟ್ಟಿ ಮತ್ತು ಬಟ್ಟಲು ತುಂಬಾ ಸಾಂಬಾರು ಸಿಗುತ್ತಿತ್ತು. ಗೊಂದವಲೆ ಮತ್ತೆ ಅಕ್ಕ-ಪಕ್ಕದ ಗ್ರಾಮದ ಬಡವರು ಕೆಲಸಕ್ಕೆ ಬರತೊಡಗಿದರು. ಶ್ರೀಮಹಾರಾಜರು ತಮ್ಮ ಧಾನ್ಯದ ಭಂಡಾರ ಬರಿದು ಮಾಡಿದರು. ಮನೆಯ ಮಂದಿ ಮತ್ತು ಇತರ ಜನರು ರೊಟ್ಟಿ ಸುಡುತ್ತಿದ್ದರು. ದೊಡ್ಡ-ದೊಡ್ಡ ಪಾತ್ರೆಗಳಲ್ಲಿ ಸಾಂಬಾರು ಮಾಡುತ್ತಿದ್ದರು. ಸರಸ್ವತಿಯು ಮೇಲುಸ್ತುವಾರಿ ನೋಡಿಕೊಳ್ಳುತ್ತಿದ್ದರು. ಶ್ರೀಮಹಾರಾಜರ ಕಣ್ಣುಗಳಿಂದ ಅಶ್ರುಧಾರೆ ಹರಿಯುತ್ತಿತ್ತು.

ಔಂಧ ರಾಜರು ದುಷ್ಕಾಳ ಭಾಗದ ನೀರಿಕ್ಷಣೆ ಮಾಡಿ, ಗೊಂದವಲೆಗಾಗಿ ಔಂಧಕ್ಕೆ ಹೊರಟಿದ್ದರು. ಗೊಂದವಲೆಯ ಈ ಜನಸಮುದಾಯ ನೋಡಿ ಅವರು ಗಾಡಿ ನಿಲ್ಲಿಸಿದರು. ಎಲ್ಲ ವಿವರ ತಿಳಿದುಕೊಂಡರು. ಮತ್ತೆ ಅವರು ಮಹಾರಾಜರ ದರ್ಶನ ಪಡೆದು, ಅವರಿಗೆ ಮನಃಪೂರ್ವಕ ಧನ್ಯವಾದ ಕೊಟ್ಟು ಹೊರಟು ಹೋದರು.

□□

## -: ಹದಿನಾಲ್ಕು :-

# ದೂರದರ್ಶೀ ಶ್ರೀಮಹಾರಾಜರು

ಆದ್ಯ ಕ್ರಾಂತಿಕಾರೀ ಎಂದು ಪ್ರಸಿದ್ಧರಾದ ವಾಸುದೇವ ಬಲವಂತ ಫಡಕೆ. ಇವರು ವಿಲಕ್ಷಣ ದೇಶಾಭಿಮಾನಿ ಇದ್ದಂತೆ ದತ್ತಾತ್ರೇಯರ ಭಕ್ತರಾಗಿದ್ದರು. ಅವರು 'ದತ್ತಲಹರಿ' ಎಂಬ ಸಂಸ್ಕೃತ ಗ್ರಂಥವನ್ನು ಮರಾಠೀ ಭಾಷಾಂತರ ಮಾಡಿದ್ದರು. ಅವರಿಗೆ ಸಂಸ್ಕೃತ ವಾಙ್ಗಮಯದ ವ್ಯಾಸಂಗ ಚೆನ್ನಾಗಿತ್ತು . ಅವರು ಸೌರ, ರುದ್ರ, ಪವಮಾನ ಹೇಳುತ್ತಿದ್ದರು. ಅವರು ಗುರುಚರಿತ್ರದ ಒಂದು ಅಧ್ಯಾಯ ಓದದೆ ನೀರು ಮುಟ್ಟುತ್ತಿರಲಿಲ್ಲ. ಅವರು ಸಂಪೂರ್ಣ ಗುರುಚರಿತ್ರವನ್ನು ತಮ್ಮ ಸ್ವಂತ ಕೈಯಿಂದ ಬರೆದಿಟ್ಟಿದ್ದರು. ಅವರು ಪ್ರತಿದಿನ ಐದು ಸಾವಿರ ದತ್ತನಾಮದ ಜಪ ಮಾಡುತ್ತಿದ್ದರು. ಜಪದ ಬಳಿಕ ಧ್ಯಾನಧಾರಣಾ. ಅದು ಪಾರತಂತ್ರ್ಯದ ಸಮಯ, ಬ್ರಿಟೀಷರ ಅನ್ಯಾಯಿ ಒತ್ತಾಯದ ರಾಜ್ಯ, ವಾಸುದೇವ ಬಳವಂತ ಅಸ್ವಸ್ಥರಾಗಿದ್ದರು, ಮನಸ್ಸು ಸಶಸ್ತ್ರ ಕ್ರಾಂತಿಯಕೆಡೆ ಓಡುತ್ತಿತ್ತು. ಒತ್ತಾಯದ ಆಳ್ವಿಕೆಯನ್ನು ಕಿತ್ತೆಸೆಯಲು ಸಶಸ್ತ್ರ ಕ್ರಾಂತಿಯ ಆವಶ್ಯಕತೆ ಇತ್ತು. ಈ ಉದ್ದೇಶದಿಂದಲೇ ಅವರು ಅಕ್ಕಲಕೋಟ ಸ್ವಾಮೀ, ಶ್ರೀನೃಸಿಂಹ ಸರಸ್ವತೀ, ಶ್ರೀಮಾಣಿಕಪ್ರಭು, ಕಾಳಬೋವಾ ಮುಂತಾದ ಸಂತರನ್ನು ಭೆಟ್ಟಿಯಾಗಿ ಅವರಲ್ಲಿ ಅವರ ಮತ ಕೇಳಿದ್ದರು. ಎಲ್ಲ ಸಂತರೂ ಈ ಮಾತಿಗೆ ನಕಾರ ಕೊಟ್ಟರು, ಕಾರಣ ಕಾಲ ಅತಿಶಯ ಪ್ರತಿಕೂಲವಾಗಿತ್ತು.

ಯಾವ ಸಂತರೂ ಒಪ್ಪಿಗೆ ಕೊಡಲಿಲ್ಲ. ತಾನು ಬಂಡಾಯದ ಸಿದ್ಧತೆ ಮಾಡಿರುವೆನು, ಆ ಕಾರ್ಯಕ್ಕೆ ಭಗವಂತನ ಅಧಿಷ್ಠಾನ ಬೇಕು, ಸಂತರ ಆಶೀರ್ವಾದ ಬೇಕು, ವಾಸುದೇವ ಬಳವಂತನಿಗ ಸಮರ್ಥ ರಾಮದಾಸ ಸ್ವಾಮಿಗಳ ಮೇಲೆ ದೃಢ ಶ್ರದ್ಧೆ ಇತ್ತು . ಸಮರ್ಥ ವಚನ ಹೀಗಿದೆ-

**ಸಾಮರ್ಥ್ಯ ಆಹೆ ಚಳವಳಿಚೆ । ಜೋ ಜೋ ಕರೀಲ ತಯಾಚೆ ॥**
**ಪರಂತು ಯೇಥೇ ಭಗವಂತಾಚೆ । ಅಧಿಷ್ಠಾನ ಪಾಹಿಜೆ ॥**

(ಚಳುವಳಿಯ ಸಾಮರ್ಥ್ಯವಿದ್ದು, ಯಾರು ಯಾರು ಇದರಲ್ಲಿ ಧುಮುಕುವರೋ, ಅವರಿಗೆ ಮೊದಲು ಭಗವಂತನ ಅಧಿಷ್ಠಾನ ಬೇಕು.)

ಶ್ರೀಮಹಾರಾಜರ ಕೀರ್ತಿ ಅವರ ಕಿವಿಗೆ ಬಿತ್ತು, ಭಾರೀ ಆಸೆಯಿಂದ ಅವರು ಶ್ರೀಮಹಾರಾಜರ ಬಳಿಗೆ ಬಂದರು. ಎರಡು ವರ್ಷ ಚಳುವಳಿಯ ಸಿದ್ಧತೆ ಆಗಿತ್ತು. ಕೇವಲ ಸಂತರ ಆಶೀರ್ವಾದ ಬೇಕಾಗಿತ್ತು. ಶ್ರೀಮಹಾರಾಜರು ಆಶೀರ್ವಾದ ಕೊಡಲಿಲ್ಲ; ಕಾಲ ಅನುಕೂಲವಾಗಿರಲಿಲ್ಲ. ಮತ್ತೆ ಈ ಅಸ್ವಸ್ಥ ಕ್ರಾಂತಿವೀರ ಪುನಃ ಅಕ್ಕಲಕೋಟ ಸ್ವಾಮಿಗಳ ಬಳಿಗೆ ಬಂದನು. ತನ್ನ ಬಳಿ ಇದ್ದ ಖಡ್ಗವನ್ನು ಅವರ ಚರಣಗಳಲ್ಲಿ ಇರಿಸಿದನು. ಚರಣದಲ್ಲಿ ಮಸ್ತಕವಿಟ್ಟು ನಮಸ್ಕಾರ ಮಾಡಿ ಪಕ್ಕಕ್ಕೆ ಹೋಗಿ ಕುಳಿತ. ಆ ಖಡ್ಗವನ್ನು ಸ್ವಾಮಿಗಳು ಅವರ ಶ್ರೀಕರದಿಂದ ತನ್ನ ಕೈಗೆ ಕೊಟ್ಟರೆ ತನಗೆ ಆಶೀರ್ವಾದ ದೊರಕಿದಂತೆ ಎಂದು ವಾಸುದೇವ ಬಳವಂತನ ಕಲ್ಪನೆ ಇತ್ತು. ಆದರೆ ಸ್ವಾಮಿಗಳು ಓರ್ವ ಭಕ್ತನನ್ನು ಕರೆದು, ಆ ಖಡ್ಗವನ್ನು ಹತ್ತಿರದ ಒಂದು ಮರದಮೇಲೆ ಇಟ್ಟು ಬರಲು ಆಜ್ಞಾಪಿಸಿದರು. ಭಕ್ತನು ಆಜ್ಞೆಯನ್ನು ಪಾಲಿಸಿದನು. ಸ್ವಾಮಿಗಳ ಮಾತಿನ ತುಂಬಾ ಪ್ರತೀಕ್ಷೆ ಮಾಡಿದರು, ಸ್ವಾಮಿಗಳು ಮೌನವ್ರತ ಬಿಡಲಿಲ್ಲ. ಕೊನೆಗೆ ನಿರಾಸೆಯಿಂದ ಮರದಲ್ಲಿಟ್ಟ ಖಡ್ಗವನ್ನು ಎತ್ತಿಕೊಂಡು ಹೊರಟುಹೋದ. ಪುನಃ ಗೊಂದವಲೆಗೆ ಬಂದನು, ಶ್ರೀಮಹಾರಾಜರು ಅತಿಶಯ ಸಮರ್ಪಕ ಶಬ್ದಗಳಲ್ಲಿ ಅವರ ಮನಸ್ಸು ತಿರುಗಿಸುವ ಪ್ರಯತ್ನ ಮಾಡಿದರು, ಶ್ರೀಮಹಾರಾಜರು ಮತ್ತು ವಾಸುದೇವ ಬಳವಂತ ಇವರ ಪ್ರದೀರ್ಘ ಚರ್ಚೆ ನಡೆಯಿತು, ಶ್ರೀಮಹಾರಾಜರು ಅವರಿಗೆ ಸಶಸ್ತ್ರ ಬಂಡಾಯದ ಅನುಮತಿ ಕೊಡಲಿಲ್ಲ.

ದೇಶಪ್ರೇಮದಿಂದ ಪ್ರೇರಿತನಾದ ಈ ಕ್ರಾಂತಿವೀರ ಸಂತಕೃಪೆ ಆಗಲಿಲ್ಲವೆಂದು ನಿಂತಿಲ್ಲ, ಅವನು ಬ್ರಿಟೀಶ ಸರಕಾರಕ್ಕೆ ಆಹ್ವಾನ ಕೊಟ್ಟ. ರಾಮೋಶೀ, ಭಿಲ್ಲರು, ಬೆಸ್ತರು ಇವರ ಸಂಘಟನೆ ಮಾಡಿ, ಇವರಿಗೆ ಕತ್ತಿ-ಗುರಾಣಿ ದಂಡ ಇವುಗಳ ಯುದ್ಧವಿದ್ಯೆ, ಕತ್ತಿವರಸೆ, ಕುದುರೆಸವಾರಿ, ಬಂದೂಕು ಬಳಸುವುದು, ಹೀಗೆ ಯುದ್ಧ ಶಿಕ್ಷಣ ಕಲಿಸಿದರು. ಪ್ರಾರಂಭದಲ್ಲಿ ಧನಿಕರಲ್ಲಿ ಧನ ಕೇಳಿದ, ಅವರಿಗೆ ಯಾರೂ ಧನ ಕೊಡಲಿಲ್ಲ. ನಿಜವಾಗಿ ಆ ಧನ ಸ್ವಾತಂತ್ರ್ಯ ಸಂಗ್ರಾಮಕ್ಕಾಗಿ ಆವಶ್ಯಕವಾಗಿತ್ತು. ಆದರೆ ಶ್ರೀಮಂತರು ಯಾರೂ ಕೊಟ್ಟಿಲ್ಲ. ಮತ್ತೆ ವಾಸುದೇವ ಬಳವಂತರು ಸರಕಾರೀ ಖಜಾನೆ, ಸಾಹುಕಾರರು ಇಂತಹವರನ್ನು ಲೂಟಿ ಮಾಡಿದ. ಸ್ತ್ರೀಯರು, ಮಕ್ಕಳು, ವೃದ್ಧರು ಅಥವಾ ವ್ಯಕ್ತಿಶಃ ಯಾರಿಗೂ ಕಷ್ಟವಾಗಬಾರದು ಎಂದು ಜಾಗ್ರತೆ ವಹಿಸಿದ. ಹಣ, ಒಡವೆ ಸೇರಿತು. ಸಂಘಟನೆಯಲ್ಲಿನ ಕೆಲವು ಅಪವಾದ ಬಿಟ್ಟರೆ ಮೋಹ ಯಾರಿಗೆ

ಬಿಡುವುದಿಲ್ಲ! ಆ ಹಣ ಎತ್ತಿಕೊಂಡು ಪರಸ್ಪರ ತಮ್ಮ ಊರಿಗೆ ಹೋದರು. ವಾಸುದೇವನ ನಿಷ್ಠಾವಂತ ದೌಲತರಾವ ಆಂಗ್ಲರೊಡನೆ ಕಾದಾಡುತ್ತಿದ್ದಾಗ ವೀರಗತಿ ಪಡೆದ. ವಾಸುದೇವನಿಗೆ ಘೋರ ನಿರಾಶೆಯಾಯಿತು. ಈ ಆಕ್ರಮಣಗಳಿಂದ ಆಂಗ್ಲ ಸತ್ತೆ ಕೂಡಲೇ ಎಚ್ಚೆತ್ತುಕೊಂಡು, ವಾಸುದೇವ ಬಳವಂತನನ್ನು ಹುಡುಕ ತೊಡಗಿತು. ಆದರೆ ಅವನ ಸುಳಿವು ಸಿಗಲ್ಲಿ. ಅವರು ಭೂಗತರಾಗಿದ್ದರು. ಅವರನ್ನು ಹಿಡಿದು ಕೊಟ್ಟರೆ ಹತ್ತು ಸಾವಿರ ಇನಾಮು ಘೋಷಿಸಿತು. ವಾಸುದೇವ ಬಳವಂತರು ಜ್ವರದಿಂದ ಬಳಲಿದರು. ಅವರು ಜ್ವರಗ್ರಸ್ತರಾಗಿರುವಾಗಲೇ ಅವರನ್ನು ಡಾನಿಅಲ್‌ನು ಹಿಡಿದನು. ಅವರಿಗೆ ಅತೀವ ಹಿಂಸೆ ಕೊಟ್ಟು 9 ಜನವರಿ 1880ರಲ್ಲಿ ಅವರನ್ನು ಏಡನ್ ಬಂದಿಖಾನೆಗೆ ತಳ್ಳಿದನು. ಅಲ್ಲಿಂದ ಅವರು 12 ಅಕ್ಟೋಬರ 1880 ಕಾರಾಗೃಹ ಒಡೆದು ಪಲಾಯ ಮಾಡಿದರು. ಅವರನ್ನು ಬೆನ್ನಟ್ಟಿದರು. ಕೊನೆಗೆ ಬಿರಜಬೇದ ಅಲ್ಲಿ ಇವರನ್ನು ಪುನಃ ಬಂಧಿಸಲಾಯಿತು. ಪುನಃ ಅನೇಕ ಹಿಂಸೆ ಕೊಟ್ಟರು, ಅದರಲ್ಲಿ ಅವರಿಗೆ ಕ್ಷಯರೋಗ ಉಂಟಾಯಿತು, ತನಗಾದ ಕಷ್ಟಗಳ ಕುರಿತು ಅವರಿಗೆ ಪರಿವೆ ಇರಲಿಲ್ಲ. ಅವರ ಮನಸ್ಸಿನಲ್ಲಿ ಯುದ್ಧ ಯಶಸ್ವೀ ಆಗದಿದ್ದ ವೇದನೆ ಇತ್ತು . ಪಾರತಂತ್ರ್ಯದಲ್ಲಿ ಇಟ್ಟಿದ್ದ ಬ್ರಿಟೀಶರ ಕುರಿತು ದ್ವೇಷ ಇತ್ತು. ಕೊನೆಗೆ 17 ಫೆಬ್ರವರಿ 1883ರಲ್ಲಿ ಅವರು ಕಾರಾಗೃಹದಲ್ಲೇ ದೇಹಬಿಟ್ಟರು.

ಹೀಗೆ ಕೊನೆ ಆಗುವುದೆಂದೇ ಸಂತರು ಅನುಮತಿ ಕೊಡುತ್ತಿರಲಿಲ್ಲ. ದೂರದನ್ನು ತಿಳಿದಿರುವ ಸಂತರು ಮತ್ತು ದೇಶಕ್ಕಾಗಿ ಜೀವನಾಹುತಿ ಕೊಟ್ಟ ವಾಸುದೇವ ಬಳವಂತರಂತಹ ದಧೀಚಿ ಇಬ್ಬರೂ ವಂದನೀಯರು.

ಸದ್ಗುರು ಶ್ರೀತುಕಾಯಿಯ ಮುಂದೆ ವ್ಯಕ್ತವಾದ ಸರಸ್ವತೀದೇವಿಯ ಇಚ್ಛೆಗನುಸಾರ ಅವರಿಗೆ ಪುತ್ರಪ್ರಾಪ್ತಿಯಾಯಿತು. ಗೀತಾಬಾಯಿಯ ಆನಂದ ಆಕಾಶದಲ್ಲಿ ಹಿಡಿಸಲಾರದಷ್ಟಾಯಿತು. ಮಗು ಶ್ರೀ ಮಹಾರಾಜರ ಪ್ರತಿರೂಪದಂತೆ ಇತ್ತು. ಗೀತಾಬಾಯಿಯವರಿಗೆ ಗಣೂವಿನ ಬಾಲರೂಪ ನೆನಪಾಯಿತು. ಮೊಮ್ಮಗನ ನಾಮಕರಣ ಭಾರೀ ವೈಭವದಿಂದ ಮಾಡಬೇಕೆಂದು ಅಜ್ಜಿಗೆ ಅನಿಸುವುದು ಸ್ವಾಭಾವಿಕವಾಗಿಯೇ ಇತ್ತು. ಆದರೆ ಶ್ರೀಮಹಾರಾಜರು ನಾಮಕರಣ ಮಾಡುವುದನ್ನು ತಿರಸ್ಕರಿಸಿದರು. ಎಲ್ಲರಿಗೂ ಭಾರೀ ವಿಸ್ಮಯವಾಯಿತು, ಸ್ವಲ್ಪ ವಿಚಿತ್ರವಾಗಿಯೂ ಕಂಡಿತು. ಆದರೆ ವರ್ಷ ಕಳೆಯುವುದಕ್ಕೆ ಮೊದಲೇ ಮಗು ಇಹಲೋಕ ತ್ಯಜಿಸಿತು. ದುಃಖದ ಸಾಗರವೇ ಉಕ್ಕಿ ಹರಿಯಿತು. ಸರಸ್ವತೀದೇವಿಯರು ಹಾಸಿಗೆ ಹಿಡಿದರು. ಅವರಿಗೆ ಜ್ವರ ಬರತೊಡಗಿತು, ಶ್ರೀಮಹಾರಾಜರು ಹೇಳಿದರು – ನೀನು ದೇವಲೋಕಕ್ಕೆ ಹೋಗುವ ಕ್ಷಣ ಸಮೀಪ ಬಂದಿದೆ. ಸರಸ್ವತಿದೇವಿಯು ಉಪಾಸನೆಯ ತೇಜದಿಂದ

ನಿರ್ಭಯರಾದರು. ದಿನದಿಂದ ದಿನಕ್ಕೆ ಅವರು ನಾಮಸಾಧನೆಯಲ್ಲಿ ತನ್ಮಯರಾದರು. ಕೊನೇ ದಿನ ಸ್ನಾನವಾದ ಮೇಲೆ ಅವಳು ಅತ್ತೆ ಮಾವಂದಿರ ಚರಣಗಳಲ್ಲಿ ಶಿರವನ್ನಿಟ್ಟಳು. ಶ್ರೀಮಹಾರಾಜರ ಚರಣ ತೀರ್ಥ ತೆಗೆದುಕೊಂಡರು, ಸಿದ್ಧಾಸನ ಹಾಕಿ ನಾಮಸ್ಮರಣೆ ಮಾಡುತ್ತಾ ದೇಹವಿಟ್ಟರು.

ವಿರಕ್ತ ಶ್ರೀಮಹಾರಾಜರು ಅತಿಶಯ ತಟಸ್ಥರಾಗಿ ಇವೆಲ್ಲ ಘಟನೆಗಳನ್ನು ನೋಡುತ್ತಿದ್ದರು. ಪತ್ನಿಯ ನಿಧನದ ಬಳಿಕ ಶ್ರೀಮಹಾರಾಜರು ಮನೆಯಿಂದ ಹೊರಬಿದ್ದರು. ಪುನಃ ಭ್ರಮಣೆ ಶುರುವಾಯಿತು. ದಾರಿಯಲ್ಲಿ ಅವರಿಗೆ ಜೀಜಾಬಾಯಿ ಕಾಯಿಲೆಯಲ್ಲಿದ್ದಾರೆಂದು ತಿಳಿಯಿತು. ಅವರು ಆಕೆಯನ್ನು ಭೆಟ್ಟಿಯಾಗಲು ಇಂದೋರಿಗೆ ಹೋದರು. ಕೆಲವುದಿನ ಕಳೆದವು, ಒಂದು ದಿನ ಮಧ್ಯಾಹ್ನ ನಾಲ್ಕರ ಸುಮಾರಿಗೆ ಶ್ರೀಮಹಾರಾಜರು ಕ್ಷೌರಿಕನನ್ನು ಕರೆಸಿದರು ಮತ್ತು ಮುಂಡನ ಮಾಡಿಸಿಕೊಂಡರು. ಜನರಿಗೆ ಆಶ್ಚರ್ಯವಾಯಿತು. ಅವರು ಅಕಸ್ಮಾತ್ ಮುಂಡನ ಮಾಡಿಕೊಂಡ ಕಾರಣ ಕೇಳಿದರು. ಶ್ರೀಮಹಾರಾಜರು ಉತ್ತರಿಸಿದರು – ಇಂದು ನಮ್ಮ ತಂದೆಯವರು ವೈಕುಂಠಕ್ಕೆ ಹೋದರು. ಜನರು ಅವಾಕ್ಕಾದರು. ರಾವಜೀಯವರು ಹೋದದ್ದರಿಂದ ಗೊಂದವಲೆಯ ವಾತಾವರಣ ದುಃಖಮಯವಾಗಿತ್ತು . ಗೀತಾಬಾಯಿ ಪರಮಾವಧಿಯ ದುಃಖದಲ್ಲಿದ್ದರು. ಅದರಲ್ಲಿ ಹಿರಿಯ ಮಗ ಮನೆಯಲ್ಲಿಲ್ಲ, ಆ ಕಾಲದಲ್ಲಿ ದೂರ ಧ್ವನಿ ಇರಲಿಲ್ಲ, ಇರಬಹುದೆಂಬ ಅನುಮಾನವೂ ಇರಲಿಲ್ಲ. ಶ್ರೀ ಮಹಾರಾಜರ ತಮ್ಮ ಅಣ್ಣಾ ಮನೆಯಲ್ಲಿದ್ದರು. ಹಿರಿಯವನೇ ಉತ್ತರಕ್ರಿಯೆ ಮಾಡಬೇಕು ಎಂಬ ಶಾಸ್ತ್ರ ಭಟ್ಟರು ಹೇಳಿದರು. ದುಃಖ ಇನ್ನೂ ಇಮ್ಮಡಿಸಿತು. ಸರಿಯಾಗಿ ಹತ್ತನೆಯ ದಿನ ಮಹಾರಾಜರು ಗೊಂದವಲೆಗೆ ಬಂದರು. ತಾಯಿಯ ಸಾಂತ್ವನ ಮಾಡಿದರು, ತಂದೆಯ ಉತ್ತರಕ್ರಿಯೆ ಮಾಡಿದರು.

ಸಂತರ ದೃಷ್ಟಿ ಬೇರೆಯೇ, ಅವರ ದೃಷ್ಟಿಕೋನ ವಾಸ್ತವ ಸ್ವೀಕರಿಸಿ ಮುಂದೆ ಹೋಗುವುದು. ಅಶಾಶ್ವತದ ಖೇದ ಮಾಡದೆ ಶಾಶ್ವತ ನಾಮಸ್ಮರಣ ಸಾಧನೆ ಮಾಡುವುದು. ಕಾಲ ಮುಂದೆ ಹೋಗುತ್ತದೆ, ಅದು ನಿಲ್ಲುವುದಿಲ್ಲ. ಕಾಲ ಮುಂದೆ ಹೋದಂತೆ ದುಃಖದ ತೀವ್ರತೆ ಕಡಿಮೆಯಾಗಿ ಹಗುರವಾಗುತ್ತದೆ. ಶ್ರೀ ಮಹಾರಾಜರು 30–32 ವಯಸ್ಸಿನವರಾಗಿದ್ದರು, ವಯಸ್ಸು ಕಡಿಮೆ ಇದ್ದಾಗ ಪತ್ನಿಯ ಮೃತ್ಯು ಆಯಿತು, ಮಗನ ಇಡೀ ಜೀವನ ಒಬ್ಬಂಟಿಗನಾಗಿ ಕಳೆಯಬಾರದು ಎಂದು ಗೀತಾಬಾಯಿಗೆ ಅನಿಸಿತು. ತಾಯಿ ಮಗನಿಗೆ ಎರಡನೇ ಲಗ್ನವಾಗಲು ಹೇಳತೊಡಗಿದರು. ಏನಾದರೂ

ನೆಪಹೇಳಿ ಶ್ರೀಮಹಾರಾಜರು ಬಹಳ ದಿನ ಕಳೆದರು. ಒಂದು ದಿನ ಗೀತಾಬಾಯಿಯವರು ಕೇಳಲೊಲ್ಲರು, ಹಠ ಹಿಡಿದರು - ನನ್ನ ಇಚ್ಛೆ ಎಂದು ನೀನು ಮದುವೆ ಆಗಲೇಬೇಕು. ಶ್ರೀಮಹಾರಾಜರು ಹೇಳಿದರು - ಅಮ್ಮಾ! ನಿಜವಾಗಿ ಇನ್ನು ಮದುವೆಯಾಗುವ ಇಚ್ಛೆಯೇ ಇಲ್ಲ. ನಿನ್ನ ಇಚ್ಛೆ ಎಂದು ನಾನು ಮದುವೆಯಾಗುವೆನು, ಆದರೆ ಹೆಣ್ಣನ್ನು ನಾನು ಸ್ವತಃ ಹುಡುಕುವೆನು. ಗೀತಾಬಾಯಿಯವರು ಒಪ್ಪಿದರು, ಮಗ ಮದುವೆಗೆ ತಯಾರಾದನಲ್ಲ ಇಷ್ಟರಲ್ಲೇ ಸಮಾಧಾನ ಪಟ್ಟರು.

ಆಟಪಾಡೀ ಊರಿನ ಸಖಾರಾಮಪಂತ ದೇಶಪಾಂಡೆ, ಸಜ್ಜನ, ಪಾಪಭೀರು ಗೃಹಸ್ಥರು, ಮನೆಯಲ್ಲಿ ಅಂತಹ ಕೊರತೆ ಇರಲಿಲ್ಲ. ಸುಖೀ ಸಂಸಾರಿ. ಅವರಿಗೆ ಐದು ಜನ ಹೆಣ್ಮಕ್ಕಳು ಇದ್ದರು. ಅದರ ಚಿಂತೆಯೂ ಅವರಿಗಿರಲಿಲ್ಲ. ಅವರ ವಿವಾಹ ವ್ಯವಸ್ಥೆ ಅವರು ಮಾಡಿಟ್ಟಿದ್ದರು. ಅವರಿಗೆ ಒಂದೇ ಮಗಳ ಚಿಂತೆ ಇತ್ತು. ಈ ಐವರಲ್ಲಿ ಓರ್ವ ಮಗಳು ಜನ್ಮಾಂಧಳಾಗಿದ್ದಳು. ಆಕೆಯದೇ ತಂದೆ-ತಾಯಂದಿರಿಗೆ ನಿಜವಾಗಿ ಚಿಂತೆ ಇತ್ತು.

ಒಂದು ದಿನ ಅಕಸ್ಮಾತ್ ಈ ಸಖಾರಾಮ ಪಂತರ ಮನೆಯಲ್ಲಿ ಶ್ರೀಮಹಾರಾಜರು ಉಪಸ್ಥಿತರಾದರು. ಶ್ರೀಮಹಾರಾಜರ ಪಾವನ ಚರಣ ತಮ್ಮ ಮನೆಗೆ ತಾಗಿತು ಎಂದು ಸಖಾರಾಮಪಂತರಿಗೆ ಅತೀವ ಆನಂದವಾಯಿತು. ಪತಿ-ಪತ್ನೀಯರು ಅವರ ಚರಣ ವಂದನೆ ಮಾಡಿ ಸ್ವಾಗತಿಸಿದರು. ಮಹಾರಾಜರೆಂದರು - ನಿಮಗೆ ಉಪವರ ಕನ್ಯೆಯರು ಇದ್ದಾರಲ್ಲ! ನಾನು ಮದುವೆಯಾಗುವ ಇಚ್ಛೆಯಿಂದ ಬಂದಿರುವೆನು. ಸಖಾರಾಮಪಂತರಿಗೆ ಭಾರೀ ಸಂತೋಷವಾಯಿತು. ಅವರು ತಮ್ಮ ನಾಲ್ಕು ಕನ್ಯೆಯರನ್ನು ಮಹಾರಾಜರಿಗೆ ತೋರಿಸಿದರು. ಮಹಾರಾಜರು ಕೇಳಿದರು - ನಿಮ್ಮ ಐದನೇ ಕನ್ಯೆ ಎಲ್ಲಿದ್ದಾಳೆ? ಸಖಾರಾಮ ಪಂತರು ಅವಳಿದ್ದಾಳೆ ಎಂದು ತಡೆತಡೆದು ಹೇಳಿದರು. ಆದರೆ ಈ ನಾಲ್ವರಲ್ಲಿ ಒಬ್ಬಳೂ ನಿಮಗೆ ಒಪ್ಪಿಗೆಯಾಗಲಿಲ್ಲವೇ? ಶ್ರೀಮಹಾರಾಜರು ಹೇಳಿದರು- ಆ ಕುರುಡಿ ಕನ್ಯೆಯನ್ನೇ ನನಗೆ ನೋಡುವುದಿದೆ. ಸಖಾರಾಮ ಪಂತರು ಗಡಿಬಿಡಿಗೊಂಡರು. ಅವರು ತಮ್ಮ ಕುರುಡೀ ಕನ್ಯೆಯನ್ನು ಕೈ ಹಿಡಿದು ಹೊರಗೆ ತಂದರು. ಅವಳು ಮಹಾರಾಜರಿಗೆ ನಮಸ್ಕರಿಸಿದಳು. ಆಕೆಯನ್ನು ಎದುರಿಗೆ ಕುಳ್ಳಿರಿಸಿದರು. ಶ್ರೀಮಹಾರಾಜರು ಸಖಾರಾಮ ಪಂತರಿಗೆ ಹೇಳಿದರು - ಪಂತರೇ! ನಾನೇ ಮದುವೆ ಆಗುವವ, ನನಗೆ ಇದೇ ಕನ್ಯೆ ಒಪ್ಪಿಗೆ ಆಯಿತು. ಮಗಳ ತಂದೆ-ತಾಯಿಯರ ಕಣ್ಣುಗಳಿಂದ ಅಶ್ರು ಹರಿದವನು. ಸಖಾರಾಮ ಪಂತರ ಗಂಟಲು ಕಟ್ಟಿತು, ಭಾವೋದ್ರೇಕರಾದರು. ಅವರ ಮುಖದ ಮೇಲೆ ಅನೇಕ ಪ್ರಶ್ನೆ ಹಾದುಹೋದವು. ಮಹಾರಾಜರು ಹೇಳಿದರು - ನನಗೆ ಇದೇ ಕನ್ಯೆ ಮೆಚ್ಚಿಗೆಯಾಗಿದೆ.

ನೀವೂ ವಿಚಾರ ಮಾಡಿರಿ, ನಾನು ಅಲೆಮಾರಿ ಗೋಸಾವೀ, ಸಂಸಾರದಲ್ಲಿ ನನಗೆ ಎಷ್ಟು ಸಹಭಾಗವಿದ್ದೀತು ನೀವೇ ವಿಚಾರ ಮಾಡಿ ಮತ್ತು ನಿಶ್ಚಯಿಸಿರಿ. ಸಖಾರಾಮ ಪಂತರು ಏನನ್ನೂ ಹೇಳುವ ಮನಸ್ಥಿತಿಯಲ್ಲಿ ಇರಲಿಲ್ಲ. ಅವರು ಮಹಾರಾಜರ ಮುಂದೆ ಕೈಜೋಡಿಸಿದರು ಮತ್ತು ಆನಂದಾಶ್ರುಗಳಿಗೆ ದಾರಿ ಮಾಡಿಕೊಟ್ಟರು.

ಶ್ರೀಮಹಾರಾಜರು ಗೊಂದವಲೆಗೆ ಮರಳಿದರು. ತಾಯಿಗೆ ಲಗ್ನ ನಿಶ್ಚಯಿಸಿ ಬಂದುದನ್ನು ತಿಳಿಸಿದರು. ಗೀತಾಬಾಯಿಗೆ ಹಾಯೆನಿಸಿತು. ಸಖಾರಾಮ ಪಂತರು ಶುಭ ತಿಥಿ ಮತ್ತು ಶುಭ ಮುಹೂರ್ತ ತೆಗೆದರು. ಎರಡನೇ ಮದುವೆ ಇದ್ದುದರಿಂದ ಮಹಾರಾಜರಿಗೆ ಆಡಂಬರ ಬೇಡವಾಗಿತ್ತು. ಸರಳ ಪದ್ಧತಿಯಿಂದ ವಿವಾಹ ಸಂಸ್ಕಾರ, ಶ್ರೀಮಹಾರಾಜರು ಆಟಪಾಡಿಗೆ ಹೋದರು, ವಿವಾಹ ಮುಗಿಸಿ ಪತ್ನಿಯನ್ನು ಕರಕೊಂಡು ಬಂದರು. ಆಕೆಗೆ ತವರಿನ ಹೆಸರು ಯಮುನಾ ಎಂದಿತ್ತು . ಗಂಡನ ಮನೆಯಲ್ಲಿ ಸರಸ್ವತೀ ಎಂದೇ ಪುನಃ ಹೆಸರಿಟ್ಟರು. ಇಬ್ಬರೂ ತಾಯಿಗೆ ನಮಸ್ಕರಿಸಿದರು. ಸೊಸೆ ಕುರುಡಿಯಾಗಿದ್ದಾಳೆ ಎಂದು ಗೀತಾಬಾಯಿಯ ಗಮನಕ್ಕೆ ಬಂತು. ಅವರು ಮಗನ ಕಡೆ ನೋಡುತ್ತಲೇ ಇದ್ದರು. ಏನು ಮಾತನಾಡಬೇಕೆಂಬುದೇ ತಿಳಿಯದು. ಅವರು ತಲೆ ಚಚ್ಚಿಕೊಂಡು ಉದ್ಗರಿಸಿದರು – ಗಣೂ ಧನ್ಯವಾಗಿದೆ ನಿನ್ನ ....!

□□

-: ಹದಿನೈದು :-

# ನಾಮ ಸಾಮರ್ಥ್ಯ

ಮಹಾರಾಜರ ದ್ವಿತೀಯ ವಿವಾಹವಾದ ಬಳಿಕ ಶ್ರೀಮಹಾರಾಜರು ಕೆಲವುಕಾಲ ಗೊಂದವಲೆಯಲ್ಲೇ ಉಳಿದರು. ಈ ಸಮಯದಲ್ಲಿ ಕೆಲವು ದುರ್ದೈವೀ ಘಟನೆ ಸಂಭವಿಸಿದವು. ಅವರ ತಮ್ಮ ಅಣ್ಣಾ ಮತ್ತು ಮದುವೆಯಾಗಿ ಖಾತವಳದಲ್ಲಿದ್ದ ತಂಗಿ ಇಬ್ಬರೂ ಸ್ವಲ್ಪದಿನಗಳ ಅಂತರದಲ್ಲಿ ಕಾಲವಶರಾದರು. ಗೀತಾಬಾಯಿಯ ದುಃಖಕ್ಕೆ ಮೆರೆಯೇ ಇರಲಿಲ್ಲ. ಲಿಂಗೋಪಂತರ ವಂಶದಲ್ಲಿ ಹಿರಿಯರು ಎಂದು ಶ್ರೀಮಹಾರಾಜರೊಬ್ಬರೇ ಇದ್ದರು. ಹಿರಿಯರ ಆಸ್ತಿ ಬೇಕಾದಷ್ಟಿತ್ತು . ಗೊಂದವಲೆಯಲ್ಲಿ ಮತ್ತು ಬೇರೆ-ಬೇರೆ ಊರುಗಳಲ್ಲಿ ಅನೇಕ ಜಮೀನುಗಳಿದ್ದವು. ದಾಯಾದಿಗಳು ಆಸ್ತಿಗಾಗಿ ತಕರಾರು ತೆಗೆದರು. ಶ್ರೀಮಹಾರಾಜರೂ ಅವರೊಂದಿಗೆ ಜಗಳವಾಡಿದರು. ಒಬ್ಬ ದಾಯಾದಿಯಂತೂ ಒಂದು ದೊಡ್ಡ ಕಲ್ಲು ಶ್ರೀಮಹಾರಾಜರ ತಲೆಗೆ ಎಸೆದು ಕೊಲ್ಲುವ ಪ್ರಯತ್ನವನ್ನೂ ಮಾಡಿದ. ಅಷ್ಟರಲ್ಲಿ ಮಹಾರಾಜರು ಪಕ್ಕಕ್ಕೆ ಸರಿದು ಬದುಕಿದರು. ರಾತ್ರೆ ಅದೇ ದಾಯಾದಿಯನ್ನು ತನ್ನ ಬಳಿ ಕುಳ್ಳಿರಿಸಿಕೊಂಡು ಊಟ ಹಾಕಿದರು. ಆ ವ್ಯಕ್ತಿಗೆ ತನ್ನ ಕೃತ್ಯಕ್ಕೆ ಮನಃಪೂರ್ವಕ ಪಶ್ಚಾತ್ತಾಪವಾಯಿತು.

ಲಿಂಗೋಪಂತರಿಂದ ಈ ಮನೆತನದಲ್ಲಿ ವಿಟ್ಠಲೋಪಾಸನೆ ಇತ್ತು . ಕಾರ್ತಿಕ ಏಕಾದಶಿ ಹತ್ತಿರ ಬಂತು. ಕೆಲವು ದಿನಗಳ ಹಿಂದೆಯೇ ಶ್ರೀಮಹಾರಾಜರು ಪಂಢರಪುರಕ್ಕೆ ಹೊರಟರು. ಅಲ್ಲಿ ಭಡಗಾವಕರ್ ಎಂಬ ಒಬ್ಬರು ಸಹೃದರು ಇದ್ದರು. ಅವರ ಮನೆಗೆ ಮಹಾರಾಜರು ಹೋದರು. ಭಡಗಾವಕರ್‌ರವರ ಮಗನು ವಿಷಮಜ್ವರದಿಂದ ಮಲಗಿದ್ದನು, ಲಕ್ಷಣಗಳು ಚೆನ್ನಾಗಿರಲಿಲ್ಲ. ಶ್ರೀಮಹಾರಾಜರು ಅಹೋರಾತ್ರ ಆ ಮಗನ ಬಳಿ ಕುಳಿತು ಶ್ರೀರಾಮಜಪ ಮಾಡತೊಡಗಿದರು. ಆ ಹುಡುಗ ಶ್ರೀಮಹಾರಾಜರ ಪ್ರೇರಣೆಯಿಂದ ಅದೇ ಸ್ಥಿತಿಯಲ್ಲಿ ರಾಮನಾಮ ಜಪಿಸತೊಡಗಿದ. ಜ್ವರ ಬಂದು ಇಪ್ಪತ್ತನೆ ದಿನ ರಾಮನಾಮ ಸ್ಮರಿಸುತ್ತಾ ದೇಹಬಿಟ್ಟನು.

ಇದೇ ಯಾತ್ರೆ ವೇಳೆ ಪಂಢಪುರದಲ್ಲಿ ಸದುಭಾವು ಲೇಲೆ ಮಹಾರಾಜರನ್ನು ಬೆಟ್ಟಿಯಾದರು. ಇವರು ಅಲಿಬಾಗಿನ ಗೃಹಸ್ಥರಾಗಿದ್ದರು. ಅವರಲ್ಲಿ ಕೆಲವುದಿನವಿದ್ದು ಮಹಾರಾಜರು ಉತ್ತರದ ಕಡೆಗೆ ಹೋದರು. ದಾರಿಯಲ್ಲಿ ಅಬೂವಿನ ಕಾಡು ಸಿಕ್ಕಿತು, ಕಾಡಿನ ಬೇಡರ ಪಡೆಯು ಶ್ರೀಮಹಾರಾಜರನ್ನು ನೋಡಿ, ಅವರ ದಷ್ಟಪುಷ್ಟ ಶರೀರ ನೋಡಿ, ಕಳ್ಳತನ ದರೋಡೆ ಮಾಡಲು ಇವನ ಉಪಯೋಗವಾಗಬಹುದೆಂದು ಅವರಿಗೆ ಸಂತೋಷವಾಯಿತು. ಅವರು ಶ್ರೀಮಹಾರಾಜರನ್ನು ಮುತ್ತಿದರು, ಹೊಡೆದು ತಳ್ಳಿಕೊಂಡು ತಮ್ಮ ಗುಹೆಯ ಬಳಿಗೆ ಕೊಂಡು ಹೋದರು. ಅಲ್ಲಿ ಈ ಪಡೆಯು ಇರುತ್ತಿತ್ತು . ಈ ಭಿಲ್ಲರು ಮಹಾರಾಜರನ್ನು ತುಂಬಾ ಚುಡಾಯಿಸಿದರು. ಕಷ್ಟಕೊಟ್ಟರು, ಆದರೆ ಅವರು ಶಾಂತವಾಗಿದ್ದರು. ಯಾವುದೇ ಪ್ರತಿಕ್ರಿಯೆ ತೋರಿಸುತ್ತಿರಲಿಲ್ಲ. ಅವರಲ್ಲಿ ಎಲ್ಲರಿಗಿಂತ ಹಿರಿಯ ವೃದ್ಧ ಭಿಲ್ಲನ ಬಳಿ ಸ್ವಲ್ಪ ಮಂತ್ರವಿದ್ಯೆ ಇತ್ತು . ಅವನ ಮಾತು ಎಲ್ಲರೂ ಮನ್ನಿಸುತ್ತಿದ್ದರು. ಅವನೆಂದ–ಅಯ್ಯಾ ! ಸ್ವಲ್ಪ ಇರಿ, ಈ ಮನುಷ್ಯ ಸಾಧಾರಣನಲ್ಲ. ಅವನಿಗೆ ಕೆಲವು ಮಂತ್ರವಿದ್ಯೆ ಗೊತ್ತಿರಬೇಕು. ಅವನು ಮಹಾರಾಜರನ್ನು ವಿಚಾರಿಸಿದನು, ಅವರಿಗೆ ಅವರ ಊಟ–ತಿಂಡಿಯ ಕುರಿತು ಕೇಳಿದ; ಮಹಾರಾಜರು ಹೇಳಿದರು – ನಾನು ಕೇವಲ ಹಾಲು ಕುಡಿಯುತ್ತೇನೆ. ಬೇರೆ ಏನನ್ನೂ ತಿನ್ನುವುದಿಲ್ಲ. ಅಲ್ಲಿಯ ತರುಣ ಭಿಲ್ಲನೊಬ್ಬ ಒಂದು ಆಕಳು ತಂದನು. ಅವನು ಈ ಪಂಗಡದ ಆ ವೃದ್ಧನ ಮಗನಾಗಿದ್ದ. ಅವನು ಆ ಹಸುವನ್ನು ಮಹಾರಾಜರ ಮುಂದೆ ತಂದು ನಿಲ್ಲಿಸಿದ. ಅವರ ಕೈಗೆ ಒಂದು ಕುಡಿಕೆ ಕೊಟ್ಟು ಹೇಳಿದ – ಇದರ ಹಾಲು ಕರೆದು ಕುಡಿಯಿರಿ. ಆ ಹಸು ಒದೆಯುವ, ತುಂಟವಾಗಿದ್ದು ಬರಡಾಗಿತ್ತು . ಮಹಾರಾಜರು ಗೋವಿನ ಬಳಿಗೆ ಹೋಗಿ ಅದರ ಬೆನ್ನುಸವರಿದರು, ಅವರ ಪ್ರೇಮಸ್ಪರ್ಶದಿಂದ ಆ ಹಸು ಸಂತೋಷಗೊಂಡು ಶಾಂತವಾಯಿತು. ಆ ಹಸುಗೆ ಹೇಳಿದರು – ಅಮ್ಮಾ ! ನನಗೆ ತುಂಬಾ ಹಸಿವು ಆಗಿದೆ, ನನಗೆ ಹೊಟ್ಟೆತುಂಬಾ ಹಾಲುಕೊಡು. ಆ ಆಕಳು ಮಹಾರಾಜರ ಮೈನೆಕ್ಕತೊಡಗಿತು. ಅದರ ಕೆಚ್ಚಲಲ್ಲಿ ಹಾಲು ತುಂಬಿತು, ಶ್ರೀಮಹಾರಾಜರು ಹಾಲು ಕರೆದರು. ಅದು ಸಾಕಷ್ಟು ಹಾಲು ಕೊಟ್ಟಿತು. ಯಾವ ತರುಣ ಆ ಹಸುವನ್ನು ತಂದಿದ್ದನೋ ಅವನು ಪೂರ್ಣ ಹೆದರಿಹೋದ, ಈ ಮನುಷ್ಯನು ದೊಡ್ಡ ಮಾಂತ್ರಿಕನಿರಬೇಕು ಈ ವಿಷಯದಲ್ಲಿ ಅನುಮಾನವೇ ಇಲ್ಲ. ಮುದುಕ ಭಿಲ್ಲನು ಮುಂದೆ ಬಂದು ಹೇಳಿದ – ಮಗ ತಪ್ಪು ಮಾಡಿದ. ಇವನನ್ನು ಕ್ಷಮಿಸಿರಿ, ನಾನೂ ಕ್ಷಮೆ ಬೇಡುತ್ತೇನೆ, ಮೂರ್ಖಜನರು. ಶ್ರೀಮಹಾರಜರು ಸಮಾಜಾಯಿಸುತ್ತಾ ಹೇಳಿದರು – ನಿಸರ್ಗದ ಮಡಿಲಲ್ಲಿ ಇದ್ದು ದರೋಡೆ, ಕಳ್ಳತನ ಮಾಡುತ್ತೀರಿ, ಈ ಸರ್ವಶ್ರೇಷ್ಠ

ಮಾನವೀ ಜನ್ಮದಲ್ಲಿ ಎಷ್ಟು ದೊಡ್ಡ ಪಾಪ ಮಾಡುತ್ತೀರಿ! ಈ ಸಮೃದ್ಧ ನಿಸರ್ಗದೊಂದಿಗೆ ಪ್ರೇಮದಿಂದ ಕೊಟ್ಟುಕೊಂಡು ಶಾಂತ ಮತ್ತು ನಿರ್ಮಲ ಜೀವನ ಬದುಕಲು ಬರುತ್ತದೆ. ದೇವರ ನಾಮ ನಮಗೆ ಪುನಃ ಪಾಪಮಾಡಲು ಬಿಡದು. ತುಂಬಾ ತಿಳಿವಳಿಕೆಯ ಮತ್ತು ಸನ್ಮಾರ್ಗದ ಕಥೆ ಹೇಳಿ ಅವರು ಆ ಭಿಲ್ಲರಿಗೆ ಉಪದೇಶ ಕೊಟ್ಟರು.

ಭಿಲ್ಲರ ಮನಪರಿವರ್ತನ ಆಯಿತು. ಅವರನ್ನು ಬೀಳ್ಕೊಂಡು ಮಹಾರಾಜರು ಅಲ್ಲಿಂದ ಹೊರಟರು. ನರ್ಮದಾ ನದೀಯ ತೀರದಲ್ಲೇ ಹೋಗುವಾಗ ಅವರು ಮಹೇಶ್ವರ ಎಂಬ ಊರಿಗೆ ಬಂದರು. ಆ ಊರಿನ ಇಬ್ಬರು ಮಾಂತ್ರಿಕರ ದೃಷ್ಟಿಗೆ ಮಹಾರಾಜರು ಬಿದ್ದರು. ಅವರ ಮುಖದಲ್ಲಿನ ತೇಜ ನೋಡಿ ಅವರಿಬ್ಬರಿಗೂ ಈ ವ್ಯಕ್ತಿಯ ಬಳಿ ಮಂತ್ರಸಿದ್ಧಿ ಇರಬೇಕು ಎಂದು ಅನಿಸಿತು. ನಾವೇನಾದರೂ ಅದನ್ನು ಕಲಿತುಕೊಂಡರೆ ನಮಗೆ ಬಹಳ ಲಾಭವಾಗುವುದು ಅವರು ಮಹಾರಾಜರನ್ನು ಸಂಧಿಸಿದರು, ಅವರಲ್ಲಿ ಮಂತ್ರ-ತಂತ್ರ ಕಲಿಸಲು ಬೇಡಿಕೊಂಡರು. ಮಹಾರಾಜರು ಪೂರ್ಣ ನಕಾರ ಕೊಟ್ಟರು. ಅವರೆಂದರು- ಇಂತಹ ಮಂತ್ರ- ತಂತ್ರ ನಾನು ತಿಳಿದಿಲ್ಲ, ನಾನು ಭಕ್ತಿಯಿಂದ ರಾಮನಾಮ ಸ್ಮರಿಸುತ್ತೇನೆ. ಮೂರುಲೋಕದ ಎಲ್ಲ ವ್ಯವಹಾರ ಶ್ರೀರಾಮನ ಸತ್ತೆಯಿಂದ ಸತತ ನಡೀತಾ ಇದೆ, ಇಷ್ಟೇನಾನು ತಿಳಿದಿದ್ದೇನೆ, ಇದರಲ್ಲಿ ನನಗೆ ಶ್ರದ್ಧೆ ಇದೆ, ಈ ನಡೆಯುವ ಘಟನೆಗಳ ಆಶ್ಚರ್ಯ ನನಗಾಗುವುದಿಲ್ಲ, ಕಾರಣ ಅದೂ ರಾಮಕೃಪೆಯೇ ಆಗಿದೆ. ಮಾಂತ್ರಿಕರು ಮೊದಲು ಮಹಾರಾಜರನ್ನು ವಿನಂತಿಸಿದರು, ಅವರ ನಕಾರ ಕೇಳಿ ಅವರಿಗೆ ಸಿಟ್ಟು ಬಂತು, ಅವರೆಂದರು- ಒಳ್ಳೆಯ ಮಾತಿನಲ್ಲಿ ನಮಗೆ ಮಂತ್ರವಿದ್ಯೆ ಕಲಿಸಿರಿ, ಇಲ್ಲದಿದ್ದರೆ ನಾವು ನಿಮ್ಮ ಮೇಲೆ ನಾಗಪಾಶ ಎಸೆದು ನಿಮ್ಮನ್ನು ಬಂಧಿಸುವೆವು; ಅದರಲ್ಲಿ ನೀವು ಸಾಯಲೂಬಹುದು. ಈ ಮಾತಿಗೆ ಮಹಾರಾಜರು ಯಾವುದೇ ಪ್ರತಿಕ್ರಿಯೆ ತೋರಿಲ್ಲ. ಶ್ರೀಮಹಾರಾಜರು ನಡೆಯುತ್ತಲೇ ಇದ್ದರು. ಆ ಇಬ್ಬರು ಮಾಂತ್ರಿಕರು ಅವರೊಂದಿಗೆ ನಡೆದು ಬಂದರು. ಹೀಗೆ ಭ್ರಮಣೆ ಮಾಡುತ್ತಾ ಅವರೆಲ್ಲರೂ ಒಂದು ಗುಡ್ಡದ ಮೇಲೆ ಬಂದರು. ಬೆಟ್ಟ ಎತ್ತರವಾಗಿತ್ತು . ಅವರಿಬ್ಬರು ಮಹಾರಾಜರನ್ನು ಅಡ್ಡಗಟ್ಟಿ ಪುನಃ ಮಂತ್ರವಿದ್ಯೆ ಕೊಡಲು ಹೇಳಿದರು. ಶ್ರೀಮಹಾರಾಜರು ತಿರಸ್ಕರಿಸಿದರು. ಮತ್ತೆ ಆ ಇಬ್ಬರೂ ಮಹಾರಾಜರ ಮೇಲೆ ನಾಗಪಾಶ ಎಸೆದರು. ತತ್‌ಕ್ಷಣ ಫೂತ್ಕಾರ ಮಾಡುತ್ತಾ ಭಯಂಕರ ನಾಗಗಳು ಮಹಾರಾಜರನ್ನು ಸುತ್ತುವರೆದು ಗಟ್ಟಿಯಾಗಿ ಬಂಧಿಸಿದವು. ಅದರಲ್ಲಿನ ಒಬ್ಬ ಮಾಂತ್ರಿಕ ಹೇಳಿದ - ಇನ್ನು ವಿಚಾರ ಮಾಡಿರಿ, ನಮಗೆ ಮಂತ್ರ ವಿದ್ಯೆ ಕೊಡಿರಿ, ಮತ್ತೆ ಈ ನಾಗಪಾಶ ಹಿಂದಕ್ಕೆ ಪಡೆಯುವೆವು; ಇಲ್ಲದಿದ್ದರೆ ಪ್ರಾಣ ಕಳೆದುಕೊಳ್ಳುವಿರಿ. ಶ್ರೀಮಹಾರಾಜರು

ಶಾಂತವಾಗಿ ಉತ್ತರಿಸಿದರು - ನೀವೇ ವಿಚಾರ ಮಾಡಿ, ಈ ನಿಷ್ಪಾಪ ಜೀವಿಗಳ ವಿಚಾರ ಮಾಡಿರಿ. ನನ್ನ ರಾಮನು ನನ್ನನ್ನು ಕಾಪಾಡಲು ಸಮರ್ಥನಾಗಿದ್ದಾನೆ. ಶ್ರೀಮಹಾರಾಜರು ರಾಮನಾಮದಲ್ಲಿ ಮುಳುಗಿದರು. ನಾಗಪಾಶ ಬಿಗಿದುಕೊಂಡಿರುವಾಗಲೂ ನಿರ್ಭಯ, ನಿರ್ಧಾರಿ ಶ್ರೀಮಹಾರಾಜರು. ಹೀಗೆ ಮೂರುದಿನ ಕಳೆಯಿತು. ಶ್ರೀಮಹಾರಾಜರು ಅವರಿಬ್ಬರಿಗೆ ಪುನಃ ಸಮಜಾಯಿಸಿ ಹೇಳಲು ಪ್ರಯತ್ನಿಸಿದರು, ಆದರೆ ಅದು ನಿಷ್ಫಲವಾಯಿತು. ಕೊನೆಗೆ ನಿರುಪಾಯದಿಂದ ಶ್ರೀಮಹಾರಾಜರು ಗಟ್ಟಿಯಾಗಿ 'ಜಯ ಜಯ ರಘುವೀರ ಸಮರ್ಥ' ಎಂದು ಉದ್ಘೋಷಿಸಿದರು ಮತ್ತು ಆ ಎತ್ತರದ ಬೆಟ್ಟದಿಂದ ಕೆಳಗೆ ಹಾರಿದರು. ಎಲ್ಲ ನಾಗಪಾಶಗಳು ಛಿನ್ನಭಿನ್ನರಾಗಿ ಗತ ಪ್ರಾಣರಾದವು. ಶ್ರೀಮಹಾರಾಜರು ಮುಕ್ತರಾದರು. ಅವರಿಗೆ ಕೊಂಚವೂ ಕಷ್ಟವಾಗಲಿಲ್ಲ, ಅವರು ರಾಮನಾಮದಲ್ಲಿ ನಿಮಗ್ನರಾಗಿದ್ದರು.

ಮಾಂತ್ರಿಕರು ಮಾತ್ರ ಈ ಘಟನೆಯಿಂದ ಪೂರ್ಣ ಹೆದರಿ ಹೋಗಿದ್ದರು. ಓಡಿ ಬಂದು ಮಹಾರಾಜರ ಚರಣಗಳಲ್ಲಿ ಹೊರಳಾಡಿದರು, ಪದೇ-ಪದೇ ಕ್ಷಮೆ ಬೇಡತೊಡಗಿದರು. ಅವರಲ್ಲಿ ಒಬ್ಬನಿಗೆ ಮಹಾರಾಜರು ನರ್ಮದಾತೀರದಲ್ಲಿ ರಾಮನಾಮ ಸ್ಮರಿಸುತ್ತಾ ತಪಶ್ಚರ್ಯೆ ಮಾಡಲು ಹೇಳಿದರು. ಅವನು ಆ ಆಜ್ಞೆಯನ್ನು ಪ್ರಮಾಣವೆಂದು ತಿಳಿದು ತಪಸ್ಸಿಗೆ ತೊಡಗಿದನು. ಇನ್ನೊಬ್ಬನ ಹೆಸರು ಸಚ್ಚಿದಾನಂದ ಇತ್ತು . ಅವನು ತನ್ನ ಸಂಗಡ ಕರೆದುಕೊಂಡು ಮಹಾರಾಜರು ಮುಂದೆ ಹೊರಟರು. ಈಗ ಮಹಾರಾಜರು ಉಜ್ಜೈನಿಗೆ ಹೊರಟಿದ್ದರು. ಅದಕ್ಕಾಗಿ ಬುದನಿಯ ರೈಲ್ವೇ ಸ್ಟೇಷನ ಬಳಿಯ ಒಂದು ಧರ್ಮಶಾಲೆಯಲ್ಲಿ ಹೋಗಿ ಕುಳಿತರು ಹಾಗೂ ರಾಮನಾಮದಲ್ಲಿ ಮುಳುಗಿ ಹೋದರು. ರೈಲು ಬರಲು ಇನ್ನೂ ಆರೇಳು ಗಂಟೆ ಅವಕಾಶವಿತ್ತು. ಸಚ್ಚಿದಾನಂದನೂ ಶ್ರೀಮಹಾರಾಜರ ಅನುಗ್ರಹದ ಬಳಿಕ ನಿಷ್ಠೆಯಿಂದ ರಾಮನಾಮ ಜಪಿಸುತ್ತಿದ್ದರು. ಅಂದು ರೈಲು ಎಂದಿಗಿಂತ ಬೇಗನೇ ಬಂತು, ಶ್ರೀಮಹಾರಾಜರು ಧರ್ಮಶಾಲೆಯಲ್ಲಿ ರಾಮನಾಮದಲ್ಲಿ ಮಗ್ನರಾಗಿದ್ದಾರೆ.

ಇತ್ತ ಸ್ಟೇಶನ್ ಮಾಸ್ತರರು ಬಿಗಿಲು ಊದಿ ರೈಲು ಹೊರಡಲು ಅನುಮತಿ ಇತ್ತರು. ಸಚ್ಚಿದಾನಂದನಿಗೆ ಸಿಟ್ಟು ಬಂತು. ಅವನು ರೈಲಿಗೆ ಹೇಳಿದ - ''ಠಹರೋ! ಮೇರೆ ಸದ್ಗುರು ಆಯೆಂಗೆ, ಉನ್ಹೆ ಲೇಕರ ಜಾನಾ ಹೈ'' ಉಗಿಬಂಡಿ ಮುಂದೆ ಹೋಗದೆ ನಿಂತುಕೊಂಡಿತು. ಚಾಲಕನು ಅನೇಕ ಪ್ರಯತ್ನ ಮಾಡಿದನು. ಮತ್ತೆ ಸ್ಟೇಶನ್ ಮಾಸ್ತರರು ಮೇಸ್ತ್ರಿಯನ್ನು ಕರೆಸಿದನು. ಎಲ್ಲರೂ ಗಾಡಿ ಎಲ್ಲಿ ಕೆಟ್ಟಿದೆ ಎಂದು ಹುಡುಕತೊಡಗಿದರು.

ಅಷ್ಟರಲ್ಲಿ ಮಹಾರಾಜರು ಅಲ್ಲಿಗೆ ಬಂದರು. ಚಿದಾನಂದ ಹೇಳಿದ – ಮಹಾರಾಜ! ತಮ್ಮನ್ನು ಹತ್ತಿಸಿಕೊಳ್ಳದೆ ರೈಲು ಹೊರಟಿತ್ತು, ನಾನೇ ನಿಲ್ಲಿಸಿದೆ. ಶ್ರೀಮಹಾರಾಜರು ಗಂಭೀರರಾದರು, ಅವರೆಂದರು – ಸಚ್ಚಿದಾನಂದಾ! ರಾಮನಾಮ ಸಾಧನೆಯಿಂದ ಸ್ವಲ್ಪ ಸಿದ್ಧಿಯಾಯಿತು ಮತ್ತು ಅದನ್ನು ಕೂಡಲೇ ತನ್ನ ಶಕ್ತಿ ಬಳಸಿ ಖರ್ಚು ಮಾಡಿದೆ! ಪರೀಕ್ಷೆಯ ಎಷ್ಟು ಅವಸರ! ನಮಗೆ ಇಂದೇ ಹೋಗಬೇಕೆಂಬ ಅವಸರ ಇರಲಿಲ್ಲ. ನಾವು ಬೈರಾಗಿಗಳು ಇಂದು ಹೋದರೆ ಏನು, ನಾಳೆ ಹೋದರೇನು? ಒಂದೇ. ಸ್ವಲ್ಪ ಹೊತ್ತು ಮಹಾರಾಜರು ಶಾಂತರಾದರು. ರೈಲು ಹೊರಟಿತು. ಕೊನೆಗೆ ಮಹಾರಾಜರೆಂದರು – ಸಚ್ಚಿದಾನಂದಾ! ನಿನ್ನೊಳಗೆ ಇನ್ನೂ ತಮೋಗುಣವಿದೆ. ನೀನು ಹನ್ನೆರಡು ವರ್ಷ ಅಖಂಡ ರಾಮನಾಮದ ಜಪ ಮಾಡು. ನೀನು ಸಾತ್ವಿಕ ವೃತ್ತಿಯವನಾಗುವೆ. ಅನಂತರ ನನಗೆ ಮುಖ ತೋರು. ಸಚ್ಚಿದಾನಂದನಿಗೆ ಪಶ್ಚಾತ್ತಾಪವಾಯಿತು. ಕಣ್ಣುಗಳಿಂದ ಅಶ್ರು ಹರಿದವು. ಅವನು ಮಹಾರಾಜರ ಚರಣಗಳಲ್ಲಿ ಮಸ್ತಕವನ್ನಿಟ್ಟನು ಮತ್ತು ಹೊರಟು ಹೋದ. ಮುಂದೆ ಹನ್ನೆರಡು ವರ್ಷದಲ್ಲಿ ಅವನು ಶ್ರೀಮಹಾರಾಜರನ್ನು ಕಾಶಿಯಲ್ಲಿ ಭೆಟ್ಟಿಯಾದನು.



-: ಹದಿನಾರು :-

# ಭಕ್ತ ಉದ್ಧಾರಕ ಶ್ರೀಮಹಾರಾಜರು

ಶ್ರೀ ಮಹಾರಾಜರ ತಿರುಗಾಟ ನಡೆದೇ ಇತ್ತು. ಅವರು ಉಜ್ಜೈನಿಗೆ ಬಂದರು. ಅಲ್ಲಿಯ ಭಕ್ತ ಮಂಡಳಿ ಸೇರಿತು. ನಾಮಸ್ಮರಣೆ, ಭಜನೆ, ಪ್ರವಚನ, ಕೀರ್ತನ ಹೀಗೆ ಉಪಕ್ರಮ ಪ್ರಾರಂಭವಾಯಿತು. ಭೋಜನ ಪ್ರಸಾದದ ನಿಮಿತ್ತ ಅನ್ನದಾನ ಶುರು ಆಯಿತು. ಶ್ರೀ ಮಹಾರಾಜರನ್ನು ಊರಿನ ಜನರು ತಮ್ಮ ಮನೆಗಳಿಗೆ ಕರೆಯುತ್ತಿದ್ದರು. ನಿಮ್ಮ ಶ್ರೀ ಚರಣ ನಮ್ಮ ಮನೆಗೆ ಬರಲಿ, ಆ ಚರಣ ಧೂಳು ನಮ್ಮ ವಾಸ್ತುವಿನಲ್ಲಿ ಬೀಳಲಿ ಎಂಬ ಉದ್ಗಾರ ತೆಗೆಯುತ್ತಿದ್ದರು. ಯಾರು ಭಕ್ತಿ ಭಾವನೆಯಿಂದ ಕರೆಯುತ್ತಿದ್ದರೋ ಅವರಲ್ಲಿಗೆ ಮಹಾರಾಜರು ಹೋಗುತ್ತಿದ್ದರು. ರಾವಸಾಹೇಬರೆಂಬ ಓರ್ವ ದೊಡ್ಡ ಸರಕಾರಿ ಅಧಿಕಾರಿಗಳಿದ್ದರು. ಎರಡು - ಮೂರು ಕಡೆ ಮಹಾರಾಜರೊಂದಿಗೆ ಅವರಿಗೂ ಭೋಜನದ ನಿಮಂತ್ರಣವಿತ್ತು. ಆಗ ಅವರು ಜನರ ಆದರಭಾವ ನೋಡಿದರು. ಆದರೆ ರಾವಸಾಹೇಬ ದೊಡ್ಡ ಚಿಕಿತ್ಸಕರಾಗಿದ್ದರು. ಶ್ರೀ ಮಹಾರಾಜರಿಗೆ ಇಷ್ಟೊಂದು ಗೌರವ ಸಿಗುತ್ತಿದೆ. ಜನರು ಮುಗ್ಧರು, ಭಾವಿಕರು, ಇರುತ್ತಾರೆ. ತಾನು ಮಾತ್ರ ಇವರನ್ನು ಪರೀಕ್ಷಿಸಿಯೇ ಅವರನ್ನು ಸ್ವೀಕರಿಸುವುದು.

ಆ ಸಮಯವು ದೈವ ಗತಿಯಿಂದ ಬೇಗನೇ ಬಂತು. ಅವರ ಹನ್ನೆರಡು ವರ್ಷದ ಮಗ ವಿಷಮ ಜ್ವರದಿಂದ ಕಾಯಿಲೆ ಬಿದ್ದ. ಆಗ ಕ್ಷಯ, ಸಿಡುಬು, ವಿಷಮ ಜ್ವರ ಇಂತಹ ರೋಗಗಳು ಭಯಂಕರವೆಂದು ತಿಳಿಯುತ್ತಿದ್ದರು. ಈ ರೋಗಗಳಲ್ಲಿ ಜನರು ಸಾಯುತ್ತಿದ್ದರು. ರಾವ ಸಾಹೇಬರು ತಮ್ಮ ಮನೆಗೆ ಬರಲು ಶ್ರೀ ಮಹಾರಾಜರನ್ನು ಆಮಂತ್ರಿಸಿದರು. ಮಹಾರಾಜರು ಹೇಳಿದರು - ನನ್ನೊಡನೆ ನಲವತ್ತು, ಐವತ್ತು ಜನ ಇರುತ್ತಾರೆ. ನಾನು ಬಂದರೆ ಇವರೆಲ್ಲರೂ ಬರುವವರೇ, ಅದಕ್ಕಿಂತ ನೀವೇ ನಮ್ಮಲ್ಲಿಗೆ ಪ್ರಸಾದ ಭೋಜನಕ್ಕೆ ಬನ್ನಿರಿ. ಅವರ ಉದ್ಗಾರದಿಂದ ರಾವ ಸಾಹೇಬರು ನಿರಾಶರಾದರು.

ಅವರೆಂದರು - ನೀವು ಇತರರ ನಿಮಂತ್ರಣ ಸ್ವೀಕರಿಸುತ್ತೀರಿ. ನನಗೆ ಮಾತ್ರ ಇಲ್ಲವೆಂದಿರಿ. ನಾನೇ ದುರ್ದೈವಿಯಾಗಿದ್ದೇನೆ. ಅವರ ನಿರಾಸೆ ನೋಡಿ ಶ್ರೀ ಮಹಾರಾಜರು ಹೇಳಿದರು - ಸರಿ, ನಾಳೆ ಬರುತ್ತೇನೆ.

ಮಹಾರಾಜರು ಒಪ್ಪಿಕೊಂಡಿದ್ದರಿಂದ ರಾವಸಾಹೇಬರಿಗೆ ಆನಂದವಾಯಿತು. ರಾವಸಾಹೇಬರು ಮನೆಗೆ ಮರಳಿದಾಗ ಅವರ ಮಗನ ನಾಡಿ ಬಡಿತ ತುಂಬಾ ಅನಿಯಮಿತವಾಗಿತ್ತು. ವೈದ್ಯರನ್ನು ಕರೆಸಲಾಯಿತು. ವೈದ್ಯರೂ ಸಹ ಇನ್ನು ನಮ್ಮ ಕೈಯಲ್ಲಿ ಏನೂ ಇಲ್ಲ ಎಂದು ಕೊನೆಯ ನಿರ್ಣಯ ಹೇಳಿದರು. ಮಧ್ಯರಾತ್ರಿ ಮೂರು ಗಂಟೆಗೆ ಆ ಮಗನ ಪ್ರಾಣ ಹೋಯಿತು. ಇಂತಹ ಪ್ರಸಂಗದಲ್ಲಿಯೂ ರಾವಸಾಹೇಬರು ಶ್ರೀಮಹಾರಾಜರ ಸ್ವಾಗತದ, ಐವತ್ತು ಅರವತ್ತು ಜನರ ವ್ಯವಸ್ಥೆ ಮಾಡಿದರು. ಮರುದಿನ ಮನೆಯಲ್ಲಿ ಮಗನ ಶವವನ್ನು ಒಂದು ಕೋಣೆಯಲ್ಲಿ ಇಟ್ಟಿದ್ದರು. ಹೊರಗೆ ಮಹಾರಾಜರ ಸ್ವಾಗತ, ವಂದನ, ಅವರ ಪೂಜೆ ಮುಂತಾದವು ಪ್ರಾರಂಭದ ಕಾರ್ಯ ಆಯಿತು. ಭೋಜನದ ಪೂರ್ಣ ತಯಾರಿಯೂ ಆಯಿತು. ಶ್ರೀಮಹಾರಾಜರೊಂದಿಗೆ ಅವರೊಂದಿಗಿದ್ದ ಎಲ್ಲರೂ ಮಣೆ ಮೇಲೆ ಕುಳಿತು ಭೋಜನ ಮಂತ್ರ ಪಠಿಸಿದರು. ಅಷ್ಟರಲ್ಲಿ ರಾವಸಾಹೇಬರ ಪತ್ನೀ ತಮ್ಮ ಮಗನ ಶವ ಎತ್ತಿಕೊಂಡು ಬಂದು ಅದನ್ನು ಶ್ರೀ ಮಹಾರಾಜರ ಮುಂದೆ ಇರಿಸಿದರು. ಮಹಾರಾಜ! ಇವನು ನನ್ನ ಮಗ, ಮಧ್ಯರಾತ್ರಿಯೇ ಅವನು .....ಆಕೆಯು ನಿಟ್ಟುಸಿರು ಬಿಡುತ್ತಾ, ಅವನನ್ನು ಬಿಟ್ಟು ಊಟ ಮಾಡುವಿರಾ? ಈ ಘಟನೆ ಬಂದಿರುವ ಜನರಲ್ಲಿ ಯಾರಿಗೂ ತಿಳಿದಿರಲಿಲ್ಲ. ಎಲ್ಲ ಜನರು ಕಲ್ಲಿನ ಪ್ರತಿಮೆಗಳಂತೆ ಸ್ತಬ್ಧರಾದರು, ನಿಃಶಬ್ದರಾಗಿ ನೋಡುತ್ತಲೇ ಇದ್ದರು. ಶ್ರೀ ಮಹಾರಾಜರು ಆ ಮೃತ ಮಗನ ದೇಹ ಶಾಂತವಾಗಿ ತಮ್ಮ ತೊಡೆಯಲ್ಲಿಟ್ಟುಕೊಂಡರು. ಅವನ ಹೃದಯದ ಮೇಲೆ ಕೈಯನ್ನಿಟ್ಟರು. ಅವರೆಂದರು - ಅಮ್ಮಾ! ಅಳಬೇಡಿ, ಅವನ ಹೃದಯದಲ್ಲಿ ಮೆಲ್ಲಗೆ ಸ್ಪಂದನೆ ಇದೆ. ಮೈ ಬೆಚ್ಚಗಿದೆ. ಅವನಿಗೆ ಮಾತ್ರೆ ನೆಕ್ಕಿಸಿರಿ, ಹೋಗಿ ಮಾತ್ರೆ ತನ್ನಿ. ಅಳಬೇಡಿ, ತಾಯಿಯು ಎದ್ದು ಸಾಣೆಕಲ್ಲಿನ ಮೇಲೆ ಮಾತ್ರೆ ತೇದಿದರು. ಶ್ರೀಮಹಾರಾಜರು ಸ್ವತಃ ತನ್ನ ಕೈಯಿಂದ ಆ ಮಗನಿಗೆ ನೆಕ್ಕಿಸಿದರು. ಅವನ ಹಣೆಗೆ ದೇವರ ಪ್ರಸಾದ ಹಚ್ಚಿದರು. ಅವನ ಬಾಯಿಗೆ ತೀರ್ಥ ಹಾಕಿದರು. ಮಹಾರಾಜರು ಅವನನ್ನು ಕರೆಯತೊಡಗಿದರು. ಮಗು, ಏಳು. ಎಚ್ಚರವಾಗು, ಮಗೂ ಎಲ್ಲೆ ಮಗೂ, ಏಳುತ್ತೀಯಲ್ಲ! ಆ ಮಗುವು ಮೆಲ್ಲನೆ ಕಣ್ಣು ತೆರೆಯಿತು, ಕೈ-ಕಾಲು ಆಡಿಸತೊಡಗಿತು. ಶ್ರೀ ಮಹಾರಾಜರು ಮಗುವನ್ನು

ತಾಯಿಯ ಬಳಿ ಕೊಟ್ಟರು. ಜನ್ಮ ಜನ್ಮಾಂತರದಲ್ಲಿ ಭೆಟ್ಟಿಯಾಗುವಷ್ಟು ಆನಂದ ಆ ಮಾತೆಗೆ ಆಯಿತು. ದುಃಖಾಶ್ರುಗಳು ಆನಂದಾಶ್ರುಗಳಾದುವು.

ಸ್ವಲ್ಪ ಹೊತ್ತಿನ ಮೊದಲು ಇದ್ದ ಆತಂಕ ಒಮ್ಮೆಗೆ ಮಾಯವಾಯಿತು. ಜನರು ಆನಂದದಿಂದ ಮತ್ತು ಸಮಾಧಾನವಾಗಿ ಉಂಡರು. ಭೋಜನದ ಬಳಿಕ ರಾವಸಾಹೇಬರು ಶ್ರೀಮಹಾರಾಜನ ಮುಂದೆ ಬಂದರು. ಅವರ ಚರಣಗಳನ್ನು ಗಟ್ಟಿಯಾಗಿ ಹಿಡಿದರು ಮತ್ತು ಹೇಳಿದರು – ಮಹಾರಾಜ! ನಾನು ಅಪರಾಧಿ ಯಾಗಿದ್ದೇನೆ. ನನ್ನನ್ನು ಕ್ಷಮಿಸಿರಿ. ನೀವು ಸಾಕ್ಷಾತ್ ಸಮರ್ಥರೇ ಆಗಿರುವಿರಿ. ಅವರ ಅವತಾರವೇ ಆಗಿದ್ದೀರಿ. ಶ್ರೀಮಹಾರಾಜರು ರಾವಸಾಹೇಬರನ್ನು ಪ್ರೇಮದಿಂದ ಎಬ್ಬಿಸಿ ಬಳಿಯಲ್ಲಿ ಕುಳ್ಳಿರಿಸಿ ಹೇಳಿದರು – ನಿಮ್ಮ ಮೇಲೆ ಸಮರ್ಥ ರಾಮದಾಸರ ಕೃಪೆ ಇದೆ. ಮುಂದಿನ ದಾಸನವಮಿಗೆ ಸಜ್ಜನಗಡಕ್ಕೆ ಹೋಗಿ ಅವರ ದರ್ಶನ ಪಡೆಯಿರಿ. ನಿಮ್ಮ ಮಗುವನ್ನು ರಾಮನು ಬದುಕಿಸಿದನು. ಅವನನ್ನು ಮರೆಯಬೇಡಿ. ಅವನ ಸ್ಮರಣೆ ಮಾಡಿರಿ. ಈಗ ಆ ಮಗು ಪೂರ್ಣ ಎಚ್ಚೆತ್ತುಕೊಂಡ. ಕೈಕಾಲು ಆಡಿಸುವುದು, ಅಮ್ಮನ ಕೊರಳಲ್ಲಿ ಕೈ ಹಾಕಿ ಅಂಟಿಕೊಳ್ಳುವುದು ಮುಂತಾದ ನೈಸರ್ಗಿಕ ಕ್ರಿಯೆ ಪ್ರಾರಂಭ ವಾದುವು. ಶ್ರೀಮಹಾರಾಜರು ಆ ಮಗುವಿಗೆ ತನ್ನ ಕೈಯಿಂದ ಹಾಲು ಕುಡಿಸಿದರು. ಮುಂದೆ ರಾವಸಾಹೇಬರು ಮಾತ್ರ ದೊಡ್ಡ ಆಧ್ಯಾತ್ಮಿಕ ಯೋಗ್ಯತೆಗೆ ಮುಟ್ಟಿದರು.

ಶ್ರೀಮಹಾರಾಜರು ಉಜ್ಜೈನದಲ್ಲಿದ್ದಾರೆ ಎಂಬ ವಾರ್ತೆ ಜೇಜೀಬಾಯಿಗೆ ತಿಳಿಯಿತು. ಅವರು ಕೂಡಲೇ ಉಜ್ಜೈನಿಗೆ ಬಂದು ತಲುಪಿದರು. ತುಂಬಾ ಆಗ್ರಹ ಪಡಿಸಿ ಮಹಾರಾಜರನ್ನು ಇಂದೋರಿಗೆ ಕರಕೊಂಡು ಹೋದರು. ಅಲ್ಲಿ ಹಿಂದೆ ಭೆಟ್ಟಿಯಾಗಿದ್ದ ಒಬ್ಬ ಗವಳಿ ಭೆಟ್ಟಿಯಾದ. ಅವನು ಮಹಾರಾಜರ ಚರಣಗಳಲ್ಲಿ ಶಿರವನ್ನಿಟ್ಟು ಹೇಳಿದ – ಮಹಾರಾಜ! ತಮ್ಮ ಕೃಪೆಯಿಂದ ಎಲ್ಲವೂ ಚೆನ್ನಾಗಿದೆ. ಮಕ್ಕಳು ದೊಡ್ಡವರಾದರು. ಜೀವನದ ದಾರಿ ನೋಡಿಕೊಂಡಿದ್ದಾರೆ. ಹೆಂಡತಿಯಷ್ಟು ಎರಡು ವರ್ಷಗಳ ಹಿಂದೆ ದೇವರಪಾದ ಸೇರಿದರು. ಈಗ ನನಗೂ ಎಪ್ಪತ್ತು ದಾಟಿದೆ. ಈ ದೇಹದ ಭಸ್ಮ ನಿಮ್ಮ ಸ್ಪರ್ಶದಿಂದ ಪಾವನವಾಗಬೇಕೆಂಬ ಇಚ್ಛೆ ಇದೆ. ಮಹಾರಾಜರು ಹೇಳಿದರು – ಪ್ರಭು ನಿನ್ನ ಆಸೆ ಪೂರ್ಣ ಮಾಡುವನು. ಒಂದು ವಾರ ಕಳೆಯಿತು. ಚಳಿಗಾಲವಿತ್ತು. ಬೆಳಗಿನ ಝಾವ ನಾಲ್ಕು ಗಂಟೆಗೆ ಮಹಾರಾಜರಿಗೆ ಎಚ್ಚರವಾಯಿತು. ಅವರು ಹಾಗೆಯೇ ಗವಳಿಯ ಮನೆಗೆ ಹೋದರು. ಆಗ ಗವಳಿ ಎದ್ದಿದ್ದ, ಹಾಸಿಗೆಯಲ್ಲೇ ಕುಳಿತು ಶ್ರೀ ಮಹಾರಾಜರ ಮಾನಸ ಪೂಜೆ ಮಾಡುತ್ತಿದ್ದ. ಆ ಮಾನಸ ಪೂಜೆಯಲ್ಲಿ ಅವನು ಅವರ ಪ್ರಿಯವಾದ ಗಟ್ಟಿ ಮೊಸರು ನೈವೇದ್ಯ ಮಾಡಿದನು. ಮನಸ್ಸಿನಲ್ಲೇ

ಅಂದುಕೊಂಡ - ಈಗ ಇಲ್ಲಿ ಮಹಾರಾಜರು ಇದ್ದಿದ್ದರೆ ಅವರಿಗೆ ಪರಮಾನಂದವಾಗುತ್ತಿತ್ತು. ಕಣ್ಣು ಬಿಟ್ಟು ನೋಡಿದಾಗ ಮಹಾರಾಜರು ಎದುರಿಗೆ ನಿಂತಿದ್ದಾರೆ, ಅವರೆಂದರು - ಗವಳಿದಾದಾ! ನನ್ನ ಮೊಸರು ಕೊಡಿ ನನಗೆ. ಅನಂತರ ಬೆಳಿಗ್ಗೆ ಆ ಮನೆಯಲ್ಲಿ ಶ್ರೀ ಮಹಾರಾಜರ ನಿಜವಾದ ಪೂಜೆ ನೆರವೇರಿತು. ಶ್ರೀಮಹಾರಾಜರು ಸ್ವತಃ ಗವಳಿದಾದಾನಿಗೆ ಸ್ನಾನ ಮಾಡಿಸಿದರು. ಅನಂತರ ಗವಳಿಯ ಮಗ ಮಹಾರಾಜರಿಗೆ ಸ್ನಾನ ಮಾಡಿಸಿದ. ಸ್ನಾನವಾದ ಬಳಿಕ ಗವಳಿದಾದಾರವರು ಅವರ ಮನಃ ಪೂರ್ವಕ ಪೂಜೆ ಮಾಡಿದರು. ಗಟ್ಟಿ ಮೊಸರಿನ ನೈವೇದ್ಯ ಮಾಡಿದ, ಮಹಾರಾಜರು ಸ್ವಲ್ಪ ಮೊಸರು ತೆಗೆದುಕೊಂಡರು. ಸ್ವಲ್ಪ ಮೊಸರನ್ನು ಗೌವಳಿಗೆ ಕೊಟ್ಟರು. ಉಳಿದದ್ದು ಮನೆಯವರು ಎಲ್ಲರಿಗೆ ಹಂಚಿದರು. ಅವರು ಹೇಳಿದರು - ಗವಳಿದಾದಾ! ನಿನ್ನ ಸಂಸಾರವನ್ನು ಸ್ವಯಂ ಭಗವಂತನೇ ದಾರಿಗೆ ಹಚ್ಚಿದನು. ಇನ್ನು ನೀನು ಅವನಲ್ಲಿ ಬೇಡುವುದು ಏನೂ ಉಳಿಯಲಿಲ್ಲ. ಗವಳಿಯು ತನ್ನ ಮಸ್ತಕವನ್ನು ಶ್ರೀಮಹಾರಾಜರ ಚರಣಗಳಲ್ಲಿ ಇಟ್ಟನು. ಇಟ್ಟ ಮಸ್ತಕ ಮತ್ತೆ ಎತ್ತಲಿಲ್ಲ. ಶ್ರೀಮಹಾರಾಜರು ಅವನ ಮಸ್ತಕವನ್ನು ತನ್ನ ತೊಡೆಯಲ್ಲಿರಿಸಿಕೊಂಡರು. ಅವನು ನಿಜಧಾಮಕ್ಕೆ ತೆರಳಿದ್ದನು. ಮಹಾರಾಜರು ಅವನ ಆಪ್ತರಿಗೆ ಹೇಳಿದರು - ಗವಳಿದಾದಾ ದೇವರ ಪಾದ ಸೇರಿದ್ದಾರೆ. ಒಬ್ಬ ತಪಸ್ವೀ ಯೋಗಿಯಂತೆ ಅವರ ಅಂತ್ಯವಾಗಿದೆ. ಇದು ನಾಮನಿಷ್ಠೆಯ ಫಲವಾಗಿದೆ. ಅವರು ಈಶ್ವರ ಸನ್ನಿಧಿಗೆ ಹೋದರು. ಅವರು ಹೋದುದರ ದುಃಖ ಮಾಡಬೇಡಿ. ಆ ಗವಳಿದಾದಾನಿಗೆ ಶ್ರೀಮಹಾರಾಜರ ಮೇಲೆ ಪರಮನಿಷ್ಠೆ ಇತ್ತು. ಅವರು ಸ್ವತಃ ಅವನ ಅಂತಿಮಕಾರ್ಯ ಮಾಡಿದರು. ಅವನ ಅಸ್ಥಿ ಗಂಗಾನದಿಯಲ್ಲಿ ವಿಸರ್ಜಿಸಿದರು.

ಜೇಜೇಬಾಯಿಯ ಕನ್ಯೆ ತಾಯಿ ಬಾಲ್ಯದಿಂದಲೇ ಶರೀರದಲ್ಲಿ ಅಶಕ್ತಳೇ ಆಗಿದ್ದಳು. ಈಗ ಇಪ್ಪತ್ತು ವರ್ಷದವಳಾಗಿ ಮದುವೆಯಾಗಿ ನಾಲ್ಕೈದು ವರ್ಷವಾಗಿತ್ತು. ಆಕೆ ಬಸುರಿ ಆದಳು. ಬಯಕೆ ಉಂಟಾಯಿತು. ಇದೆಲ್ಲದರಲ್ಲಿ ಅವಳಿಗೆ ಅಶಕ್ತತೆಯಿಂದ ಕಷ್ಟವಾಯಿತು. ಆಕೆಯ ಕೈಕಾಲು ಊದಿಕೊಂಡವು. ರಕ್ತ ಕ್ಷಯದ ಲಕ್ಷಣಗಳು ಕಂಡುಬಂದವು. ಡಾಕ್ಟರನ್ನು ಮನೆಗೆ ಕರೆಸಿದರು. ಅವರು ಆಕೆಯನ್ನು ಪರೀಕ್ಷಿಸಿದರು. ಅವರು ಗಂಭೀರರಾಗಿ ಈ ಹೆರಿಗೆಯಿಂದ ಈ ಮಗು ಹೇಗೆ ದಾಟಿಯಾಳು? ಎಂಬ ಚಿಂತೆ ವ್ಯಕ್ತಗೊಳಿಸಿದರು. ಬಾಲ್ಯದಿಂದಲೇ ತಾಯಿಯು ಮಹಾರಾಜರ ಮುದ್ದಿನವಳು. ಮಹಾರಾಜರಿಗೂ ಆಕೆಯ ಮೇಲೆ ಪ್ರೇಮವಿತ್ತು. ಆಕೆಯ ಸ್ಥಿತಿ ನೋಡಿ ಮಹಾರಾಜರು ಹೇಳಿದರು - ತಾಯಿ! ಉಸಿರಾಡಲೂ ನಿನಗೆ ಕಷ್ಟವಾಗುತ್ತಿದೆ. ಶರೀರದಲ್ಲಿ ರಕ್ತವೂ

ಕಡಿಮೆ ಇದೆ. ನನಗೆ ದೊಡ್ಡ ಚಿಂತೆ ಇಟ್ಟುಕೊಂಡಿದೆ. ತಾಯಿ ಹೇಳಿದಳು – ನನ್ನ ಬಳಿ ನೀವಿರುವ ತನಕ ನನಗೆ ಚಿಂತೆ ಇಲ್ಲ. ನೀವು ಹೇಳಿದಂತೆಯೇ ನಾನು ಸತತ ನಾಮಸ್ಮರಣೆ ಮಾಡುತ್ತೇನೆ. ನಾಮಸ್ಮರಣೆಯಿಂದ ನನಗೆ ಧೈರ್ಯ ಬರುತ್ತದೆ.

ಎಂಟು ದಿನಗಳ ಬಳಿಕ ತಾಯಿಗೆ ಹೊಟ್ಟೆನೋವು ಪ್ರಾರಂಭವಾಯಿತು. ರಾತ್ರೆ ಹನ್ನೊಂದೂವರೆಗೆ ಹೊಟ್ಟೆ ನೋವು ಜಾಸ್ತಿಯಾಯಿತು. ಆಕೆಯ ಸಹನಶೀಲತೆ ಮುಗಿಯುತ್ತಾ ಬಂತು. ಅವಳೆಂದಳು ಮಹಾರಾಜರನ್ನು ಕರೆಸಿರಿ. ಇನ್ನು ನನ್ನನ್ನು ಬಿಡಿಸಿರಿ ಎಂದು ಹೇಳಿರಿ, ಜೀಜೀಬಾಯಿ ತಾಯಿಯ ಸಂದೇಶ ಎತ್ತಿಕೊಂಡು ಮಹಾರಾಜರ ಬಳಿಗೆ ಬಂದರು. ಆಗಲೇ ಆಕೆಗೆ ಹೇಳಿದರು – ನನ್ನ ಸೊಂಟವೇ ಬಹಳ ನೋಯುತ್ತಿದೆ. ನನಗೆ ಹೊದೆಯಲು ಗೋಧೋಡಿ ಕೊಡಿ. ಜೀಜೀಬಾಯಿಯವರು ಮಹಾರಾಜರಿಗೆ ಗೋಧೋಡಿ ಹೊದೆಯಲು ಕೊಟ್ಟರು. ಅದನ್ನು ಹೊದ್ದುಕೊಂಡು ಮಲಗಿದರು. ನೋವಿನಿಂದ ನರಳತೊಡಗಿದರು. ಇತ್ತ ತಾಯಿಯ ವೇದನೆ ನಿಂತವು. ಅಕೆಗೆ ಮಂಪರು ಬಂದು ಮೂರ್ಛೆ ಹೋದಳು. ಸ್ವಲ್ಪ ಹೊತ್ತಿನಲ್ಲಿ ಮಹಾರಾಜರ ಗೋಧೋಡಿಯಿಂದ ನವಜಾತ ಶಿಶುವಿನ ಅಳು ಕೇಳಿಸಿತು. ಮಹಾರಾಜರು ಹೇಳಿದರು – ಅರೇ! ತಾಯಿಯ ಮಗು! ಇಲ್ಲಿ ಹೇಗೆ ಬಂತು? ಇದನ್ನು ತಾಯಿಯ ಬಳಿಗೆ ಕೊಂಡುಹೋಗಿ, ಜೀಜೀಬಾಯಿಯು ಆ ಮಗುವನ್ನು ಎತ್ತಿಕೊಂಡು ತಾಯಿಯ ಬಳಿಗೆ ತಂದರು. ಅವಳು ಈ ಹಿಂದೆ ಅವರ ಅನೇಕ ಲೀಲೆಗಳನ್ನು ಕಂಡಿದ್ದಳು. ಅದರಿಂದ ಆಕೆಗೆ ಆಶ್ಚರ್ಯವಾಗಲಿಲ್ಲ. ಜೀಜೀಬಾಯಿಯು ತಾಯಿಯನ್ನು ಕರೆದಳು. ತಾಯಿ ಎಚ್ಚರಗೊಂಡಳು. ಅವಳೆಂದಳು – ಮಹಾರಾಜರು ಎಲ್ಲಿದ್ದಾರೆ? ನನ್ನ ಬಳಿಯಲ್ಲೇ ಕುಳಿತಿದ್ದರಲ್ಲ! ಅವರು ಸ್ವಂತ ತಮ್ಮ ಕೈಯಿಂದ ಮಗುವನ್ನು ನನ್ನ ಕೈಗೆ ಕೊಟ್ಟರು. ಎಲ್ಲಿದ್ದಾರೆ ಅವರು? ಒಂದು ಗಂಟೆ ಕಳೆಯುತ್ತಲೇ ಮಹಾರಾಜರು ತಾಯಿಯ ಕೋಣೆಗೆ ಬಂದರು. ಅವರು ತಾಯಿಗೆ ಹೇಳಿದರು – ಮಗು ಹೆದರಬೇಡ ! ಶಾಂತವಾಗಿರು. ವಿಶ್ರಾಂತಿ ಪಡೆ, ನಾಮಸ್ಮರಣೆ ಮಾಡು.

□□

-: ಹದಿನೇಳು :-

# ಶ್ರೀಮಹಾರಾಜರು ಗೊಂದವಲೆಗೆ

ಶ್ರೀಮಹಾರಾಜರ ಇಂದೋರಿನ ಮುಕ್ಕಾಮಿನಲ್ಲಿ ಅವರನ್ನು ಭಯ್ಯಾಸಾಹೇಬ ಮೋಡಕ, ಇಂದೋರಿನ ಅಧಿಪತಿ ತುಕೋಜೀರಾವ ಹೊಳ್ಕರ್ ಇಂತಹ ಧನ-ಮಾನದಿಂದ ದೊಡ್ಡವರಾದ ಜನರು ಭೆಟ್ಟಿಯಾದರು. ಶ್ರೀಮಹಾರಾಜರ ಸತ್ಸಂಗ ಅವರಿಗೆ ಅವರ ಭಾಗ್ಯದಿಂದ ದೊರಕಿತ್ತು. ಪರಿಣಾಮದಲ್ಲಿ ಅವರು ರಾಮನಾಮದಲ್ಲಿ ತೊಡಗಿದರು. ಇಂದೋರಿನಲ್ಲೇ ಮಹಾರಾಜರಿಗೆ ಶ್ರೀ ಆನಂದಸಾಗರ ಮತ್ತು ಶ್ರೀಬ್ರಹ್ಮಾನಂದರು ಭೆಟ್ಟಿಯಾದರು. ಶ್ರೀಮಹಾರಾಜರು ಇಂದೋರಿನಲ್ಲಿದ್ದಾರೆ ಎಂಬ ವಾರ್ತೆ ಗೊಂದವಲೆಗೆ ಮುಟ್ಟಿತು. ಗೀತಾಬಾಯಿಯವರು ಶ್ರೀಮಹಾರಾಜರಿಲ್ಲದೆ ಅಸ್ವಸ್ಥರಾಗಿದ್ದರು. ಅವರು ದಾದೋಬಾ ಮತ್ತು ಗೋಪಾಳ ಇವರಿಬ್ಬರು ತನ್ನ ಸಂಬಂಧಿಗಳನ್ನು ತನ್ನ ಮಗನನ್ನು ಕರೆತರಲು ಇಂದೋರಿಗೆ ಕಳಿಸಿದರು. ದಾದೋಬಾ ಹಾಗೂ ಗೋಪಾಳ ಇಂದೋರಿಗೆ ಬಂದರು. ಅವರು ಮಹಾರಾಜರಿಗೆ ಆಮ್ಮನ ಸಂದೇಶ ಹೇಳಿದರು. ತಾಯಿಯ ನೆನಪಿನಿಂದ ಅವರ ಕಣ್ಣು ಒದ್ದೆಯಾದವು. ಆಗ ಅವರು ಇಂದೊರನ್ನು ಬಿಟ್ಟು ಮರಳಿ ಗೊಂದವಲೆಗೆ ಹೋಗುವರು ಎಂದು ತಿಳಿದಾಗ ಅವರ ದರ್ಶನಕ್ಕಾಗಿ ಭಕ್ತರ ಸಂದಣಿ ಸೇರಿತು.

ಹೊರಡುವ ಮೊದಲು ಜೀಜೀಬಾಯಿಯವರು ಶ್ರೀಮಹಾರಾಜರಿಗೆ ಒಂದು ಮಾತಿನ ನೆನಪು ಮಾಡಿಕೊಟ್ಟರು. ಮಹಾರಾಜ! ನೀವು ನನಗೆ ತಮ್ಮ ಗುರು ಶ್ರೀ ತುಕಾಯಿಯವರ ದರ್ಶನಕ್ಕೆ ಕೊಂಡು ಹೋಗುವ ಮಾತು ಕೊಟ್ಟಿರುವಿರಿ. ಆಗ ಅಲ್ಲೇ ಇದ್ದ ಭಯ್ಯಾ ಸಾಹೇಬರೂ ಶ್ರೀ ತುಕಾಮಾಯಿಯ ದರ್ಶನಕ್ಕಾಗಿ ಬರುವ ಇಚ್ಛೆಯನ್ನು ವ್ಯಕ್ತಪಡಿಸಿದರು. ಶ್ರೀಮಹಾರಾಜ ಹೇಳಿದರು - ನಾನು ನನ್ನ ಮಾತನ್ನು ನಡೆಸಿ ಕೊಡುವೆನು. ಆದರೆ ಯೆಹಳೆಗಾವಿಗೆ ಹೋದ ಬಳಿಕ ಯಾರೂ ನನ್ನನ್ನು ಮಹಾರಾಜ

ಎಂದು ಹೇಳುವುದಲ್ಲ ಮತ್ತು ಯಾರೂ ನನಗೆ ನಮಸ್ಕಾರವನ್ನೂ ಮಾಡಬಾರದು. ಅವರಿಬ್ಬರೂ ಅದನ್ನು ಒಪ್ಪಿಕೊಂಡರು. ಶ್ರೀಮಹಾರಾಜರು ಇಬ್ಬರನ್ನೂ ಕರೆದುಕೊಂಡು ಯೆಹಳೆ ಊರಿಗೆ ಹೋದರು. ಮೂವರೂ ಶ್ರೀತುಕಾಮಾಯಿಯ ಆಶೀರ್ವಾದ ಪಡೆದರು. ಅನಂತರ ಆ ಮೂವರೂ ಗೊಂದವಲೆಗೆ ಮರಳಿದರು. ಗೀತಾಬಾಯಿಗೆ ಆದ ಆನಂದ ವರ್ಣನಾತೀತ. ಭಯ್ಯಾಸಾಹೇಬ ಮತ್ತು ಜೀಜೀಬಾಯಿ ಹದಿನೈಯ್ದು ದಿನ ಗೊಂದವಲೆಯಲ್ಲಿ ಉಳಿದು ಇಂದೋರಿಗೆ ಮರಳಿದರು.

1890 ರಿಂದ ಶ್ರೀಮಹಾರಾಜರ ವಾಸ್ತವ್ಯ ಹೆಚ್ಚಿನ ಪ್ರಮಾಣದಲ್ಲಿ ಗೊಂದವಲೆಯಲ್ಲೇ ಇರುತ್ತಿತ್ತು. ಒಂಭತ್ತನೇ ವರ್ಷದಿಂದ ಶ್ರೀಮಹಾರಾಜರು ಮನೆಯಿಂದ ಹೊರಬಿದ್ದು ಭಾರತ ಭ್ರಮಣ ಪ್ರಾರಂಭಿಸಿದುದು ನಲವತ್ತೈದನೆಯವರೆಗೆ ಸತತವಾಗಿ ನಡೆಯಿತು. ಸೊಂಟದಲ್ಲಿ ಕೌಪೀನ ಧರಿಸಿದ ಮಹಾರಾಜರು ಹೆಚ್ಚಾಗಿ ಒಬ್ಬಂಟಿಗರಾಗಿಯೇ ಕಾಲ್ನಡಿಗೆಯಿಂದ ಭ್ರಮಣ ಮಾಡುತ್ತಿದ್ದರು. ದೇವ ಭೂಮಿ ಇಡೀ ಭಾರತವನ್ನು ಸುತ್ತಾಡಿದರು. ಅನೇಕ ತೀರ್ಥ ಕ್ಷೇತ್ರಗಳಿಗೆ ಅವರು ಹೋದರು. ಈಶ ದರ್ಶನ, ಪವಿತ್ರ ನದಿಗಳಲ್ಲಿ ಸ್ನಾನ ಮಾಡಿದರು. ಅವರು ಅನೇಕ ಸಲ ಕಾಲಿಂದ ಕಾವಡಿಯನ್ನು ರಾಮೇಶ್ವರಕ್ಕೆ ಕೊಂಡುಹೋದರು. ಈ ಭ್ರಮಣದಲ್ಲಿ ಅವರು ಪ್ರತಿಯೊಂದು ಕಡೆ ಸೂಕ್ಷ್ಮ ನಿರೀಕ್ಷಣ ಮಾಡಿದರು. ಮಾನವೀ ವೃತ್ತಿಯನ್ನು ಅಭ್ಯಸಿಸಿದರು. ಅವರ ಬಳಿ ಬಂದವರಿಗೆಲ್ಲ ನಾಮ ಮಾಹಾತ್ಮ್ಯೆಯನ್ನು ಹೇಳಿ ರಾಮನಾಮದಲ್ಲಿ ತೊಡಗಿಸಿದರು. ಅವರ ಸಂಪರ್ಕದಲ್ಲಿ ಯೋಗೀ, ವೇದಾಂತಿ, ಸಂನ್ಯಾಸಿಗಳು ಬಂದರು. ಅವರೂ ಶ್ರೀಮಹಾರಾಜರ ಸತ್ಸಂಗದಿಂದ ಶ್ರೀರಾಮನ ನಾಮ ಸ್ಮರಣೆಯಲ್ಲಿ ತೊಡಗಿದರು. ಶ್ರೀಮಂತರು, ದೊಡ್ಡ ಪದಾಧಿಕಾರಿಗಳು, ವಿದ್ವಾನ್, ಪಂಡಿತ ಇಂತಹ ಜನರೂ ರಾಮನಾಮದಿಂದ ಪ್ರಭಾವಿತರಾದರು. ಶ್ರೀಮಂತ, ಬಡವ, ಸ್ತ್ರೀ - ಪುರುಷ, ಸಣ್ಣವರು, ದೊಡ್ಡವರು ಯಾರೇ ಇರಲಿ ಮಹಾರಾಜರ ಸಂಪರ್ಕದಲ್ಲಿ ಬಂದವರೆಲ್ಲ ರಾಮನಾಮದಲ್ಲಿ ತೊಡಗಿದರು. ಶ್ರೀಮಹಾರಾಜರು ಪ್ರತಿಯೊಬ್ಬರ ಕೈಗೆ ಶ್ರೀರಾಮನಾಮದ ಮಾಲೆ ಕೊಟ್ಟರು. ಶ್ರೀರಾಮ ಜಯ ರಾಮ ಜಯ ಜಯ ರಾಮ ಎಂಬ ನಾಮ ಅವರ ನಾಲಿಗೆ ಜಪ ಮಾಡತೊಡಗಿತು. ಅನೇಕ ಭಕ್ತರು ಪ್ರತ್ಯಕ್ಷ ಗೊಂದವಲೆಗೆ ಎಂದೂ ಬಂದಿಲ್ಲ. ಕಾಶೀ ಮತ್ತು ಅಯೋಧ್ಯೆಯ ಭಕ್ತರು ಮಹಾರಾಜರನ್ನು ದಖ್ಖನಕಾ ಸಾಧು ಎಂದು ಹೇಳುತ್ತಿದ್ದರು. ಇಂದೋರ ಮತ್ತು ಬೇರೆ ಕಡೆಯ ಜನರು ಮಾತ್ರ ಅವರನ್ನು ಗೊಂದವಲೇಕರ ಮಹಾರಾಜ ಎಂದು ಹೇಳತೊಡಗಿದರು.

ಹೀಗೆಯೇ ಭ್ರಮಣ ಕಾಲದಲ್ಲಿ ಶ್ರೀಮಹಾರಾಜರು ಹಲ್ಲ್ಯಾ ಎಂಬ ಊರಿಗೆ ಹೋಗಿದ್ದರು. ಭಿಕ್ಷೆಗಾಗಿ ಅವರು ಒಂದು ಮನೆಯ ಮುಂದೆ ನಿಂತು ಜಯ ಜಯ ರಘುವೀರ ಸಮರ್ಥ ಎಂದು ಉಚ್ಚರಿಸಿದರು. ಮನೆಯ ಯಜಮಾನಿತಿ ಭಿಕ್ಷೆ ಕೊಡಲು ಬಂದಳು. ಆಕೆಯ ಕಣ್ಣುಗಳು ಅತ್ತು - ಅತ್ತು ಬಾತು ಹೋಗಿದ್ದವು.

ಮಹಾರಾಜರು ಕೇಳಿದರು - ಅಮ್ಮಾ! ದುಃಖಿಯಾಗಿ ಕಾಣುತ್ತೀರಿ ಇಷ್ಟೊಂದು ಏನಾಯಿತು? ಆಕೆಯು ಹೇಳಿದಳು - ಏನ ಹೇಳಲೀ, ಹದಿನೈಯ್ದು ದಿನಗಳಿಂದ ಮಗ ಜ್ವರದಿಂದ ಕುದಿಯುತ್ತಿದ್ದಾನೆ. ವೈದ್ಯರು ಔಷಧಿಗಳನ್ನು ಬದಲಿಸಿ - ಬದಲಿಸಿ ಕೊಟ್ಟರು, ಉಪಯೋಗವಾಗಲಿಲ್ಲ. ಆ ತಾಯಿ ಹೇಳುತ್ತಾ - ಹೇಳುತ್ತಾ ಅಳತೊಡಗಿದಳು.

ಶ್ರೀಮಹಾರಾಜರು ಮನೆಯೊಳಗೆ ಹೋದರು. ಜ್ವರದಿಂದ ಹುಡುಗ - ನಿಶ್ಚೇಷ್ಟಿತನಾಗಿ ಬಿದ್ದಿದ್ದ. ಮಹಾರಾಜರು ಅವನ ಬಳಿಗೆ ಹೋಗಿ ಪ್ರೇಮದಿಂದ ಕರೆದರು - ಮಗು ಬೇಗನೆ ಹುಷಾರಾಗುವೆ, ಚಿಂತಿಸಬೇಡ. ನಾನು ನಿನ್ನ ಕೈಗೆ ನೀರು ಕೊಡುತ್ತೇನೆ. ಆ ನೀರನ್ನು ನೀನು ನನ್ನ ಜ್ವರ ನಿಮಗೆ ಕೊಟ್ಟೆ ಎಂದು ಹೇಳಿ ನನ್ನ ಕೈಮೇಲೆ ಕೊಡು. ಮಹಾರಾಜರು ಹೇಳಿದಂತೆ ಮಗುವು ಮಾಡಿತು. ಶ್ರೀಮಹಾರಾಜರು ಆ ಮನೆಯಿಂದ ಹೊರಬಿದ್ದರು. ಅದೇ ದಿನ ಸಂಜೆ ಅವರಿಗೆ ವಾಸುದೇವ ಭಟಜೀ ಭೆಟ್ಟಿಯಾದರು. ಅವರು ಅವನಿಗೆ ಬೆಳಗಿನ ಎಲ್ಲ ಘಟನೆಯನ್ನು ಹೇಳಿ ಅವರು ಹೇಳಿದರು - ಈಗ ನನಗೆ ತೆಗೆದುಕೊಂಡ ಜ್ವರವನ್ನು ಅನುಭವಿಸಬೇಕಾಗಿದೆ. ಭಟಜೀಯವರು ಅವರಿಗೆ ಒಂದು ಖಾಲಿ ಕೊಠಡಿಯ ವ್ಯವಸ್ಥೆ ಮಾಡಿದರು. ಮಹಾರಾಜರು ಹನ್ನೊಂದು ದಿನ ಆ ಕೊಠಡಿಯಲ್ಲಿ ಮಲಗಿಯೇ ಇದ್ದರು. ಹನ್ನೆರಡನೆಯ ದಿನ ಶ್ರೀಮಹಾರಾಜರು ಕೊಠಡಿಯಿಂದ ಹೊರಬಂದರು. ಭಟಜೀಯವರಿಗೆ ಹೇಳಿದರು - ಈಗ ಭೋಗ ಅನುಭವಿಸಿ ಮುಗಿಯಿತು. ಜ್ವರ ಇಳಿದಿದೆ. ಸ್ನಾನ ಮಾಡಿ ಬರುತ್ತೇನೆ. ಬಳಿಕ ಮೆತ್ತನೆಯ ಅನ್ನ ತಿನ್ನುವೆನು, ಹೆಚ್ಚು ಏನೂ ಬೇಡ. ಭಟಜೀಯವರು ಮನೆಯಲ್ಲಿ ಪತ್ನಿಗೆ ಮಹಾರಾಜರಿಗಾಗಿ ಮೆತ್ತನೆಯ ಅನ್ನ ಮಾಡಲು ಹೇಳಿದರು. ಹತ್ತಿರದ ಬಾವಿಯಲ್ಲಿ ಶ್ರೀಮಹಾರಾಜರು ಹಾರಿದರು. ಬಹಳ ಹೊತ್ತಾದರೂ ಅವರು ಮೇಲೆಯೇ ಬಂದಿಲ್ಲ. ವಾಸುದೇವ ಭಟಜೀಯವರಿಗೆ ದಿಗಿಲಾಯಿತು. ಬಹಳ ಹೊತ್ತು ಕಾದು ಅವರು ಸುಸ್ತಾದರು. ಕೊನೆಗೆ ಊರಿನ ಪಟೇಲರ ಬಳಿಗೆ ಹೋಗಿ ಅಳುತ್ತಾ ಅಳುತ್ತಾ ಎಲ್ಲ ವೃತ್ತಾಂತ ಹೇಳಿದರು. ಬಹಳ ಜನ ಸೇರಿ ಭಟಜೀಯವ ಬಾವಿಯ ಬಳಿಗೆ ಬಂದರು. ನೋಡುತ್ತಾರೆ ಶ್ರೀಮಹಾರಾಜರು ಬಾವಿ ಕಟ್ಟೆಯ ಮೇಲೆ ನಾಮಸ್ಮರಣೆ ಮಾಡುತ್ತಾ ಕುಳಿತಿರುವರು.

ಗೊಂದವಲೆ ಚಿಕ್ಕದೊಂದು ಊರು. ಪಂಢರಪುರಕ್ಕೆ ಹೋಗುವ ದಾರಿಯಲ್ಲಿ ಇದೆ. ಆಷಾಢೀ, ಕಾರ್ತಿಕ ವಾರಿಗೆ ಹೋಗುವ ವಾರಕರಿಯವರು ಹೋಗುವಾಗ ಮತ್ತು ಬರುವಾಗ ಗೊಂದವಲೆಯಲ್ಲಿ ಮುಕ್ಕಾಂ ಮಾಡುತ್ತಿದ್ದರು. ಅನೇಕ ಯೋಗೀ, ಸಾಧು, ಸಂತರು ಪ್ರವಾಸದಲ್ಲಿ ವಿಶ್ರಾಂತಿಗಾಗಿ ಈ ಊರಿಗೆ ಬರುತ್ತಿದ್ದರು. ಊರಿನಲ್ಲಿ ಮಾರುತಿ ಮಂದಿರವಿತ್ತು. ಅಲ್ಲಿ ಇಂತಹ ಜನರು ರಾತ್ರಿಯಲ್ಲಿ ಉಳಕೊಳ್ಳುತ್ತಿದ್ದರು. ಶ್ರೀಮಹಾರಾಜರು ಗೊಂದವಲೆಯಲ್ಲಿ ಇರತೊಡಗಿನಿಂದ ಅವರ ದರ್ಶನಕ್ಕೆ ಅವರನ್ನು ಕಾಣಲು ಜನರು ಬರತೊಡಗಿದರು. ಮನೆಯ ಜಾಗ ಸಾಲದಾಯಿತು. ಬರುವ ಜನರಿಗಾಗಿ, ರಾಮನಾಮದ ಉಪಾಸನೆಗಾಗಿ ಒಂದು ಸ್ವತಂತ್ರ ಜಾಗದ ಅವಶ್ಯಕತೆ ಇತ್ತು. ಅವರು ಮನೆಯ ಮುಂದಿನ ಜಾಗದಲ್ಲಿ ಶ್ರೀರಾಮ ಮಂದಿರ ಕಟ್ಟಲು ಪ್ರಾರಂಭಿಸಿದರು. ಶ್ರೀಮಹಾರಾಜರೇ ಮಂದಿರದ ನಕಾಶೆ ಸಿದ್ಧಪಡಿಸಿದರು. ಊರಿನ ಗಾರೆಯವರು, ಬಡಗಿಗಳು, ಇತರ ಜನರು ಕೆಲಸಕ್ಕೆ ತೊಡಗಿದರು. ಮಂದಿರ ಯಾರದು? ರಾಮನದು, ಮಾಡಿಸಿಕೊಳ್ಳುವವ ಯಾರು? ಪ್ರಭು ರಾಮಚಂದ್ರ, ಹೀಗೆ ಮಹಾರಾಜರು ಹೇಳುತ್ತಿದ್ದರು. ನಾನು ಈ ಮಂದಿರ ಕಟ್ಟುತ್ತೇನೆ. ನನಗೆ ಹೀಗೆ ಕಲ್ಪನೆ ಇದೆ ಎಂದು ಅವರು ಎಂದೂ ಹೇಳುತ್ತಿರಲಿಲ್ಲ. ಹಣದ ವ್ಯವಸ್ಥೆ ಏನು? ಅದು ರಾಮನ ಮೇಲೆಯೇ. ದರ್ಶನಕ್ಕೆ ಬರುವ ಜನರು ತಾವಾಗಿ ನೀಡಿದ ಧನ. ಯಾರ ಬಳಿಯಲ್ಲಿಯೂ ಬೇಡುವುದಲ್ಲ ಎಂಬ ನಿಶ್ಚಯ. ಒಮ್ಮೆ ಹೀಗಾಯಿತು – ಒಂದು ವಾರ ಕೆಲಸವಾಯಿತು. ದಿನಗೂಲಿ ನಿಶ್ಚಯಿಸಿದಂತೆ ಏಳು ದಿನಗಳ ಕೂಲಿ ಕೆಲಸದವರಿಗೆ ಕೊಡುವುದಿತ್ತು. ಸಂತೆಯ ದಿವಸ, ಹತ್ತಿರ ಒಂದು ಕಾಸೂ ಇಲ್ಲ. ಕೂಲಿಯವರು ಸಂಬಳಕ್ಕಾಗಿ ಕಾಯುತ್ತಿದ್ದರು. ಅವರಿಗೂ ಮನೆಯವರಿಗಾಗಿ ಸಂತೆಗೆ ಹೋಗಿ, ಉಪ್ಪು, ಮೆಣಸಿನಕಾಯಿ, ಎಣ್ಣೆ, ಧಾನ್ಯ ಮುಂತಾದವು ಕೊಂಡು ಹೋಗುವುದಿತ್ತು. ಶ್ರೀಮಹಾರಾಜರು ಅಂದಿನ ರೊಟ್ಟಿ ಮನೆಯಲ್ಲೆ ಬಡಿಸಿದರು. ಅವರು ಹೇಳಿದರು – ಪ್ರಭು ರಾಮಚಂದ್ರ ಏನಾದರು ವ್ಯವಸ್ಥೆ ಮಾಡಿಯಾನು, ಈಗ ನಾವು ನಾಮಸ್ಮರಣ ಮಾಡುತ್ತಾ ಕುಳಿತುಕೊಳ್ಳುವಾ. ಕೂಲಿಯವರು ಒಪ್ಪಿದರು, ಎಲ್ಲರೂ ನಾಮಸ್ಮರಣೆ ಮಾಡುತ್ತಾ ಕುಳಿತುಬಿಟ್ಟರು.

ಮ್ಹಸವಡದಲ್ಲಿ ಬಾಪೂ ಸಾಹೇಬ ಮಾನೆ ಎಂಬ ಗೃಹಸ್ಥರಿದ್ದರು. ಅವರ ವ್ಯವಸಾಯ ರೈತಾಪಿ ಆಗಿದ್ದರು. ಈ ವರ್ಷ ಅವರು ನಿಶ್ಚಯಿಸಿದ್ದರು – ಕಬ್ಬು ಮಾರಿ ನನಗಾಗುವ ಲಾಭದಲ್ಲಿ ಶೇಕಡಾ ಐದನ್ನು ಮಹಾರಾಜರಿಗೆ ಅರ್ಪಿಸುವುದು. ಉತ್ತಮ ಫಸಲು ಬಂತು, ಲಾಭವೂ ತುಂಬಾ ಆಯಿತು. ಎಲ್ಲರೂ ನಾಮಸ್ಮರಣೆ ಮಾಡುತ್ತಿದ್ದಾಗ

ಅಲ್ಲಿಗೆ ಬಾಪೂ ಸಾಹೇಬರು ಬಂದರು. ಅವರು ಮಹಾರಾಜರ ಚರಣ ವಂದನೆ ಮಾಡಿ, ಅವರ ಕಾಲುಬುಡದಲ್ಲಿ ಬಂದು ನೂರ ಒಂದು ರೂಪಾಯಿ ಇಟ್ಟರು. ಬಾಪು ಸಾಹೇಬರು ಹೊರಟುಹೋದರು. ಶ್ರೀಮಹಾರಾಜರು ಹೇಳಿದರು - ರಾಮರಾಯನು ಭಕ್ತರನ್ನು ಹೇಗೆ ಕಾಪಾಡುತ್ತಾನೆ ನೋಡಿ ಎಲ್ಲರಿಗೆ ಕೂಲಿ ಕೊಟ್ಟರು. ಮುಂದೆ ಬೇಕಾಗುವ ಕಲ್ಲು, ಮಣ್ಣು, ಸುಣ್ಣ ಮುಂತಾದವುಗಳಿಗೂ ವ್ಯವಸ್ಥೆ ಮಾಡಿ ಇಟ್ಟರು.

ಮಂದಿರ ನಿರ್ಮಾಣವಾಗುತ್ತಾ ಇತ್ತು. ಆದರೆ ಮೂರ್ತಿಗಳ ಸುಳಿವು ಇರಲಿಲ್ಲ. ಜನರು ಮಹಾರಾಜರನ್ನು ಅದರ ಕುರಿತು ಯಾವಾಗಲೂ ಕೇಳುತ್ತಿದ್ದರು. ಬರುವನು ನನ್ನ ರಾಮ ಬರುವನು ಎಂದು ಅವರು ಉತ್ತರಿಸುತ್ತಿದ್ದರು. ತಡವಳೆ ಎಂಬ ಊರಿನ ಕುಲಕರ್ಣಿ ಧನಿಕನಾಗಿದ್ದು ಶ್ರೀರಾಮನ ಪರಮ ಭಕ್ತರಾಗಿದ್ದರು. ಅವರು ಶ್ರೀರಾಮ ಮಂದಿರ ಕಟ್ಟುವ ಸಂಕಲ್ಪ ಮಾಡಿದ್ದರು. ಅದಕ್ಕಾಗಿ ಅವರು ಶ್ರೀರಾಮ, ಸೀತಾ, ಲಕ್ಷ್ಮಣ ಹೀಗೆ ಮೂರ್ತಿಗಳನ್ನು ಮಾಡಿಸಿಟ್ಟಿದ್ದನು. ಮಂದಿರ ವ್ಯವಸ್ಥೆಗಾಗಿ ಸುಂದರ ವಾಡೆ ಕಟ್ಟಿಕೊಂಡಿದ್ದರು. ಆದರೆ ಒಂದು ದಿನ ಅಕಸ್ಮಾತ್ತಾಗಿ ಆ ವಾಡೆಗೆ ಬೆಂಕಿ ಬಿತ್ತು. ಬೆಂಕಿಯಲ್ಲಿ ಇಡೀ ವಾಡೆ ಸುಟ್ಟುಹೋಯಿತು. ಮೂರ್ತಿಗಳು ಹಾಗೇ ಉಳಿದವು. ಬೆಂಕಿಯಿಂದ ಅವುಗಳ ಮೇಲೆ ಹೊಗೆಯ ಕಪ್ಪು ಹತ್ತಿತ್ತು. ಕುಲಕರ್ಣಿ ವಾಡೆಯ ರಿಪೇರಿ ಹೇಗಾದರೂ ಮಾಡುವುದರಲ್ಲಿ ತೊಡಗಿದ್ದರು. ಒಂದು ದಿನ ದಣಿದು ಮಲಗಿದ್ದಾಗ ಅವರಿಗೆ ಒಂದು ಸ್ವಪ್ನ ಬಿತ್ತು. ಸ್ವಪ್ನದಲ್ಲಿ ಸ್ವಯಂ ಪ್ರಭು ರಾಮಚಂದ್ರನು ಬಂದು ಕುಲಕರ್ಣಿಯವರಿಗೆ ಹೇಳಿದ - ನನ್ನನ್ನು ಇಂತಹ ಸ್ಥಿತಿಯಲ್ಲಿ ಎಷ್ಟು ದಿನ ಇರಿಸುವೆ? ನನ್ನನ್ನು ಗೊಂದವಲೆ ಬ್ರಹ್ಮಚೈತನ್ಯರ ಬಳಿಗೆ ಕೊಂಡು ಹೋಗು. ಹೀಗೆ ಮೂರು ದಿನ ಸತತ ಸಪ್ನ ಅವರಿಗೆ ಬಿತ್ತು. ಕುಲಕರ್ಣಿಯವರು ಆ ಮೂರ್ತಿಗಳನ್ನು ಗೊಂದವಲೆಗೆ ಕೊಂಡು ಹೋಗಲು ನಿಶ್ಚಯಿಸಿದರು.

□□

-: ಹದಿನೆಂಟು :-

# ಶ್ರೀರಾಮ ಮಂದಿರ

ಭಾನುವಾರ ಬೆಳಿಗ್ಗೆ ಮಹಾರಾಜರು ಹೇಳಿದರು – ಮನೆಗೆ ಯಾರೋ ದೊಡ್ಡ ಅತಿಥಿ ಬರುವವರಿದ್ದಾರೆ, ಅವರ ಸ್ವಾಗತವನ್ನು ನಾವು ಉಪಾಸನೆ, ನಾಮಸ್ಮರಣೆ ಮತ್ತು ಭಜನೆ ಈ ಸಾಧನ ತ್ರಯಿಯಿಂದ ಮಾಡೋಣ. ಎಲ್ಲರೂ ಸ್ನಾನಾದಿ ಮಾಡಿ ತಯಾರಾದರು. ಕಾಳಿನ ಉಸಳಿ, ಬೇಯಿಸಿದ ಗೆಣಸಿನ ಪಲ್ಯ ಹೀಗೆ ಉಪವಾಸದ ಪದಾರ್ಥ ಮಾಡಿದ್ದರು. ಸಾಧಕರು, ಕಟ್ಟಡದ ಕೂಲಿಗಳು ಎಲ್ಲರಿಗೂ ಅವರು ಸ್ವತಃ ಫಲಹಾರ ನೀಡಿದರು. ತಾನು ಮಾತ್ರ ಕೇವಲ ನೈವೇದ್ಯದ ಬಟ್ಟಲು ತುಂಬಾ ಹಾಲು ತೆಗೆದುಕೊಂಡರು. ನಾಮಸ್ಮರಣೆ, ಭಜನೆ ಪ್ರಾರಂಭವಾಯಿತು. ಮಧ್ಯಾಹ್ನ ಒಂದು ಗಂಟೆಗೆ ಶ್ರೀಮಹಾರಾಜರು ಭಜನೆಗೆ ನಿಂತರು. ಎರಡು ತಾಸು ಭಕ್ತಿ ರಸದಿಂದ ನೆನೆದ ಭಜನೆ ಆಯಿತು. ಸಂಜೆ ನಾಲ್ಕು ಗಂಟೆ ಸುಮಾರಿಗೆ ತಡವಳದಿಂದ ಗೊಂದವಲೆಗೆ ಎರಡು ಬಂಡಿಗಳು ಬಂದು ತಲುಪಿದವು. ಎಲ್ಲರೂ ಜಯ ಜಯ ಶ್ರೀರಾಮ, ಜಯ ಜಯ ಶ್ರೀರಾಮ ಎಂದು ಹೇಳುತ್ತಾ ಆ ರಾಮಮೂರ್ತಿಗಳನ್ನು ಇದಿರ್ಗೊಂಡರು. ಶ್ರೀರಾಮ, ಮೂರ್ತಿಗಳು ಮನೆಗೆ ಬಂದವು. ಶ್ರೀರಾಮ, ಲಕ್ಷ್ಮಣ, ಜಾನಕಿ, ಮರುದಿನ ಉಪವಾಸದ ಪಾರಣೆ ನಡೆಯಿತು. ಕುಲಕರ್ಣಿಗಳು ಗೊಂದವಲೆಯವರನ್ನು ಬೀಳ್ಕೊಂಡು ತಡವಳಕ್ಕೆ ಹಿಂತಿರುಗಿದರು. ಮುಂದೆ ಶ್ರೀಮಹಾರಾಜರು ಹೊಗೆಯಿಂದ ಕಪ್ಪಾದ ಮೂರ್ತಿಗಳನ್ನು ಸ್ವಚ್ಛಗೊಳಿಸಿ, ಶಿಲ್ಪಿಗಳಿಂದ ತೇಜೋಮಯವಾಗಿ ಮಾಡಿಸಿಕೊಂಡರು.

ಮಂದಿರ ಕಟ್ಟಿ ಸಿದ್ಧವಾಗಿತ್ತು. ಇದು 1891 ರ ಘಟನೆಯಾಗಿದೆ. ಮ್ಹಾಸುರ್ಣೇಕರ ಶಾಸ್ತ್ರಿಗಳು ಪ್ರಾಣ ಪ್ರತಿಷ್ಠೆಯ ಮುಹೂರ್ತ ಹೇಳಿದರು. ಬಾಪೂ ಸಾಹೇಬ ಮಾನೆ ಇವರು ಸಿಂಹಾಸನ ಮಾಡಿಸಿಕೊಟ್ಟರು. ಸ್ಥಾಪನೆಯ ಮೊದಲು ಅಖಂಡ ನಾಮ ಮತ್ತು

ಭಜನೆ ಸಪ್ತಾಹ ನಡೆಯಿತು. ಇಡೀ ಊರಿಗೆ ಭೋಜನ ಪ್ರಸಾದಕ್ಕೆ ಬರಬೇಕೆಂದು ನಿಮಂತ್ರಣವಿತ್ತು. ನಾಮಸ್ಮರಣ, ಭಜನೆ, ಕೀರ್ತನೆ, ಪುರಾಣ, ಭೋಜನ ಪ್ರಸಾದ ಹೀಗೆ ಎಡೆಬಿಡದೆ ಕಾರ್ಯಕ್ರಮ ವಾರ ಪೂರ್ತಿ ನಡೆಯಿತು. ಅನ್ನದಾನಕ್ಕೆ ಮೇರೆಯೇ ಇರಲಿಲ್ಲ. ಪುಣೆ, ವಾಯಿ, ಸಾತಾರಾ, ಕರ್ಹಾಡ, ಹುಬ್ಬಳ್ಳಿ, ಧಾರವಾಡ ಮುಂತಾದ ಊರುಗಳಿಂದ ಅನೇಕ ಜನರು ಪ್ರತಿಷ್ಠಾಪನಾ ಉತ್ಸವಕ್ಕೆ ಬಂದಿದ್ದರು. ಅಯೋಧ್ಯಾ, ಪ್ರಯಾಗ, ಕಾಶೀ ಹೀಗೆ ತೀರ್ಥಕ್ಷೇತ್ರಗಳಿಂದಲೂ ಜನರು ಬಂದಿದ್ದರು. ವೈದಿಕರು, ವಿದ್ವಾಂಸರು, ಪಂಡಿತರು ಈ ಉತ್ಸವದಲ್ಲಿ ಉಪಸ್ಥಿತರಿದ್ದರು.

ಇಡೀ ಉತ್ಸವದಲ್ಲಿ ಶ್ರೀ ಮಹಾರಾಜರ ಸೂಕ್ಷ್ಮ ದೃಷ್ಟಿಯಿತ್ತು. ಯಾರಿಗೂ ಯಾವುದೇ ಕೊರತೆ ಆಗದಂತೆ ಅವರು ಸ್ವತಃ ನೋಡಿಕೊಳ್ಳುತ್ತಿದ್ದರು. ಅವರ ಹಣೆಗೆ ಗಂಧ, ಕೊರಳಲ್ಲಿ ಎಳೆ ತುಳಸಿ ಹಾರ, ಜರಿಯ ಭಗವಾ ಕಫನಿ, ಕಾಲಿನಲ್ಲಿ ಖಡಾವು ಹೀಗೆ ಮಹಾರಾಜರು ತಮ್ಮ ತಾಯಿಯನ್ನು ಶ್ರೀರಾಮ ದರ್ಶನಕ್ಕಾಗಿ ಕರಕೊಂಡು ಬಂದರು. ಶ್ರೀರಾಮ ದರ್ಶನದಿಂದ ಗೀತಾಬಾಯಿಯ ಕಣ್ಣುಗಳಲ್ಲಿ ಆನಂದಾಶ್ರುಗಳು ಹರಿದವು. ಅವರು ಆ ಮೂರ್ತಿಗಳಿಗೆ ಉಪ್ಪು, ಸಾಸಿವೆ ನಿವಾಳಿಸಿ ಎಸೆದರು. ಶ್ರೀರಾಮರಾಯನಿಗೆ ಅಭಿಷೇಕ ಮಾಡಲು ಸಮುದ್ರದ, ಪವಿತ್ರ ನದಿಗಳ ನೀರು ತಂದಿದ್ದರು. ವಿಪ್ರ ಋತ್ವಿಜರ ಮಂತ್ರ ಘೋಷದಲ್ಲಿ ಪ್ರತಿಷ್ಠಾಪನೆಯಾಯಿತು. ಅಪಾರ ಅನ್ನದಾನವಾಯಿತು. ಶ್ರೀಮಹಾರಾಜರು ವಿದ್ವಾನ್, ಪಂಡಿತರಿಗೆ ಪ್ರತಿಯೊಬ್ಬರಿಗೂ ರೇಷ್ಮೆ ವಸ್ತ್ರ ಮತ್ತು ಒಂದೊಂದು ಸ್ವರ್ಣ ನಾಣ್ಯ ಕೊಟ್ಟರು. ಸಂಬಂಧಿಗಳಿಗೆ ಮತ್ತು ಸ್ನೇಹಿತರಿಗೆ ಒಂದೊಂದು ಶಲ್ಯ ನೀಡಿದರು. ಪ್ರತಿಯೊಬ್ಬ ಕಟ್ಟಡದ ಕೆಲಸಗಾರರಿಗೆ ಅವರ ಮಜೂರಿ ಕೊಟ್ಟಿದ್ದಲ್ಲದೆ ಒಂದೊಂದು ಧೋತಿ, ಒಂದೊಂದು ಮುಂಡಾಸಿನ ಬಟ್ಟೆ ಮತ್ತು ಐದು ರೂಪಾಯಿ ಕೊಟ್ಟರು. ಸುವಾಸಿನಿಯರ ಖಣ ತೆಂಗಿನಕಾಯಿಯಿಂದ ಉಡಿ ತುಂಬಿದರು. ಮೂರ್ತಿ ಪ್ರತಿಷ್ಠಾಪನೆಯ ದಿನ ಹೆಚ್ಚುಕಮ್ಮಿ ಹತ್ತು ಸಾವಿರ ಜನರು ಭೋಜನ ಪ್ರಸಾದ ಸ್ವೀಕರಿಸಿದರು. ದಿನವಿಡೀ ವಾತಾವರಣ ರಾಮನಾಮದಿಂದ ತುಂಬಿ ಹೋಗಿತ್ತು. ರಾತ್ರೆ ಒಂಭತ್ತು ಗಂಟೆಯ ಬಳಿಕ ಶ್ರೀಮಹಾರಾಜರು ಭಜನೆಗೆ ನಿಂತುಕೊಂಡರು.

**ಛತ್ರ ಸಿಂಹಾಸನೀ ಅಯೋಧ್ಯೇಚಾರಾಜಾ । ನಾಂದತಸೆ ಮಾಝಾ ಮಾಯಬಾಪ ॥**
**ಶ್ರೀರಾಮಚಂದ್ರಾ ಕರುಣಾ ಸಮುದ್ರಾ । ಧ್ಯಾತೋ ತುಝಿ ರಾಜಸ ಯೋಗ ಮುದ್ರಾ ॥**

ಅಭಂಗದ ಎರಡು ಚರಣ ಶ್ರೀಮಹಾರಾಜರು ಹಾಡಿದರು, ಅವರ ಬೊಗಸೆಯಲ್ಲಿ ಆಗಲೇ ಶ್ರೀರಾಮರಾಯನ ಕೊರಳ ಸುಂದರ ಗುಲಾಬಿ ಪುಷ್ಪಗಳು ಬಂದು ಬಿದ್ದವು.

ಶ್ರೀಮಹಾರಾಜರು ಧನ್ಯರಾದರು. ಅವರು ಸಾಷ್ಟಾಂಗ ನಮಸ್ಕಾರ ಮಾಡಿದರು. ಪ್ರಸಾದವೆಂದು ಆ ಹೂವುಗಳನ್ನು ಎಲ್ಲರಿಗೆ ಹಂಚಿದರು.

ಭಿಕಾಜೀ ಶ್ರೀಪತ ಎಂಬ ಒಬ್ಬ ಫೌಜದಾರರಿದ್ದರು. ಅವರು ಶ್ರೀಮಹಾರಾಜರ ಪರಮ ಭಕ್ತರಾಗಿದ್ದರು. ಅವರ ಬಳಿ ಬತಾಶಾ ಎಂಬ ಸುಂದರ ಬಿಳಿ ಬಣ್ಣದ ಕುದುರೆ ಇತ್ತು. ಭಿಕಾಜಿಯು ಈ ಕುದುರೆಯನ್ನು ಶ್ರದ್ಧೆಯಿಂದ ಶ್ರೀಮಹಾರಾಜರಿಗೆ ಅರ್ಪಿಸಿದರು. ಹಾಗಂತ ಆ ಕುದುರೆ ತುಡುಗ, ತುಂಟವಾಗಿದ್ದು, ಯಾರ ಮಾತು ಕೇಳುತ್ತಿರಲಿಲ್ಲ. ಶ್ರೀಮಹಾರಾಜರು ಅವರ ಬೆನ್ನ ಮೇಲೆ ಪ್ರೇಮದಿಂದ ಕೈಯಾಡಿಸುತ್ತಿದ್ದರು. ಅದರೊಂದಿಗೆ ಪ್ರೇಮದಿಂದ ಮಾತನಾಡುತ್ತಿದ್ದರು. ಮೂಕ ಪ್ರಾಣಿಯಾದರೂ ಅದಕ್ಕೆ ಸ್ವರದ ಮತ್ತು ಸ್ಪರ್ಶದ ಸ್ನೇಹಭಾವ ತಿಳಿಯುತ್ತಿತ್ತು. ಮಹಾರಾಜರು ಬತಾಶನ ಮೇಲೆ ಕುಳಿತು ದೂರದವರೆಗೆ ಹೋಗಿ ಬರುತ್ತಿದ್ದರು. ಕೆಲವು ಸಲ ಇತರ ಕಾರ್ಯದಲ್ಲಿ ವ್ಯಸ್ತವಾಗಿದ್ದಾಗ ನಾಲ್ಕೈದು ದಿನ ಅವರಿಗೆ ಬತಾಶನ ಮೇಲೆ ಸವಾರಿ ಮಾಡಲು ಅವಕಾಶವಾಗದಿದ್ದಾಗ ಅದು ಅಸ್ವಸ್ಥವಾಗಿ ಕೆನೆಯುತ್ತಿತ್ತು. ನಿಂತಲೇ ಕುಣಿಯುತ್ತಿತ್ತು. ಶ್ರೀಮಹಾರಾಜರು ಬಂದು ಅದರ ಸ್ಪರ್ಶ ಮಾಡಿದಾಗ ಅದು ದೇವರ ಹಾಗೆ ಶಾಂತವಾಗುತ್ತಿತ್ತು. ಶಾಹೂರಾವ ಚಿವಟೆ ಎಂಬ ಮಹಾರಾಜರ ಶಿಷ್ಯರಿದ್ದರು. ಅವರಿಗೆ ಹೋಗಿ ಬರಲು ಒಂದು ಒಳ್ಳೆಯ ಕುದುರೆ ಬೇಕಾಗಿತ್ತು. ಅವರು ಮಹಾರಾಜರ ಬಳಿ ಬತಾಶಾವನ್ನು ಕೇಳಿದರು. ಮಹಾರಾಜರು ಹೇಳಿದರು - ಅದು ಬರುವುದಿದ್ದರೆ ಖಂಡಿತ ತೆಗೆದುಕೊಂಡು ಹೋಗಿ. ಕುದುರೆ ಬರಲು ತಯಾರಿರಲಿಲ್ಲ. ಅವರು ಬಲವಂತವಾಗಿ ಕೊಂಡು ಹೋಗಿ ಮನೆಯಲ್ಲಿ ಕಟ್ಟಿದರು. ಆ ಕುದುರೆ ಹುಲ್ಲು ತಿನ್ನಲಿಲ್ಲ. ನೀರೂ ಕುಡಿಯಲಿಲ್ಲ. ಅನ್ನ-ನೀರು ಇಲ್ಲದೆ ಅದು ಮೂರು ದಿನವಿತ್ತು. ಚಿವಟರು ಬಹಳ ಪ್ರಯತ್ನ ಮಾಡಿದರೂ, ಅದು ವ್ಯರ್ಥವಾಯಿತು. ಕುದುರೆಯ ಕಣ್ಣುಗಳಿಂದ ಸತತ ಅಶ್ರು ಹರಿಯುತ್ತಿದ್ದವು. ಕೊನೆಗೆ ಅವರು ಕುದುರೆಯನ್ನು ಮಹಾರಾಜರಿಗೆ ಮರಳಿ ತಂದು ಕೊಟ್ಟರು. ಬತಾಶಾ ಸಾಮಾನ್ಯ ಕುದುರೆ ಆಗಿರಲಿಲ್ಲ. ಅದು ಮಹಾರಾಜರ ಭಕ್ತವಾಗಿತ್ತು. ಪ್ರಾಣಿಗಳು ಭಾವನಾಶೀಲರಾಗಿರುತ್ತವೆ. ಈ ಕುದುರೆಯಂತೆ ಹಸುವಿನ ಪ್ರಸಂಗವಿದೆ - ಗೊಂದವಲೆಯಿಂದ ಹತ್ತು ಗಾವುದದ ಊರಿನಲ್ಲಿ ಓರ್ವ ಶ್ರೀಮಂತ ರೈತ ಕುಟುಂಬವಿತ್ತು. ಒಳ್ಳೆಯ ಹೊಲ ಇತ್ತು. ದನಗಳ ದೊಡ್ಡ ಕೊಟ್ಟಿಗೆ ಇತ್ತು. ಮುಂದೆ ಯಾವುದೋ ಕಾರಣದಿಂದ ಈ ರೈತನ ಪರಿಸ್ಥಿತಿ ಹದಗೆಟ್ಟಿತು. ದನಗಳ ತಿಂಡೀ ಇತ್ಯಾದಿ ಅವನಿಂದ ಸಾಧ್ಯವಾಗಲಿಲ್ಲ. ಅವನು ತಮ್ಮ ದನ-ಕರುಗಳನ್ನು ಮಾರತೊಡಗಿದನು. ಆ ಜಾನುವಾರಿನಲ್ಲಿ ಒಂದು ಕುಂಟ ಹಸು

ಇತ್ತು. ಅದನ್ನು ಯಾರೂ ಪುಕ್ಕಟೆಯೂ ತೆಗೆದುಕೊಳ್ಳುತ್ತಿರಲಿಲ್ಲ. ಆ ರೈತನಿಗೆ ಯಾರೋ ಮಹಾರಾಜರ ಹೆಸರು ಸೂಚಿಸಿದರು. ಅವನು ತನ್ನ ಕುಂಟ ಆಕಳನ್ನು ಗೊಂದವಲೆಗೆ ತಂದು ಮಹಾರಾಜರ ಸ್ವಾಧೀನ ಮಾಡಿದನು. ಶ್ರೀಮಹಾರಾಜರು ತುಂಬು ಪ್ರೇಮದಿಂದ ಅದನ್ನು ಸಾಕಿದರು. ಮುಂದೆ ಎರಡು - ಮೂರು ವರ್ಷಗಳಲ್ಲಿ ರೈತನ ಪರಿಸ್ಥಿತಿ ಸುಧಾರಿಸಿತು. ಅವನು ತನ್ನ ಆಕಳನ್ನು ಹಿಂದಕ್ಕೆ ಪಡೆಯಲು ಗೊಂದವಲೆಗೆ ಬಂದನು. ಅವನು ತನ್ನ ಹಸುವನ್ನು ಬೇಡಿದನು. ತನ್ನನ್ನು ಇಲ್ಲಿಂದ ಕೊಂಡು ಹೋಗಲಾಗುತ್ತದೆ ಎಂದು ಆ ಆಕಳು ತಿಳಿಯಿತು. ಅದು ಗಟ್ಟಿಯಾಗಿ ಅಂಬಾ ಎಂದು ಕೂಗಿತು. ಅದು ಮರಳಿ ಹೋಗದಾಯಿತು. ಕೊನೆಗೆ ಮಹಾರಾಜರು ಆ ರೈತನಿಗೆ ಹೇಳಿದರು - ಜಾನುವಾರುಗಳಿಗೂ ಭಾವನೆ ಇರುತ್ತವೆ. ಅದರ ಮೇಲೆ ಒತ್ತಡ ಹೇರಬಾರದು, ನಾನು ಅದನ್ನು ನನ್ನ ಮಗಳಂತೆ ಕಾಪಾಡುವೆನು. ಅರ್ಥಾತ್ ನಿಮ್ಮ ಅನುಮತಿ ಇದ್ದರೆ, ರೈತನಿಗೆ ಅರ್ಥವಾಯಿತು. ಅವನು ಅನುಮತಿ ಕೊಟ್ಟನು. ಆ ಹಸುವಿನ ಹೆಸರು ಗಂಗೀ ಎಂದಿತ್ತು. ಬತಾಶಾ ಕುದುರೆಯಂತೆಯೇ ಗಂಗಿ ಹಸುವೂ ಶ್ರೀ ಮಹಾರಾಜರ ಭಕ್ತೆಯಾಗಿದ್ದಳು.

ಶ್ರೀಮಹಾರಾಜರಿಗೆ ಭಕ್ತರು ಕಿರಿಯರು - ಹಿರಿಯರು, ಬಡವ-ಮಧ್ಯಮ-ಶ್ರೀಮಂತ, ಪರಿಸ್ಥಿತಿಯವರು ದೂರದ ಅಪರಿಚಿತ ಮತ್ತು ಸಂಬಂಧದಲ್ಲಿನ ಎಲ್ಲ ರೀತಿಯವರಾಗಿದ್ದರು. ಶ್ರೀಮಹಾರಾಜರ ದೂರದ ಸಂಬಂಧದಲ್ಲಿ ಓರ್ವ ವೃದ್ಧ ಚಿಕ್ಕಮ್ಮ ಇದ್ದರು. ಮಹಾರಾಜರ ಬಾಲ್ಯದಿಂದಲೂ ಅವರನ್ನು ಸಾಧು ಎಂದೇ ತಿಳಿಯುತ್ತಿದ್ದರು. ಸತತ ರಾಮನಾಮ ಜಪಿಸುತ್ತಿದ್ದರು. ಅವರ ಪತಿ ಸತ್ತುಹೋಗಿದ್ದರು. ಮುಂದೆ ಗಂಡನು ಆಕೆಗಾಗಿ ಇಟ್ಟಿದ್ದ ಹಣ ಮುಗಿದು ಹೋಗಿತ್ತು. ಅನಂತರ ಆಕೆಯ ಪರಿಸ್ಥಿತಿ ಬಹಳ ಬಿಕಟವಾಯಿತು. ಹಾಗಂತ ಆಕೆಯ ಅವಶ್ಯಕತೆಗಳೂ ಹೆಚ್ಚಿರಲಿಲ್ಲ. ಅವರು ಏಕ ಭುಕ್ತರಾಗಿದ್ದರು. ಶ್ರೀಮಹಾರಾಜರು ಎಲ್ಲರಿಗೂ ನಾಮಸ್ಮರಣೆ ಮಾಡಲು ಹೇಳುತ್ತಿದ್ದರು. ಅವರು ನಾಮಸ್ಮರಣೆಯಲ್ಲಿ ತನ್ಮಯರಾಗುತ್ತಿದ್ದರು. ಒಂದು ಹೊತ್ತು ಊಟ, ಶ್ರೀಮಹಾರಾಜರಿಗೆ ನೈವೇದ್ಯ ತೋರಿಸಿ, ಬಳಿಕವೇ ತುತ್ತು ತೆಗೆದುಕೊಳ್ಳುತ್ತಿದ್ದರು. ಬಡತನದ ಪರಿಸ್ಥಿತಿ ರೊಟ್ಟಿಯ ಮತ್ತು ಬೆಳೆಯ ಹಿಟ್ಟು ಒಟ್ಟಿಗೆ ಮಾಡಿ ಥಾಲಿಪಿಟ್ಟು ಮಾಡುತ್ತಿದ್ದರು. ನೈವೇದ್ಯ ಮಾಡಿ ತಿನ್ನುತ್ತಿದ್ದರು. ಅದಕ್ಕೆ ಒಂದು ತೊಟ್ಟು ಎಣ್ಣೆ ಇರಲಿಲ್ಲ. ಅದು ಗಟ್ಟಿಯಾಗುತ್ತಿತ್ತು. ಅಗೆದು ಅಗೆದು ತಿನ್ನುತ್ತಿದ್ದರು. ಏನು ತಾನೇ ಮಾಡಬಲ್ಲಳು? ಬಹಳ ದಿನ ಮಹಾರಾಜರನ್ನು ಭೆಟ್ಟಿಯಾಗಿರಲಿಲ್ಲ. ಅವರ ದರ್ಶನ ಪಡೆಯಬೇಕು ಎಂಬ ಇಚ್ಛೆ ಇತ್ತು. ಅವರು ಮನೆಯಿಂದ ಹೊರಟಳು, ಸಂಜೆ

ಐದರ ಸುಮಾರಿಗೆ ಗೊಂದವಲೆಗೆ ಬಂದು ಮುಟ್ಟಿದರು. ಆಗ ಮಹಾರಾಜರು ಮಂದಿರದ ಎದುರಿಗೆ ಖುರ್ಚಿ ಇಟ್ಟು, ನರಳುತ್ತಾ ಕೂತಿದ್ದರು. ಚಿಕ್ಕಮ್ಮ ಹತ್ತಿರ ಬಂದು ಕೇಳಿದರು - ಏನಾಗುತ್ತಿದೆ ಮಗು? ಅವರು ಉತ್ತರಿಸಿದರು - ನನ್ನ ಹೊಟ್ಟೆ ನೋಯುತ್ತಿದೆ, ಚಿಕ್ಕಮ್ಮನಿಗೆ ಚಿಂತೆ ಆಯಿತು. ಅವಳು ಕೇಳಿದರು - ಏನು ಮಗು? ಊಟ ತಿಂಡಿಯಲ್ಲಿ ವ್ಯತ್ಯಾಸವಾಯಿತೇ? ಮಹಾರಾಜರು ಹೇಳಿದರು - ಏನು ಹೇಳಲಿ ಚಿಕ್ಕಮ್ಮ? ಪ್ರತಿದಿನ ಮಧ್ಯಾಹ್ನ ಥಾಲಿಪಿಟ್ಟು ತಿಂತೇನೆ, ಅದಕ್ಕೆ ಎಣ್ಣೆ-ತುಪ್ಪದ ತೊಟ್ಟು ಇರುವುದಿಲ್ಲ. ಹೊಟ್ಟೆ ಹೇಗೆ ಜೀರ್ಣಿಸಬಲ್ಲದು? ಚಿಕ್ಕಮ್ಮನ ಕಣ್ಣುಗಳಿಂದ ನೀರು ಹರಿಯತೊಡಗಿತು. ಬಿಕ್ಕಿ-ಬಿಕ್ಕಿ ಹೇಗೋ ಹೇಳಿದರು - ಏನು ಮಾಡಲೀ ಮಗು! ಅವರು ನನ್ನನ್ನ ಒಬ್ಬಳನ್ನೇ ಬಿಟ್ಟು ಹೋದರು. ಅವರು ನನಗಾಗಿ ಹಣ ಇಟ್ಟಿದ್ದರು, ಅದು ಎಷ್ಟು ದಿನ ಬಂದೀತು? ಹಣ ಮುಗಿದರೂ ದೇವರು ನನ್ನನ್ನು ಕೊಂಡು ಹೋಗುವುದಿಲ್ಲ. ದೇಹ ಹೋಗಬೇಕಲ್ಲ! ಸತ್ತವಳಾದ ನನ್ನಿಂದ ಕಷ್ಟ. ಬೊಗಸೆಯಲ್ಲಿ ಮುಖ ಮುಚ್ಚಿ ಅಳತೊಡಗಿದರು. ಮಹಾರಾಜರು ಆಕೆಯನ್ನು ಸಮಜಾಯಿಸಿ, ಆಕೆಯನ್ನು ಕೊನೆಯ ತನಕ ತಮ್ಮ ಬಳಿ ಇರಿಸಿಕೊಂಡರು.

□□

-: ಹತ್ತೊಂಭತ್ತು :-

# ಲೋಕೋದ್ಧಾರಕ ಶ್ರೀಮಹಾರಾಜರು

ಗೊಂದವಲೆಯ ದತ್ತ ಮಂದಿರದಲ್ಲಿ ನಿತ್ಯ ಪೂಜೆಗಾಗಿ ಬಾಳಂಭಟ ಎಂಬ ಪೂಜಾರಿ ಇದ್ದರು. ಈ ಬಾಳಂಭಟ್ಟರು ಔಂಧದ ಮೂಲದವರು, ಇವರ ತಂದೆ ರಾಜಭಟ ಜೋಶಿಯವರು. ಈ ಬಾಳಂಭಟ್ಟರಿಗೆ ವೇದ ಕಲಿಸಿದರು. ಪೌರೋಹಿತ್ಯ ಕಲಿಸಿದರು. ಇವರ ದೇಹ ದಷ್ಟಪುಷ್ಟವಾಗಿದ್ದು, ಆಹಾರವೂ ಸಾಕಷ್ಟಿತ್ತು. ಬಾಳಂಭಟ್ಟರು ಒಳ್ಳೆಯ ಸ್ವಭಾವದವರು, ನಿಜ ನುಡಿಯುವವರು, ಮನಸ್ಸಿನಿಂದ ಉದಾರರಾಗಿದ್ದರು. ಹೇಗೋ ಏನೋ ಅವರಿಗೆ ಗಾಂಜಾದ ವ್ಯಸನ ಹತ್ತಿತು. ಗಾಂಜಾ ಇಲ್ಲದೆ ಅವರಿಗೆ ನೆಮ್ಮದಿ ಇರಲಿಲ್ಲ. ಅದರಿಂದ ಮೂಲತಃ ಉದಾರ, ಸತ್ಯವಾದಿಯಾಗಿದ್ದರೂ ಅಲ್ಪ ಮಾತಿಗೂ ಸಿಟ್ಟು ಮಾಡಿಕೊಳ್ಳುತ್ತಿದ್ದರು. ಅವರಲ್ಲಿ ಒಂದು ವಿಚಿತ್ರ ಸ್ವಚ್ಛಂದತೆ ಬಂತು. ಒಮ್ಮೆ ಬಾಳಂಭಟ್ಟರ ಮತ್ತು ಮಹಾರಾಜರ ಭೆಟ್ಟಿಯಾಯಿತು. ಮಹಾರಾಜರು ಅವರಿಗೆ ಕೈ ಮುಗಿದು ನಮಸ್ಕರಿಸಿದರು ಮತ್ತು ಹೇಳಿದರು – ನನಗೆ ವೈದಿಕ ಬ್ರಾಹ್ಮಣರು ಪೂಜನೀಯರೆನಿಸುತ್ತಾರೆ. ನೀವು ನಾಮಸ್ಮರಣೆ ಮಾಡಬೇಕೆಂದು ನನಗೆ ಅನಿಸುತ್ತದೆ. ನಾಮಸ್ಮರಣೆಯಿಂದ ನಿಮ್ಮ ಜನ್ಮದ ಕಲ್ಯಾಣವಾಗುವುದು. ಬಾಳಂಭಟ್ಟರ ಸ್ವಭಾವ ವಿಚಿತ್ರವಾಗಿದ್ದರೂ ಸತ್ಯವಚನೀ ಜಾಗ್ರತವಾಗಿತ್ತು. ಅವರು ಹೇಳಿದರು – ಮಹಾರಾಜ! ನಾನು ಸುಳ್ಳು ಹೇಳುವುದಿಲ್ಲ. ಮುಂದೆಯೂ ಸುಳ್ಳಾಡೆನು. ನನಗೆ ಗಾಂಜಾ ಸೇದುವ ವ್ಯಸನವಿದೆ. ಗಾಂಜಾ ಇಲ್ಲದಿದ್ದರೆ ನಾನು ಅಸ್ವಸ್ಥನಾಗುತ್ತೇನೆ. ನೀವು ನನಗೆ ಗಾಂಜಾ ಪೂರೈಸಿದರೆ ನಾನು ನಾಮಸ್ಮರಣ ಮಾಡುವೆನು. ಶ್ರೀಮಹಾರಾಜರೊಂದಿಗೆ ಇದ್ದವರೆಲ್ಲ ಆಶ್ಚರ್ಯಚಕಿತರಾದರು. ಮಹಾರಾಜರು ಹೇಳಿದರು – ಸ್ಪಷ್ಟವಾಗಿ ಹೇಳಿದಿರಿ, ನನಗೆ ಮೆಚ್ಚಿಕೆಯಾಯಿತು. ನಾನು ಸ್ವತಃ ನಿಮಗೆ ಗಾಂಜಾ ಸಿಗುವಂತೆ ವ್ಯವಸ್ಥೆ ಮಾಡುವೆನು. ಬಾಳಂಭಟ್ಟರು ಮಹಾರಾಜರೊಂದಿಗೆ ಗೊಂದವಲೆಗೆ ಬಂದರು. ಶ್ರೀಮಹಾರಾಜರು ಅವರಿಗೆ ನಿತ್ಯ ರಾಮನಾಮ ಜಪ ವಹಿಸಿ ಕೊಟ್ಟರು ಮತ್ತು ಅವರಿಗೆ

ಬೇಕಾದ ನಿತ್ಯದ ಗಾಂಜಾ ವ್ಯವಸ್ಥೆಯನ್ನೂ ಮಾಡಿದರು. ಬಾಳಂಭಟ್ಟರ ನಾಮಸ್ಮರಣೆ ವ್ಯವಸ್ಥಿತವಾಗಿ ಶುರು ಆಯಿತು. ನಿಧಾನವಾಗಿ ಅವರಿಗೆ ಮಹಾರಾಜರ ಆಧ್ಯಾತ್ಮದ ಅಧಿಕಾರವೂ ತಿಳಿಯಿತು. ಎಲ್ಲ ಸರಿಯಾಗಿ ನಡೆಯುತ್ತಿತ್ತು. ಒಂದು ದಿನ ಬಾಳಂಭಟ್ಟರಿಗೆ ನಿಶ್ಚಯದಂತೆ ಗಾಂಜಾ ಸಿಗಲಿಲ್ಲ. ವ್ಯಸನಾಧೀನ ಬಾಳಂಭಟ್ಟರ ಅಸ್ವಸ್ಥತೆ ಶುರು ಆಯಿತು. ಅವರಿಗೆ ವಿಲಕ್ಷಣ ಸಿಟ್ಟು ಬಂತು. ಅವರು ಅವಸರವಸರದಿಂದ ಶ್ರೀಮಹಾರಾಜರನ್ನು ಕೇಳಲು ಬಂದರು. ಶ್ರೀಮಹಾರಾಜರ ಬಳಿ ಆಗ ಅನೇಕ ಭಕ್ತರು ಬಂದಿದ್ದರು. ತಮ್ಮ ಸುಖ-ದುಃಖಗಳನ್ನು ಹೇಳುತ್ತಿದ್ದರು. ಮಹಾರಾಜರು ಅವರ ಸಮಸ್ಯೆ ತಿಳಿದುಕೊಂಡು, ಅವರಿಗೆ ಸಾಧ್ಯವಾಗುವ ಆದರೆ ನಿಶ್ಚಿತ ಉಪಾಯ ಹೇಳುತ್ತಿದ್ದರು. ಆದರೆ ಅವರು ಪ್ರತಿಯೊಬ್ಬನಿಗೂ ರಾಮನಾಮ ಹೇಳಲು ಒತ್ತಾಯಿಸುತ್ತಿದ್ದರು. ರಾಮನಾಮದ ಮಹಿಮೆ ಹೇಳುತ್ತಿದ್ದರು. ಬಹಳ ಹೊತ್ತು ಬಾಳಂಭಟ್ಟರು ಆ ಸಂವಾದವನ್ನು ಕೇಳುತ್ತಿದ್ದರು. ತಾನು ಗಾಂಜಾ ಕುರಿತು ಉತ್ತರ ಕೇಳಲು ಬಂದಿದ್ದೆ. ಇದೇ ಮರೆತು ಹೋಯಿತು. ಸ್ವಲ್ಪ ಹೊತ್ತಿನಲ್ಲಿ ಶ್ರೀಮಹಾರಾಜರ ಗಮನ ಬಾಳಂಭಟ್ಟರ ಕಡೆಗೆ ಹರಿಯಿತು. ಅವರಿಗೆ ಒಮ್ಮೆಗೆ ನೆನಪಾಯಿತು. ಅವರು ತಟ್ಟನೆ ಎದ್ದು ಮಹಾರಾಜರು ಹೇಳಿದರು - ಸಿಟ್ಟಾಗಬೇಡಿ, ಇಂದು ಗಡಿಬಿಡಿಯಲ್ಲಿ ಗಾಂಜಾ ತರುವುದು ಉಳಿದೇ ಹೋಯಿತು. ಹೀಗೆ ಹೋಗಿ ಕೂಡಲೆ ತರುವೆನು. ಅವರು ಸ್ವತಃ ಗಾಂಜಾ ತರಲು ಹೊರಟಿದ್ದಾರೆ. ಆಧ್ಯಾತ್ಮಿಕ ಕ್ಷೇತ್ರದ ಇಷ್ಟು ದೊಡ್ಡ ಸಿದ್ಧ ಪುರುಷ ನನ್ನಂತಹ ಪಾಪಿಯ ಗಾಂಜಾ ಖರೀದಿಸಿ ತರಲು ಹೊರಟಿರುವರಲ್ಲ! ಈ ವಿಚಾರದಿಂದ ಬಾಳಂಭಟ್ಟರು ಭಾವಾವಿಷ್ಟರಾದರು. ಓಡಿ ಹೋಗಿ ಅವರು ಮಹಾರಾಜರ ಚರಣಗಳನ್ನು ಗಟ್ಟಿಯಾಗಿ ಹಿಡಿದರು. ಮಹಾರಾಜ! ನನ್ನನ್ನು ಕ್ಷಮಿಸಿರಿ. ನನಗಾಗಿ ನೀವು ಗಾಂಜಾ ತರಲು ಹೋಗಬೇಡಿ. ನನ್ನನ್ನು ಈ ವ್ಯಸನದಿಂದ ಮುಕ್ತಗೊಳಿಸಿರಿ. ಬಾಳಂಭಟ್ಟರು ಕಣ್ಣೀರಗರೆಯುತ್ತಾ ಪದೇ-ಪದೇ ವಿನಂತಿಸತೊಡಗಿದರು. ಮಹಾರಾಜರು ಅವರನ್ನು ಎಬ್ಬಿಸಿ, ಪ್ರೇಮದಿಂದ ಆಲಿಂಗಿಸಿಕೊಂಡು ಹೇಳಿದರು. ಪ್ರಭು ರಾಮಚಂದ್ರ ಸಮರ್ಥನಾಗಿದ್ದಾನೆ. ಅವನ ಚರಣದಲ್ಲಿ ಈ ಕ್ಷಣದಿಂದ ನಾನು ಗಾಂಜಾ ಸ್ಪರ್ಶಿಸುವುದಿಲ್ಲ ಎಂದು ಆಣೆ ಮಾಡಿರಿ. ಅವನು ನಿಮ್ಮ ಪ್ರಾರ್ಥನೆ ನಡೆಸುತ್ತಾನೆ. ಅವನು ಪರಮೋದಾರನಾಗಿದ್ದಾನೆ. ಬಾಳಂಭಟ್ಟರು ಸಂಶಯದಿಂದ ಕೇಳಿದರು - ಶ್ರೀಮಹಾರಾಜರೆ! ಇಂದಿನವರೆಗೆ ಇಷ್ಟು ದಿನ ಗಾಂಜಾ ಸೇದಿದೆ. ನಾನು ಮಹಾ ಪಾಪಿಯಾಗಿದ್ದೇನೆ. ನನ್ನ ಪ್ರಾರ್ಥನೆ ಅವನು ಕೇಳಿಯಾನೆ? ಮಹಾರಾಜರು ಹೇಳಿದರು - ಅವನು ಪತಿತ ಪಾವನ ರಾಮನಾಗಿದ್ದಾನೆ. ಹಿಂದಿನ ಪಾಪಗಳ ಭಾರ ನೀವು ನನ್ನ ಮೇಲೆ ಬಿಡಿ, ಇಲ್ಲಿಂದ ಮುಂದಿನ ಮಾತು ಆ ದಯಾಸಾಗರನಿಗೆ ಬಿಡಿ,

ಅವನು ನಿಮ್ಮ ಉದ್ಧಾರ ಮಾಡುವನು. ಬಾಳಂಭಟ್ಟರು ಶ್ರೀರಾಮ ಚರಣದಲ್ಲಿ ಮಸ್ತಕವನ್ನಿಟ್ಟು ಗಾಂಜಾ ಬಿಟ್ಟ ಪ್ರತಿಜ್ಞೆ ಮಾಡಿದರು. ಆ ದಿನದಿಂದ ಅವರ ಗಾಂಜಾ ಬಿಟ್ಟುಹೋಯಿತು. ಅವರು ವ್ಯಸನ ಮುಕ್ತರಾದರು.

ಮುನ್ಸಿಫರು ಅಂದರೆ ಕೆಳಗಿನ ಸಿವಿಲ್ ಕೋರ್ಟಿನ ನ್ಯಾಯಾಧೀಶರು. ಮುನ್ಸಿಫರೆಂದು ಬಾಪೂ ಸಾಹೇಬ ಸಾತೇ ಹೆಸರಿನ ಗೃಹಸ್ಥರ ದಹೀವಡಿಗೆ ಬದಲಿಯಾಯಿತು. ಈ ಬಾಪೂ ಸಾಹೇಬರಿಗೆ ಹೊಟ್ಟೆನೋವಿನ ವಿಕಾರವಿತ್ತು. ಅವರು ಅನೇಕ ಔಷಧ ಮಾಡಿದರು. ಅನೇಕ ರೀತಿಯ ಉಪಚಾರ ಮಾಡಿ ನೋಡಿದರು. ಆದರೆ ಅವರ ಹೊಟ್ಟೆನೋವು ಹೋಗಲಿಲ್ಲ. ಕೊನೆಗೆ ಅವರು ಔಷಧಿ ನಿಲ್ಲಿಸಿ ಊಟ ತಿಂಡಿಯಲ್ಲಿ ಪಥ್ಯ ಮತ್ತು ನಿತ್ಯ ನಡೆಯುವ ವ್ಯಾಯಾಮದಲ್ಲಿ ತೊಡಗಿದರು. ಒಂದು ಶನಿವಾರ ಮಧ್ಯಾಹ್ನ ಎರಡು ಗಂಟೆಗೆ ಕೋರ್ಟ್ ಕೆಲಸ ಮುಗಿಯಿತು. ಬಾಪೂ ಸಾಹೇಬ ಮನೆಗೆ ಬಂದರು. ಸ್ವಲ್ಪ ವಿಶ್ರಾಂತಿ ಪಡೆದು ಸಂಜೆ ನಾಲ್ಕೂವರೆಗೆ ತಿರುಗಾಡಲು ಹೊರಟರು. ದಹಿವಡಿಯ ಇಬ್ಬರು ವಕೀಲರು ಅವರಿಗೆ ಭೆಟ್ಟಿಯಾದರು. ಅವರು ಗೊಂದವಲೆಗೆ ಹೊರಟಿದ್ದರು. ವಕೀಲರು ಬಾಪೂ ಸಾಹೇಬರಿಗೆ ಶ್ರೀಮಹಾರಾಜರ ಕುರಿತಾದ ವಿವರ ಹೇಳಿ, ದರ್ಶನಕ್ಕೆ ಬರಲು ಆಗ್ರಹಿಸಿದರು. ಬಾಪೂ ಸಾಹೇಬರು ಅವರೊಡನೆ ಹೊರಟರು. ಇತ್ತ ಶ್ರೀ ಮಹಾರಾಜ ಮತ್ತು ಕೆಲವು ಭಕ್ತಮಂಡಳಿ ಪರ ಊರಿಗೆ ಹೋಗುವ ಸಿದ್ಧತೆಯಲ್ಲಿದ್ದರು. ಎತ್ತಿನ ಬಂಡಿಗಳಲ್ಲಿ ಸಾಮಾನು ಇರಿಸಿ ಮಂಡಳಿ ತಯಾರಾಗಿತ್ತು. ಅಷ್ಟರಲ್ಲಿ ಮಹಾರಾಜರು ಹೇಳಿದರು – ದಹಿವಡಿಯಿಂದ ಕೆಲವು ನೆಂಟರು ಬರುತ್ತಿದ್ದಾರೆ. ಸ್ವಲ್ಪ ಇರುವಾ. ಸಾಧಾರಣ ಐದೂವರೆ ಹೊತ್ತಿಗೆ ಇಬ್ಬರು ವಕೀಲರು ಮತ್ತು ಬಾಪೂ ಸಾಹೇಬರು ಶ್ರೀಮಹಾರಾಜರ ದರ್ಶನಕ್ಕಾಗಿ ಬಂದು ಮುಟ್ಟಿದರು. ಆ ವಕೀಲರು ಶ್ರೀಮಹಾರಾಜರಿಗೆ ಬಾಪೂ ಸಾಹೇಬರ ಪರಿಚಯ ಮಾಡಿಕೊಟ್ಟರು. ಮಹಾರಾಜರು ಅವರ ಕುರಿತು ತುಂಬಾ ಆದರ ಪ್ರಕಟಿಸಿದರು. ಅವರಿಗೆ ಪ್ರಸಾದ ಕೊಡಲು ಹೇಳಿದರು. ದೊನ್ನೆಗಳಲ್ಲಿ ಸಬ್ಬಕ್ಕಿಯ ಖಿಚಡೀ ಬಂತು. ಬಾಪೂ ಸಾಹೇಬರು ಮೊದಲ ಚಮಚ ತಿಂದರು, ಮೊದಲನೇ ತುತ್ತು ಕೊನೆಯದಾಯಿತು. ಅವರ ನಾಲಿಗೆ ಸೆಟೆದುಕೊಂಡಿತು. ಅವರಿಗೆ ಆ ಖಿಚಡೀ ತುಂಬಾ ಖಾರವಾಯಿತು. ಅವರು ಕೂಡಲೇ ಅವರಿಗೆ ಸಕ್ಕರೆ ತಂದು ಕೊಟ್ಟರು. ಈ ಪ್ರಸಂಗದ ನಂತರ ಆರು ತಿಂಗಳಲ್ಲಿ ದಾಸ ನವಮಿಗಾಗಿ ಮಹಾರಾಜರು ದಹಿವಡಿಗೆ ಬಂದರು. ಉತ್ಸವ ಚೆನ್ನಾಗಿ ಆಯಿತು. ಊರಿನ ಎಲ್ಲರಿಗೆ ಭೋಜನ ಪ್ರಸಾದದ ನಿಮಂತ್ರವಿತ್ತು. ಇಡೀ ಊರು ಪ್ರಸಾದಕ್ಕೆ ಬಂತು. ಸಂಜೆ ನಾಲ್ಕು ಗಂಟೆಯಾಯಿತು, ಎಲ್ಲರ ಊಟವಾಯಿತು. ಈಗ ವ್ಯವಸ್ಥೆ ನೋಡುವರ ಕೊನೆಯ ಪಂಕ್ತಿ. ಈ ಪಂಕ್ತಿಯಲ್ಲೇ

ಮಹಾರಾಜರು ಕುಳಿತುಕೊಳ್ಳುವವರಿದ್ದರು. ಅವರು ಬಾಪೂ ಸಾಹೇಬರ ಕುರಿತು ವಿಚಾರಿಸಿದರು. ಅವರು ಅವರನ್ನು ರಾವಸಾಹೇಬ ಎಂದು ಹೇಳುತ್ತಿದ್ದರು. ಅವರು ಬಂದಿರಲಿಲ್ಲ. ಕೋರ್ಟಿನ ಕಾರ್ಯ ಮುಗಿಸಿ ಬಾಪೂ ಸಾಹೇಬರು ತಮ್ಮ ಕೋಣೆಯಲ್ಲಿ ಕುಳಿತಿದ್ದರು. ಹೊಟ್ಟೆ ನೋವಿನ ವ್ಯಾಧಿ ಮತ್ತು ಆ ಪ್ರಸಾದದ ಖಿಚಡಿಯ ಅನುಭವ ಇದರಿಂದಾಗಿ ಅವರು ಪ್ರಸಾದ ಭೋಜನಕ್ಕಾಗಿ ಹೋಗಿರಲಿಲ್ಲ. ಸ್ವಯಂ ಶ್ರೀಮಹಾರಾಜರು ಅವರ ಮುಂದೆ ಬಂದು ನಿಂತರು. ಅವರು ಹೇಳಿದರು - ರಾವಸಾಹೇಬ ! ನೀವು ಪ್ರಸಾದಕ್ಕೆ ಬಂದಿಲ್ಲ. ಕೊನೆಯ ಪಂಕ್ತಿ ಕೂತಿದೆ, ಜನರು ನಿಮ್ಮ ದಾರಿ ನೋಡುತ್ತಿದ್ದಾರೆ. ನೀವು ನಮ್ಮೊಂದಿಗೆ ಬರಬೇಕು. ಗೊಂದವಲೆ ದಹಿವಡಿ ಇಡೀ ಪಂಚಕ್ರೋಶಿಯಲ್ಲಿ ಶ್ರೀ ಮಹಾರಾಜರನ್ನು ಸತ್ಪುರುಷರು, ಸಾಧೂ ಎಂದು ಗೌರವಿಸುತ್ತಿದ್ದರು. ಅವರ ಮಾತನ್ನು ಬಾಪೂ ಸಾಹೇಬರಿಗೆ ಮೀರಲಾಗಲಿಲ್ಲ. ಅವರು ಅವರೊಂದಿಗೆ ಪ್ರಸಾದಕ್ಕೆ ಹೋದರು. ಮುಂದೆ ಕೆಲವು ದಿನ ಕಳೆದವು. ಬಾಪೂ ಸಾಹೇಬರ ಹೊಟ್ಟೆ ನೋವು ಹೆಚ್ಚಾಗುತ್ತಲೇ ಹೋಯಿತು. ಆ ವೇದನೆ ಅವರಿಂದ ಸಹಿಸದಾಯಿತು. ಕೊನೆಗೆ ಅವರು ಗೊಂದವಲೆಯ ಅಪ್ಪಾ ಸಾಹೇಬ ಭಡಗಾಂವಕರ್ ಅವರನ್ನು ಹೇಳಿ ಕಳಿಸಿದರು. ಅಪ್ಪಾ ಸಾಹೇಬರಿಗೆ ಹೋಮಿಯೋಪತಿ ಔಷಧ ಮತ್ತು ಉಪಚಾರದ ವಿಷಯದಲ್ಲಿ ಸಾಕಷ್ಟು ಜ್ಞಾನವಿತ್ತು. ಅಪ್ಪಾ ಸಾಹೇಬರು ದಹಿವಡಿಗೆ ಹೊರಡುವ ತಯಾರಿ ಮಾಡಿದರು. ಶ್ರೀ ಮಹಾರಾಜರಿಗೆ ಈ ವಾರ್ತೆ ತಿಳಿದಾಗ ಅವರೊಡನೆ ಹೋಗಲು ನಿಶ್ಚಯಿಸಿದರು. ಇನ್ನೂ ನಾಲ್ಕಾರು ಜನರೊಂದಿಗೆ ಅವರು ದಹಿವಡಿಗೆ ಬಂದರು. ಅಪ್ಪಾ ಸಾಹೇಬರು ಬಾಪೂ ಸಾಹೇಬರ ಹೊಟ್ಟೆ ಪರೀಕ್ಷಿಸಿದರು. ಅವರಿಗೆ ಹೋಮಿಯೋಪತಿಯ ಗುಳಿಗೆ ಕೊಟ್ಟರು. ಆದರೆ ಅವರ ಹೊಟ್ಟೆನೋವು ನಿಂತಿಲ್ಲ. ಉಪಚಾರ ನಡೆದೇ ಇದ್ದವು. ಮರುದಿನ ಬಾಪೂ ಸಾಹೇಬರು ಮಹಾರಾಜರನ್ನು ಮತ್ತು ಅಪ್ಪಾ ಸಾಹೇಬರನ್ನು ತಮ್ಮ ಮನೆಗೆ ಊಟಕ್ಕೆ ಕರೆದರು. ಬಾಜರಿಯ ರೊಟ್ಟಿ ಮತ್ತು ಝುಣಕಾ ಹೀಗೆ ಮಹಾರಾಜರಿಗೆ ಇಷ್ಟವಾದ ಅಡಿಗೆ ಇತ್ತು. ಶ್ರೀರಾಮನಿಗೆ ನೈವೇದ್ಯ ಮಾಡಿ ಊಟ ಪ್ರಾರಂಭವಾಯಿತು. ಬಾಯಲ್ಲಿ ತುತ್ತು ಇಡುವ ಮೊದಲು ಶ್ರೀ ಮಹಾರಾಜರು ರೊಟ್ಟಿಯ ತುಂಡು ಮತ್ತು ಝುಣಕಾದಲ್ಲಿ ಅದ್ದಿ ಅಪ್ಪಾ ಸಾಹೇಬರ ಕೈಗೆ ಕೊಟ್ಟರು ಹಾಗೂ ಮಹಾರಾಜರು ಹೇಳಿದರು - ನೈವೇದ್ಯವಾಗಿದೆ, ಬಾಪೂ ಸಾಹೇಬರಿಗೆ ತಿನ್ನಲು ಕೊಡಿ. ಅವರ ಒತ್ತಾಯಕ್ಕೆ ಬಾಪೂ ಸಾಹೇಬರು ಆ ನೈವೇದ್ಯ ತಿಂದರು. ಅಂದಿನಿಂದ ಅವರ ಹೊಟ್ಟೆನೋವು ಎಂದೆಂದಿಗೂ ನಿಂತುಹೋಯಿತು.

ಮಾನವ ಜೀವನದಲ್ಲಿ ಶ್ರದ್ಧೆಗೆ ಅನನ್ಯ ಸಾಧಾರಣ ಮಹತ್ವವಿದೆ. ಈ ಶ್ರದ್ಧೆಯು ಮನಸ್ಸನ್ನು ಸ್ಥಿರ ಮಾಡುತ್ತವೆ. ಆದರೆ ಮನುಷ್ಯನ ಮನಸ್ಸಿನಲ್ಲಿ ಭಯ ಇರುತ್ತದೆ. ಮತ್ತು ಆ ಭಯದಿಂದ ಯಾರ ಮೇಲೂ ವಿಶ್ವಾಸ ಇರುವುದಿಲ್ಲ. ಮತ್ತೆ ಶ್ರದ್ಧೆಯು ಬಹಳ ದೂರ ಇರುತ್ತದೆ. ಒಮ್ಮೆ ಕರ್ನಾಟಕದ ಎಂಟತ್ತು ಜನರು ಶ್ರೀಮಹಾರಾಜರ ದರ್ಶನಕ್ಕಾಗಿ ಗೊಂದವಲೆಗೆ ಬಂದರು. ಶ್ರೀ ಮಹಾರಾಜರು ತುಂಬಾ ಪ್ರೇಮದಿಂದ ಇರಲು ಆಗ್ರಹಿಸಿದರು. ಆ ಜನರೂ ಹದಿನೈದು ದಿನ ಗೊಂದವಲೆಯಲ್ಲಿ ಉಳಿದರು. ಹದಿನೈದು ದಿನಗಳ ಬಳಿಕ ಶ್ರೀ ಮಹಾರಾಜರನ್ನು ಬೀಳ್ಕೊಳ್ಳಲು ಬಂದರು. ಮಹಾರಾಜರು ಹೇಳಿದರು – ಝುಣಕಾ ಅನ್ನ ತಿಂದು ಹೋಗಿ, ಜನರು ಅಡಿಗೆ ಆಗುವವರೆಗೆ ನಿಂತರು. ಹರಿಪಂತ ಮಾಸ್ತರರು ಶ್ರೀಮಹಾರಾಜರ ಹಾಸಿಗೆ ಸರಿ ಮಾಡತೊಡಗಿದರು. ಚಾದರ ತೆಗೆದು ಒಗೆಯಲು ಹಾಕಿದರು. ಹಾಸಿಗೆ ಸುತ್ತಿದರು. ಹಾಸಿಗೆಯ ಕೆಳಗಿದ್ದ ಜಮಖಾನೆ ತೆಗೆದು ಕೊಡವಿ ಸ್ವಚ್ಛ ಮಾಡಿದರು. ಮಂಚ ಸ್ವಚ್ಛ ಒರೆಸಿದರು. ಪುನಃ ಮಂಚದಲ್ಲಿ ಹಾಸಿಗೆ ಹಾಸಿ, ಹೊಸ ಚಾದರ ಹಾಕಿದರು. ಶ್ರೀಮಹಾರಾಜರು ಕೈ-ಕಾಲು ತೊಳೆದು ಶ್ರೀರಾಮನ ದರ್ಶನ ಮಾಡಿ ಶ್ರೀಮಹಾರಾಜರು ತಮ್ಮ ಸಿಂಹಾಸನದಲ್ಲಿ ಬಂದು ಕುಳಿತರು. ಕರ್ನಾಟಕದ ಮಂದಿ ಝುಣಕಾ-ಅನ್ನ ತಿಂದು, ಶ್ರೀ ಮಹಾರಾಜರ ದರ್ಶನಕ್ಕಾಗಿ ಬಂದರು. ಎಲ್ಲರೂ ಅವರ ಚರಣಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕಾರ ಮಾಡಿದರು. ಶ್ರೀಮಹಾರಾಜರು ಹರಿಪಂತರಿಗೆ ಹೇಳಿದರು – ಆಗ ನಾನು ಹಾಸಿಗೆಯ ಕೆಳಗೆ ಕೆಲವು ರೂಪಾಯಿ ಇಟ್ಟಿರುವೆನು. ಅದನ್ನು ತೆಗೆದುಕೊಂಡು ಬನ್ನಿ. ಹರಿಪಂತರು ಹೇಳಿದರು – ಮಹಾರಾಜ ! ಈಗಲೇ ನಾನು ನಿಮ್ಮ ಹಾಸಿಗೆ, ಹೊದಿಕೆ ಬದಲಾಯಿಸಿ ಇಟ್ಟಿದ್ದೇನೆ. ಹಾಸಿಗೆ ಅಡಿಯಲ್ಲಿ ಹಣ ಇರಲಿಲ್ಲ. ಶ್ರೀ ಮಹಾರಾಜರು ಹರಿಪಂತರಿಗೆ ಹೇಳಿದರು – ಮಾಸ್ತರರೇ ! ನನ್ನದು ಕೇಳಿ, ಸುಮ್ಮನೆ ಶಂಕೆ ಮತ್ತು ತರ್ಕ ಬೇಡ. ಹಾಸಿಗೆ ಅಡಿಯಲ್ಲಿ ಏನು ಸಿಗುವುದೋ ಅದನ್ನು ತನ್ನಿರಿ. ಹರಿಪಂತರು ನಿರುಪಾಯರಾಗಿ ಮಂಚದ ಕಡೆಗೆ ಬಂದರು. ಅವರಿಗೆ ಹಾಸಿಗೆ ಅಡಿಯಲ್ಲಿ ಆರು ಬೆಳ್ಳಿ ರೂಪಾಯಿ ಮತ್ತು ನಾಲ್ಕು ಖಣ ಸಿಕ್ಕಿತು. ಶ್ರೀಮಹಾರಾಜರ ಸಾಮರ್ಥ್ಯ ಕಂಡು ಅವರು ಅವಕ್ಕಾದರು. ಹೋಗುವವರಲ್ಲಿ ನಾಲ್ಕು ಸ್ತ್ರೀಯರು ಮತ್ತು ಆರು ಪುರುಷರಿದ್ದರು. ಶ್ರೀಮಹಾರಾಜರು ಪ್ರತಿಯೊಬ್ಬ ಪುರುಷರಿಗೆ ಒಂದೊಂದು ರೂಪಾಯಿ ಮತ್ತು ಪ್ರತಿಯೊಬ್ಬ ಸ್ತ್ರೀಯರಿಗೆ ಒಂದೊಂದು ಖಣ ಕೊಟ್ಟರು. ಮಂಡಳಿ ಭಾವಾವಿಷ್ಟರಾದರು. ಭಾರವಾದ ಅಂತಃಕರಣದಿಂದ ಅವರು ಶ್ರೀಮಹಾರಾಜರನ್ನು ಬೀಳ್ಕೊಂಡರು. ❐❐

-: ಇಪ್ಪತ್ತು :-

# ಭಕ್ತವತ್ಸಲ ಶ್ರೀಮಹಾರಾಜರು

ಶಂಕರಶಾಸ್ತ್ರೀ ಮ್ಹಾಸುರ್ಣೇಕರ್ ಇವರು ಪುರಾಣ ತುಂಬಾ ಚಂದವಾಗಿ ಹೇಳುತ್ತಿದ್ದರು. ಕಾವ್ಯಶಾಸ್ತ್ರ, ನಾಟ್ಯಶಾಸ್ತ್ರ ತಿಳಿದ ಶಂಕರ ಶಾಸ್ತ್ರಿಗಳು ಭಾವಿಕ ಮತ್ತು ಸಾತ್ವಿಕರಾಗಿದ್ದರು. ಮ್ಹಾಸುರ್ಣೆಯಲ್ಲಿ ಶ್ರೀರಾಮ ಮಂದಿರದ ಬಳಿಯೇ ಅವರ ಮಠ ಇತ್ತು. ಅವರಿಗೆ ಮಹಾರಾಜರ ಮೇಲೆ ಅಪಾರ ನಿಷ್ಠೆ ಇತ್ತು. ಶ್ರೀಮಹಾರಾಜರು ಅವರ ಮೇಲೆ ಸ್ನೇಹವಿಟ್ಟಿದ್ದರು. ಅವರು ಶಂಕರ ಶಾಸ್ತ್ರಿಗಳಿಗೆ ಅನುಗ್ರಹ ಕೊಡುವ ಅಧಿಕಾರ ಕೊಟ್ಟಿದ್ದರು. ಶಂಕರ ಶಾಸ್ತ್ರಿಗಳು ಶ್ರೀಮಹಾರಾಜರ ನಿಜ ಅರ್ಥದಲ್ಲಿ ಶಿಷ್ಯರಾಗಿದ್ದರು. ಅವರ ಕಡೆ ಯಾರಾದರು ಅನುಗ್ರಹಕ್ಕಾಗಿ ಬಂದರೆ ಅವರು ಆ ಭಕ್ತನನ್ನು ಶ್ರೀಮಹಾರಾಜರ ಕಡೆಗೆ ಕಳಿಸಿ ಕೊಡುತ್ತಿದ್ದರು. ಒಮ್ಮೆ ನಿತ್ಯ ಕ್ರಮಾನುಸಾರ ಶಾಸ್ತ್ರಿಗಳು ನಾಮಸ್ಮರಣೆ ಮಾಡುತ್ತಾ ಕುಳಿತಿದ್ದರು. ನಾಮಸ್ಮರಣೆ ಮಾಡುತ್ತಾ - ಮಾಡುತ್ತಾ ಅವರಿಗೆ ಮಹಾರಾಜರ ಸ್ಮರಣವಾಯಿತು. ಇವರಿಂದಲೇ ನಾನು ಈ ಪವಿತ್ರ ಮಾರ್ಗಕ್ಕೆ ಬಂದೆ. ಇಂದು ನನ್ನ ಮೇಲೆ ಗುರುಗಳ ಎಷ್ಟು ಋಣವಿದೆ! ವಿಚಾರ ಮಾಡುತ್ತಾ - ಮಾಡುತ್ತಾ ಅವರ ಕಣ್ಣುಗಳಿಂದ ಅಶ್ರು ಹರಿಯತೊಡಗಿದವು. ಶ್ರೀಮಹಾರಾಜರನ್ನು ಸ್ತುತಿಸಬೇಕೆಂದು ಅವರಿಗೆ ಇಚ್ಛೆಯಾಯಿತು. ಕಾವ್ಯಶಾಸ್ತ್ರದ ಅಭ್ಯಾಸವಿತ್ತು. ಆದರೂ ಕಾವ್ಯ ಪ್ರತಿಭೆ ಜಾಗ್ರತವಾಗಲಿಲ್ಲ. ಸ್ತುತಿಪರ ಕಾವ್ಯ ಆಗಲಿಲ್ಲ. ಶಾಸ್ತ್ರಿಗಳು ನಿರಾಶರಾದರು. ರಾತ್ರೆ ನಿತ್ಯದಂತೆ ಭಜನೆ, ಆರತಿ ಹಾಡಿ ಮಲಗಿದರು.

ರಾತ್ರೆ ಅವರ ಸ್ವಪ್ನದಲ್ಲಿ ಸಿಂಹಾಸನಾರೂಢ ಶ್ರೀಮಹಾರಾಜರು ಬಂದರು. ಶಾಸ್ತ್ರಿಗಳು ಅವರ ಮನೋಭಾವೆ ಪೂಜೆ ಮಾಡಿದರು ಮತ್ತು ನಮಸ್ಕರಿಸಿದರು. ಆಗ ಅವರಿಗೆ ಪ್ರೇರಣೆ ಆಯಿತು. ಒಂದರ ಹಿಂದೆ ಒಂದರಂತೆ ಆರು ಶ್ಲೋಕ ಬಾಯಿಯಿಂದ ಪ್ರಕಟಗೊಂಡವು. ಶಾಸ್ತ್ರಿಗಳು ಒಮ್ಮೆಗೆ ಎಚ್ಚರಗೊಂಡರು. ಮರೆಯುವ ಮೊದಲೇ ಅವರು ಆ ಆರು ಶ್ಲೋಕಗಳನ್ನು ಬರೆದಿಟ್ಟರು. ಇನ್ನು ಎರಡು ಹೊಸ ಶ್ಲೋಕ ರಚಿಸಿ, ಆ

ಸ್ತುತಿಯ ಅಷ್ಟಕ ಪೂರ್ಣಗೊಳಿಸಿದರು. ಮುಂದೆ ಕೆಲವು ದಿನಗಳಲ್ಲಿ ಅವರು ಶ್ರೀಮಹಾರಾಜರ ದರ್ಶನಕ್ಕಾಗಿ ಗೊಂದವಲೆಗೆ ಹೋದರು. ಅವರು ಸ್ವಪ್ನದ ವಿಷಯ ತಿಳಿಸಿ ಶ್ರೀಮಹಾರಾಜರ ಮುಂದೆ ಆ ಅಷ್ಟಕ ಬರೆದ ಕಾಗದವಿಟ್ಟರು. ಶ್ರೀಮಹಾರಾಜರು ಪೆನ್ಸಿಲನ್ನು ಎತ್ತಿಕೊಂಡು ಕೊನೆಯ ಎರಡು ಶ್ಲೋಕಗಳ ಮೇಲೆ ಕಾಟು ಹೊಡೆದರು. ಅವರು ಹೇಳಿದರು - ರಾಮನು ಕೊಟ್ಟಿದ್ದರಲ್ಲಿ ಸಮಾಧಾನ ಪಡಲು ಕಲಿಯಬೇಕು. ರಾಮನು ಕೊಟ್ಟಿದ್ದೇ ಹಿತದ ಇರುತ್ತದೆ. ನಮ್ಮ ದೇಹ ಬುದ್ಧಿಯ ಹಸ್ತಕ್ಷೇಪ ಅದಕ್ಕೆ ಜೋಡಿಸಬಾರದು. ಶ್ರೀಮಹಾರಾಜರು ನಿಜವಾಗಿ ಭಕ್ತವತ್ಸಲರಾಗಿದ್ದರು. ಅವರು ಪ್ರತಿಯೊಬ್ಬನಿಗೂ ರಾಮನಾಮಕ್ಕೆ ಹಚ್ಚಿ ಆಧ್ಯಾತ್ಮದ ಸುಲಭ ದಾರಿ ತೋರಿದರು. ಭಕ್ತರ ಹಿತದ ಚಿಂತೆ ಯಾವಾಗಲೂ ಮಾಡಿದರು. ಭಕ್ತರಲ್ಲಿ ಯಾವುದೇ ಭೇದ ಮಾಡಲಿಲ್ಲ. ಶ್ರೀಮಂತ-ಬಡವ ಎಲ್ಲ ಭಕ್ತರನ್ನೂ ಸಮಾನವಾಗಿ ತಿಳಿದರು. ಶ್ರೀಮಹಾರಾಜರ ಸಂಬಂಧಿ ಓರ್ವ ಗೃಹಸ್ಥ ಗೊಂದವಲೆಗೆ ಹತ್ತಿರದಲ್ಲೇ ಇರುತ್ತಿದ್ದರು. ಅವರ ಮಗ ಐದು ವರುಷದವನಾಗಿದ್ದಾಗಲೇ ಅವರ ಪತ್ನೀ ದೇವರ ಪಾದ ಸೇರಿದರು. ತಂದೆ-ಮಗನ ಆರ್ಥಿಕ ಮತ್ತು ಮಾನಸಿಕ ಸ್ಥಿತಿ ತುಂಬಾ ಕೆಟ್ಟಿತು. ಒಮ್ಮೆ ಅವರ ಊರಿಗೆ ಭಕ್ತರ ಗಡಣದೊಂದಿಗೆ ಶ್ರೀಮಹಾರಾಜರು ಹೋದರು. ನೂರು - ನೂರೈವತ್ತು ಭಕ್ತಮಂಡಳಿ ಇತ್ತು. ಗೃಹಸ್ಥನಿಗೆ ಅವರ ಆಗಮನದ ವಾರ್ತೆ ತಿಳಿಯಿತು. ಅವರು ತಮ್ಮ ಮಗನಿಗೆ ಹೇಳಿದರು - ಮಗು! ಶ್ರೀಮಹಾರಾಜರ ಕಡೆಗೆ ಹೋಗಿ ನಮ್ಮ ಮನೆಯಲ್ಲಿ ರೊಟ್ಟಿ-ಪಲ್ಯ ಉಣ್ಣಲು ಬರಬೇಕೆಂದು ಆಮಂತ್ರಣ ಕೊಟ್ಟು ಬಾ. ತಂದೆಯವರ ಮಾತಿನಂತೆ ಮಗ ಶ್ರೀಮಹಾರಾಜರ ಮುಕ್ಕಾವಿಗೆ ಬಂದನು. ಮಹಾರಾಜರ ವೈಭವ, ಅವರನ್ನು ಭೆಟ್ಟಿಯಾಗಲು ಬಂದ ದೊಡ್ಡ-ದೊಡ್ಡ ಜನರು, ಅವರ ಚರ್ಚೆ ನೋಡಿ ಅವನು ಗಾಬರಿಗೊಂಡನು. ಅವನು ಮಹಾರಾಜರ ಚರಣಗಳಲ್ಲಿ ತಲೆಯಿಟ್ಟು ನಮಸ್ಕರಿಸಿ ಒಂದು ಮೂಲೆಗೆ ಹೋಗಿ ಕುಳಿತನು. ಶ್ರೀಮಹಾರಾಜರನ್ನು ತಮ್ಮ ಮನೆಗೆ ಆಮಂತ್ರಿಸಲು ಅವನಿಗೆ ಧೈರ್ಯವಾಗಲಿಲ್ಲ. ಕೊನೆಗೆ ಮಹಾರಾಜರೇ ಅವನಲ್ಲಿ ಹೇಳಿದರು - ಮಗು! ನಾನು ನಿನ್ನ ಮನೆಗೆ ರೊಟ್ಟಿ-ಪಲ್ಯ ತಿನ್ನಲು ಬರುವೆನು. ಆ ಹುಡುಗ ಆನಂದದಿಂದ ಮನೆಗೆ ಬಂದು ನಡೆದುದನ್ನು ಹೇಳಿದನು.

ಮರುದಿನ ಬೆಳಿಗ್ಗೆ ಅಪ್ಪ - ಮಗ ಸ್ನಾನ ಮಾಡಿ, ಮಗ ದೇವರ ಪೂಜೆಗೆ ಕುಳಿತ, ಅಪ್ಪ ರೊಟ್ಟಿ ಪಲ್ಯದ ಅಡಿಗೆ ಮಾಡಿದರು. ಮೈಮೇಲೆ ಕಫನಿ, ಕಾಲಲ್ಲಿ ಪಾದುಕೆ, ಹೀಗೆ ಶ್ರೀಮಹಾರಾಜರು ಅವರ ಮನೆಗೆ ಬಂದರು. ತಂದೆ-ಮಗನಿಗೆ ಪರಮಾನಂದವಾಯಿತು. ಅವರು ಮಹಾರಾಜರಿಗೆ ಸ್ನಾನ ಮಾಡಿಸಿ, ಅವರ ಪಾದ್ಯಪೂಜೆ ಮಾಡಿದರು. ಶ್ರೀರಾಮನಿಗೆ ನೈವೇದ್ಯ ತೋರಿಸಿ, ಮಹಾರಾಜರನ್ನು ಊಟಕ್ಕೆ ಕೂರಿಸಿದರು. ಅವರೊಂದಿಗೆ

ಬಂದ ಜನರು ಒಬ್ಬರ ಹಿಂದೆ ಒಬ್ಬರು ಬರತೊಡಗಿದರು. ಶ್ರೀಮಹಾರಾಜರು ಅವರನ್ನು ಒತ್ತಾಯಿಸಿ ರೊಟ್ಟಿ-ಪಲ್ಯ ಉಣ್ಣಲು ಕುಳ್ಳಿರಿಸಿಕೊಂಡರು. ಅಪ್ಪ-ಮಗ ಒಬ್ಬರ ಹಿಂದೆ ಒಬ್ಬರು ಬರುತ್ತಿದ್ದವರಿಗೆಲ್ಲ ಬಡಿಸಲು ಪ್ರಾರಂಭಿಸಿದರು. ಅವರು ಎಷ್ಟು ಮಂದಿಗೆ ಊಟ ಹಾಕಿದರು ಇದು ಗಮನಕ್ಕೆ ಬರಲಿಲ್ಲ.

ಅವರು ಹೆಚ್ಚು ಕಮ್ಮಿ ಒಂದುನೂರ ಇಪ್ಪತ್ತೈದು ಜನರಿಗೆ ರೊಟ್ಟಿ-ಪಲ್ಯ ಊಟ ಹಾಕಿದ್ದೇವೆ ಎಂದು ಕೊನೆಗೆ ಅವರಿಗೆ ಹೊಳೆಯಿತು. ಮತ್ತೆ ಪುನಃ ಮಾಡಿದ ನಾಲ್ಕೈದು ರೊಟ್ಟಿ ಮತ್ತು ಅಷ್ಟೇ ಪಲ್ಯ ಉಳಿದಿತ್ತು. ಶ್ರೀಮಹಾರಾಜರು ನನ್ನ ಕೈಯಿಂದ ಎಷ್ಟು ಅನ್ನದಾನ ಮಾಡಿಸಿದರು! ಅಪ್ಪ-ಮಗನ ಕಣ್ಣುಗಳಿಂದ ಆನಂದಾಶ್ರು ಹರಿದವು. ಅವರು ಶ್ರೀಮಹಾರಾಜರ ಚರಣಗಳಲ್ಲಿ ಕೃತಜ್ಞತೆಯಿಂದ ಶಿರ ಚಾಚಿದರು.

ಶ್ರೀಮಹಾರಾಜರು ತಮ್ಮ ಭಕ್ತ ಮಂಡಳಿಯೊಂದಿಗೆ ಒಮ್ಮೆ ವಾರ್ತಾಲಾಪ ಮಾಡುತ್ತಾ ಕುಳಿತಿದ್ದರು. ಶ್ರೀಮಹಾರಾಜರು ಹೇಳಿದರು - ದಾನ ಧರ್ಮ ಇದು ದೊಡ್ಡ ಸದ್ಗುಣವಾಗಿದೆ. ಆಧ್ಯಾತ್ಮಕ್ಕೆ ಅದು ಅವಶ್ಯಕವಾಗಿದೆ, ಔದಾರ್ಯವು ಮನುಷ್ಯನನ್ನು ಪಂತರಾಗಿಸುತ್ತದೆ ಮತ್ತು ಪಂತರೇ ಸಂತ ಪದಕ್ಕೆ ಹೋಗಬಲ್ಲರು. ಒಬ್ಬ ಕೇಳಿದ - ಅಂದರೆ ಬಡವರು ಪಂತರಾಗಲಾರರೇ? ಅವರು ಪರಮಾರ್ಥ ಸಾಧಿಸಲಾರರೇ? ಶ್ರೀಮಹಾರಾಜರು ಹೇಳಿದರು - ಸಾಧಿಸಿತು, ಬಡವರೇ ಏನು ಕೇವಲ ಭಿಕ್ಷೆ ಬೇಡುವವರೂ, ಭಿಕ್ಷೆಯಲ್ಲೇ ಹೊಟ್ಟೆ ಹೊರೆಯುವವನೂ ಪಂತನಾಗಬಲ್ಲ. ಅವನು ಕೇಳಿದ - ಇದು ಹೇಗೆ ಶಕ್ಯವಿದೆ? ಮಹಾರಾಜರು ಹೇಳಿದರು - ಹೇಳುವೆನು, ಇದನ್ನು ಎಂದಾದರು ಹೇಳುವೆನು. ಮುಂದೆ ಎಂಟು ದಿನಗಳಲ್ಲಿ ಶ್ರೀಮಹಾರಾಜರು ಭಕ್ತ ಮಂಡಳಿಗೆ ಹೇಳಿದರು. ಇಂದು ನನ್ನ ಸದ್ಗುರು ತುಕಾಮಾಯಿಯವರ ಪುಣ್ಯತಿಥಿ ಯಾಗಿದೆ. ಇಂದು ನಾವು ಊರಿನಲ್ಲಿ ತಿರುಗಾಡಿ ಭಿಕ್ಷೆ ಎತ್ತುವಾ. ಆ ಭಿಕ್ಷೆಯನ್ನೇ ಗುರುಗಳಿಗೆ ನೈವೇದ್ಯ ಮಾಡುವಾ. ಅವರು ಹೆಗಲಿಗೆ ಜೋಳಿಗೆ ಏರಿಸಿದರು. ಜೊತೆಗೆ ಐದು ಹತ್ತು ಭಕ್ತರೂ ಜೋಳಿಗೆ ಎತ್ತಿಕೊಂಡು ಹೊರಟರು. ಸಮರ್ಥ ರಾಮದಾಸ ಸ್ವಾಮಿಗಳ ಮನೋಬೋಧೆ ಶ್ಲೋಕಗಳನ್ನು ಹಾಡುತ್ತಾ ಮನೆ - ಮನೆಗೆ ಭಿಕ್ಷೆ ಬೇಡುತ್ತಾ ಹೊರಟರು. ಒಂದು ಕಾಸು, ಒಂದು ಆಣೆ, ಒಂದು ರೂಪಾಯಿ, ಹತ್ತು - ರೂಪಾಯಿ, ಜನರು ತಮ್ಮ ಪರಿಸ್ಥಿತಿಗನುಸಾರ ಧನ ಕೊಡುತ್ತಿದ್ದರು. ಮನೆ - ಮನೆಗಳಲ್ಲಿ ಭಗಿನಿಯರು ಬೊಗಸೆ ತುಂಬ, ದೊಡ್ಡ ಪಾತ್ರೆ ತುಂಬಾ ಪರಿಸ್ಥಿತಿಗನುಸಾರವಾಗಿ ಧಾನ್ಯ ದಾನಾರ್ಥ ಕೊಡುತ್ತಿದ್ದರು.

ಆ ಊರಿನಲ್ಲಿ ಒಂದು ಹಳ್ಳ ಇತ್ತು. ಹಳ್ಳದ ಆಚೆ ಒಂದು ಗುಡಿಸಲು ಇತ್ತು. ಆ ಗುಡಿಸಲಿನಲ್ಲಿ ಓರ್ವ ರಾಮದಾಸೀ ಬುವಾ ಇದ್ದರು. ಅವರು ಮೂರೂವರೆ ಕೋಟಿ

ನಾಮಜಪದ ಅನುಷ್ಠಾನ ಮಾಡುತ್ತಿದ್ದರು. ಕೇವಲ ನಾಲ್ಕೇ ಮನೆಗಳಲ್ಲಿ ಭಿಕ್ಷೆ ಬೇಡುತ್ತಿದ್ದರು. ಅವರು ಒಣ ಭಿಕ್ಷೆ ಎತ್ತಿ ಅದರಲ್ಲಿ ಸಿಕ್ಕಿದ ಹಿಟ್ಟನ್ನು ನೀರಿನಲ್ಲಿ ಕಲಿಸಿ ತಿನ್ನುತ್ತಿದ್ದರು. ಈಗ ತಾನೆ ಅವರು ಭಿಕ್ಷೆ ಬೇಡಿ ಮರಳಿದ್ದರು. ಇನ್ನೂ ಅದು ಒಣಗಾಗಿಯೇ ಇತ್ತು. ಅಷ್ಟರಲ್ಲಿ ಮಹಾರಾಜರು ತಮ್ಮ ಸಂಗಡಿಗಳೊಂದಿಗೆ ಅಲ್ಲಿಗೆ ಬಂದರು. ಜಯ ಜಯ ರಘುವೀರ ಸಮರ್ಥ ಹೀಗೆ ಅವರು ಉದ್ಘೋಷಿಸಿದರು. ಆಗ ತಾನೇ ಭಿಕ್ಷೆ ಎತ್ತಿ ತಂದಿದ್ದ ಜೋಳಿಗೆಯನ್ನು ಮಹಾರಾಜರ ಜೋಳಿಗೆಗೆ ಸುರಿದರು. ಹಾಗೂ ಮಹಾರಾಜರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಅಲ್ಲಿಂದ ಮುಂದೆ ಬಂದಾಗ ಮಹಾರಾಜರು ಹೇಳಿದರು – ಈ ರಾಮದಾಸೀ ಬುವಾಗೆ ಉಪವಾಸವಾಗುವುದು. ಇವರು ನಿಜವಾದ ಪಂತರು. ಇಂದು ನಮಗೆ ಅನೇಕರು ಸಹಾಯ ಮಾಡಿದರು. ಒಂದು ಕಾಸು, ಒಂದು ಆಣೆ, ಕೊಡುವವರು ರೂಪಾಯಿ ಕೊಟ್ಟಿರಬಹುದು. ರೂಪಾಯಿ ಹತ್ತು ರೂಪಾಯಿ ಹೆಚ್ಚು ಕೊಟ್ಟರು. ಪ್ರಾಪಂಚಿಕ ಜನರು ತನ್ನ ಬಳಿ ಇದ್ದುದು ಎಲ್ಲವನ್ನೂ ಕೊಟ್ಟು ಬಿಡಬಾರದು. ಆದರೆ ಪ್ರಸಂಗ ಬಂದರೆ ಸರ್ವವನ್ನು ಅರ್ಪಿಸುವ ಮಾನಸಿಕ ತಯಾರಿ ಮಾತ್ರ ಇರಬೇಕು.

ಶ್ರೀರಾಮನಾಮ ಜಪಿಸಬೇಕು. ಎಲ್ಲವನ್ನೂ ರಾಮಾರ್ಪಣ ಮಾಡಬೇಕು. ನಾಮಸ್ಮರಣೆಯನ್ನು ನಿರಪೇಕ್ಷ ವೃತ್ತಿಯಿಂದ ಮಾಡಬೇಕು. ಸಂಸಾರದ ತನ್ನ ಕರ್ತವ್ಯ ಗಳನ್ನು ನಿಷ್ಠೆಯಿಂದ ಮಾಡಬೇಕು. ಅದರಲ್ಲಿ ರಾಮನ ಸಾಕ್ಷಿತ್ವ ಇರಬೇಕು. ಮುಖ್ಯವಾಗಿ ಎರಡು ವಿಷಯಗಳಿವೆ. ಒಂದು ಇದ್ದುದರಲ್ಲಿ ಸಮಾಧಾನಿಯಾಗಿರಬೇಕು ಮತ್ತು ಮಾಡುವ ಮಾಡಿಸುವವ ನಾನಲ್ಲದೆ ಪ್ರಭು ರಾಮಚಂದ್ರನಾಗಿದ್ದಾನೆ. ಇದನ್ನು ಮನಸ್ಸಿನಲ್ಲಿ ದೃಢವಾಗಿರಬೇಕು. ಅಷ್ಟೇ ನಾವು ಮಾಡುವುದಿಲ್ಲ. ಭಡಗಾಂವಕರ ಇವರ ಪರಿಚಯಸ್ಥ ಶ್ರೀಮಹಾರಾಜರ ಬಳಿಗೆ ಬರುತ್ತಿದ್ದ ಪರಭಣೆಯ ಓರ್ವ ಜಮೀಂದಾರ ಇದ್ದರು. ಅವರ ಪತ್ನೀ ಬೇಗನೇ ದೇವರಪಾದ ಸೇರಿದರು. ಮನೆಯಲ್ಲಿ ಮುದುಕಿ ತಾಯಿ, ಒಬ್ಬ ಸಣ್ಣ ಮಗ ಮತ್ತು ಅವರು ಇಷ್ಟೇ ಅವರ ಸಂಸಾರ, ಹೊಲದ ಉತ್ಪನ್ನ ಸಾಕಷ್ಟಿತ್ತು. ಅದರ ಕುರಿತು ಅವರಿಗೆ ಚಿಂತೆ ಇರಲಿಲ್ಲ. ನಾಮ ಸಾಧನೆ ಮಾಡುತ್ತಾ – ಮಾಡುತ್ತಾ ಅವರಿಗೆ ತಾನು ಸರ್ವಸಂಗ ಪರಿತ್ಯಾಗಿಯಾಗಿ, ರಾಮದಾಸೀಯಾಗಬೇಕು ಎಂದು ಅನ್ನಿಸತೊಡಗಿತು. ಅವರು ತನ್ನ ಇಚ್ಛೆಯನ್ನು ಅನೇಕ ಸಲ ಶ್ರೀಮಹಾರಾಜರ ಮುಂದೆ ವ್ಯಕ್ತಪಡಿಸಿದರು. ಶ್ರೀಮಹಾರಾಜರು ಹೇಳಿದರು – ಸರ್ವಸಂಗ ಪರಿತ್ಯಾಗಕ್ಕಾಗಿ ಯೋಗ್ಯ ಸಮಯ ಬರಬೇಕಾಗುತ್ತದೆ. ಅದು ಬಂದಾಗ ನಾನು ನಿಮಗೆ ಹೇಳುವೆನು. ಶ್ರೀಮಹಾರಾಜರು ಅವರಿಗೆ ಹೆಚ್ಚೆಚ್ಚು ನಾಮಸ್ಮರಣ ಮಾಡಲು ಹೇಳಿದರು.

ಮುಂದೆ ಅವರ ವೃದ್ಧ ತಾಯಿ ದೇವರಪಾದ ಸೇರಿದರು. ಜಮೀನ್ದಾರರು ಮೂಲತಃ ಪ್ರಾಮಾಣಿಕ ಮತ್ತು ಕಷ್ಟ ಸಹಿಷ್ಣು ಆಗಿದ್ದರು. ಅವನು ಒಂದು ಪತ್ರ ಸಿದ್ಧಪಡಿಸಿದರೂ, ತನ್ನ ಮಗನ ಸಮ್ಮತಿಯಿಂದ ಆ ಪತ್ರಕ್ಕೆ ಸಹಿ ಮಾಡಿ, ಅವನ ಜೊತೆಗೆ ಮಹಾರಾಜರಿಗೆ ಕಳಿಸಿದರು. ಆ ಪತ್ರದಲ್ಲಿ ಅವರು ತನ್ನ ಸರ್ವ ಸಂಪತ್ತು, ಮನೆ, ಭೂಮಿ, ಜಾನುವಾರು, ಪಾತ್ರೆ ಪಗಡಿ ಹೀಗೆ ಎಲ್ಲವನ್ನೂ ಶ್ರೀಮಹಾರಾಜರಿಗೆ ಸಮರ್ಪಿಸಿದ್ದರು. ಶ್ರೀಮಹಾರಾಜರು ಆ ಪತ್ರವನ್ನು ಓದಿ, ಅವರು ಮಗನ ಕೈಯಲ್ಲಿ ಹಿಂದಕ್ಕೆ ಕಳಿಸಿದರು – ಅವರೆಂದರು – ಮಗು ಪತ್ರದ ಅಗತ್ಯವಿಲ್ಲ, ಇದೆಲ್ಲವೂ ರಾಮನದ್ದೇ ಆಗಿದೆ. ಈ ಶ್ರದ್ಧೆ ಮನಸ್ಸಿನಲ್ಲಿದ್ದರೆ ಸಾಕು. ಮುಂದೆ ಆ ಜಮೀನ್ದಾರ ಕಾಯಿಲೆ ಬಿದ್ದ, ಅವನ ಕಾಯಿಲೆ ಹೆಚ್ಚುತ್ತಾ ಹೋಯಿತು. ಅವನನ್ನು ಭೆಟ್ಟಿಯಾಗಲು ಮಹಾರಾಜರು ಹೋದರು. ಅವನು ಅಳುತ್ತಾ – ಅಳುತ್ತಾ ಅವರಲ್ಲಿ ಹೇಳಿದ – ನೀವು ಹೇಳಿದಂತೆ ನಾನು ನನ್ನ ಸರ್ವಸ್ವ ಕೊಟ್ಟೆ. ಸರ್ವಸ್ವ ಕೊಟ್ಟಾಗ ಅವನು ನಮ್ಮವನಾಗುತ್ತಾನೆ. ಹೀಗೆ ನೀವು ಹೇಳುತ್ತೀರಿ. ನಾನು ನನ್ನ ಸರ್ವಸ್ವವನ್ನು ಕೊಟ್ಟರೂ ಅವನು ನನ್ನವನಾಗಲಿಲ್ಲ. ಇದು ನನಗೆ ಬೇಸರ ತಂದಿದೆ; ಅವನ ಕಣ್ಣುಗಳಿಂದ ನೀರು ಹರಿಯತೊಡಗಿತು. ಶ್ರೀಮಹಾರಾಜರು ಹೇಳಿದರು – ನೀವು ಸಹಿ ಮಾಡಿ ಪತ್ರ ನನ್ನ ಕಡೆ ಕಳಿಸಿದಿರಿ. ಇಡೀ ಜಗತ್ತು ರಾಮನದಾಗಿದ್ದಾಗ ಕೊಡುವವನು ನಾನು ಯಾರು? ಸಿಟ್ಟಾಗಬೇಡಿ, ಆದರೆ ನಾನು ಕೊಟ್ಟೆ ಈ ಭಾವ ಇದ್ದೇ ಇದೆ. ನಾವು ಎಲ್ಲವನ್ನು ಕೊಡುತ್ತೇವೆ. ಆದರೆ ಸ್ವ ಕೊಡಲು ಸಿದ್ಧರಿರುವುದಿಲ್ಲ. ಅದರಿಂದಲೇ ಸಮಾಧಾನ ಆಗುವುದಿಲ್ಲ. ಭಗವಂತನಿಗೆ ಸ್ವ ಕೊಡುವುದು ಅಂದರೆ ಅಹಂ ನ ತ್ಯಾಗ ಈ ಅರಿವು ಮನಸ್ಸಿನಲ್ಲಿ ಸತತ ಇರಿಸುವುದು.

ಮುಂದೆ ಆ ಜಮೀನ್ದಾರರು ಕಾಯಿಲೆಯಿಂದ ಹುಷಾರಾದರು. ಮತ್ತೆ ಅವನು ಒಂದೂವರೆ ವರ್ಷ ಬದುಕಿದ. ಆ ಸಂಪೂರ್ಣ ಒಂದೂವರೆ ವರ್ಷದಲ್ಲಿ ಅವನು ಶ್ರೀರಾಮನಾಮದ ಅಖಂಡ ಜಪ ಮಾಡಿದನು. ಎಲ್ಲ ಸಮಯವನ್ನು ಅನುಸಂಧಾನದಲ್ಲಿ ಕಳೆದನು. ಇನ್ನು ತನ್ನ ಅಂತ್ಯಕಾಲ ಸಮೀಪಿಸಿತು ಎಂದು ಅವನಿಗೆ ತಿಳಿಯಿತು. ಅವನು ಎಲ್ಲರೆದುರು ಶ್ರೀಮಹಾರಾಜರಲ್ಲಿ ಹೇಳಿದ – ಈಗ ನನಗೆ ಶಾಂತಿ ಲಭಿಸಿದೆ, ನನ್ನ ಅಂತಃಕರಣದಲ್ಲಿ ರಾಮನಾಮ ನಡೀತಾ ಇದೆ. ನಾನು ಆನಂದದಿಂದ ನಿಮ್ಮೆಲ್ಲರನ್ನು ಬೀಳ್ಕೊಳ್ಳುವೆನು. ಇಷ್ಟು ಹೇಳಿ ಅವನು ದೇಹವಿಟ್ಟನು. ಶ್ರೀಮಹಾರಾಜರು ಹೇಳಿದರು – ಇವನು ಉಚ್ಚ ಕೋಟಿಗೆ ತಲುಪಿದನು. ತೀರ್ಥಕ್ಷೇತ್ರದಲ್ಲಿ ಹನ್ನೆರಡು ವರ್ಷ ವಾಸಿಸಿದರೂ ಸಾಧ್ಯವಾಗದುದು ಇವನಿಗೆ ನಿಷ್ಠೆಯಿಂದ ನಾಮಸ್ಮರಣೆಯಿಂದ ಸಾಧ್ಯವಾಯಿತು. ☐☐

-: ಇಪ್ಪತ್ತೊಂದು :-

# ಸ್ವಯಂಸಿದ್ಧ ನಾಮ

ಶ್ರೀಮಹಾರಾಜರು ನಿಜವಾದ ಭಕ್ತವತ್ಸಲರಾಗಿದ್ದರು. ಕರ್ಹಾಡದಲ್ಲಿ ಆಬಾಜೀ ಪಂತ ಎಂಬ ಓರ್ವ ಗೃಹಸ್ಥರಿದ್ದರು. ರಿಜಿಸ್ಟ್ರೇಷನ್ ಇಲಾಖೆಯಲ್ಲಿ ನೌಕರಿಗಿದ್ದರು. ಅವರು ಬಹಳ ವರ್ಷ ನೌಕರೀ ಮಾಡಿ ಮುಂದೆ ಸ್ವೆಚ್ಛಾ ನಿವೃತ್ತಿ ಪಡೆದರು. ಅವರಿಗೆ ಗಂಡು ಮಗು ಇಲ್ಲದೆ ಮೂರು ಹೆಣ್ಣು ಮಕ್ಕಳೇ ಇದ್ದರು. ಇಬ್ಬರು ಕನ್ಯೆಯರ ವಿವಾಹವಾಯಿತು. ಮೂರನೆಯವಳು ಚಿಕ್ಕವಳಾಗಿದ್ದಳು, ಅದರಿಂದ ವಿವಾಹವಾಗಿರಲಿಲ್ಲ. ಆಬಾಜೀಯವರಿಗೆ ಉಳಿದ ಜೀವನ ಕಾಲವನ್ನು ಈಶ್ವರನ ಉಪಾಸನೆಯಲ್ಲಿ ಕಳೆಯುವುದಿತ್ತು. ಅದರಲ್ಲಿ ಅವರಿಗೆ ತುಂಬಾ ಶಂಕೆಗಳಿದ್ದವು. ತನ್ನ ಈ ಶಂಕೆಗಳ ಸಮಾಧಾನ ಯಾರು ಮಾಡುವರು? ಎಂಬ ಚಿಂತೆ ಅವರಿಗಿತ್ತು. ಅವರು ಸಮರ್ಥ ರಾಮದಾಸ ಸ್ವಾಮಿಗಳನ್ನು ಸ್ಮರಿಸಿ ಸಂಶಯಗಳ ನಿರಸನ ಮಾಡಲು ವಿನಂತಿಸುತ್ತಿದ್ದರು. ಒಮ್ಮೆ ಜಯ ಜಯ ರಘುವೀರ ಸಮರ್ಥ ಹೀಗೆ ಘೋಷಣೆ ಮಾಡುತ್ತಾ ಒಬ್ಬ ವೃದ್ಧ ರಾಮದಾಸೀ ಬಾಗಿಲಿಗೆ ಭಿಕ್ಷೆಗೆ ಬಂದನು. ಅವರನ್ನು ಆಬಾಜೀಯವರು ಕೇಳಿದರು - ಪರಮಾರ್ಥ ಹೇಗೆ ಮಾಡಬೇಕು? ನೀವು ನನಗೆ ಹೇಳುವಿರಾ? ರಾಮದಾಸೀ ಹೇಳಿದರು - ಗೊಂದವಲೆಯ ಬ್ರಹ್ಮಚೈತನ್ಯ ಮಹಾರಾಜರ ಬಳಿಗೆ ಹೋಗಿ, ಅವರು ನಿಮಗೆ ನಿರ್ದಿಷ್ಟ ಮಾರ್ಗದರ್ಶನ ಮಾಡುವರು ಎಂದು ಹೇಳಿ ಅವರು ಹೊರಟು ಹೋದರು.

ಆಬಾಜೀ ಗೊಂದವಲೆಗೆ ಬಂದಾಗ ಶ್ರೀಮಹಾರಾಜರು ಹೊಲದಲ್ಲಿ ಕೆಲಸ ಮಾಡಿ ಬಂದಿದ್ದರು. ಸ್ನಾನಕ್ಕೆ ಹೊರಟಿದ್ದರು. ಅವರ ದರ್ಶನವಾದ ಕ್ಷಣ ಆಬಾಜೀಯವರಿಗೆ ಶಾಂತಿ, ಪ್ರಸನ್ನತೆ, ಅನಿಸಿತು. ಅವರ ಕಣ್ಣುಗಳಿಂದ ಆನಂದಾಶ್ರು ಹರಿದವು. ಶ್ರೀಮಹಾರಾಜರು ಪ್ರತಿದಿನ ಬೆಳಿಗ್ಗೆ ನಿಶ್ಚಿತ ಸಮಯದಲ್ಲಿ ನಿರೂಪಣ ಮಾಡುತ್ತಿದ್ದರು.

ಮಂದಿರದಲ್ಲಿ ಸರ್ವ ಮಹಿಳೆಯರು, ಪುರುಷರು ಕೇಳಲು ಕುಳಿತುಕೊಳ್ಳುತ್ತಿದ್ದರು. ಆಬಾಜೀಯವರು ಉತ್ಸುಕತೆಯಿಂದ ಕುಳಿತು ಮನಃಪೂರ್ವಕ ಶ್ರವಣ ಭಕ್ತಿ ಮಾಡತೊಡಗಿದರು. ಕೆಲವು ದಿನ ಕಳೆದಾಗ ಶ್ರೀಮಹಾರಾಜರ ನಿರೂಪಣದಿಂದ ಆಬಾಜೀಯವರ ಎಲ್ಲ ಪ್ರಶ್ನೆಗಳ ಉತ್ತರಗಳು ಸಿಕ್ಕಿದವು. ಒಂದು ದಿನ ನಿರೂಪಣ ನಡೆಯುತ್ತಿದ್ದಾಗಲೇ ಕೃತಜ್ಞತಾ ಭಾವ ಅದುಮಿಡಲಾರದೆ ಆಬಾಜೀ ಮುಂದೆ ಬಂದರು. ಅವರು ಶ್ರೀಮಹಾರಾಜರ ಚರಣಗಳಲ್ಲಿ ತಲೆಯನ್ನಿಟ್ಟರು. ಮಹಾರಾಜರು ಅವರನ್ನು ಎಬ್ಬಿಸಿ, ಆಲಿಂಗಿಸಿಕೊಂಡರು. ಆಬಾಜೀ ಹೇಳಿದರು - ನನ್ನ ಮನಸ್ಸಿನಲ್ಲಿ ಉಪಾಸನೆಯ ವಿಷಯದಲ್ಲಿ, ಆತ್ಮ ನಿವೇದನಾ ವಿಷಯದಲ್ಲಿ ಒಟ್ಟಿಗೆ ಸಾಧನೆಯ ವಿಷಯದಲ್ಲಿ ಅನೇಕ ಶಂಕೆಗಳು ಇದ್ದವು. ತಮ್ಮ ಮಾರ್ಗದರ್ಶನದಿಂದ ಅವುಗಳ ನಿರಸನವಾಯಿತು. ನಾನು ಧನ್ಯನಾದೆ. ಇನ್ನೊಂದು ಇಚ್ಛೆಯೂ ಇದೆ. ಅಂತ್ಯ ಕಾಲದಲ್ಲಿಯೂ ನನಗೆ ನಿಮ್ಮ ದರ್ಶನವಾಗಬೇಕು. ಮಹಾರಾಜರು ಹೇಳಿದರು - ಖಂಡಿತ, ನಾನು ನಿಮಗೆ ಅಂತ್ಯ ಕಾಲದಲ್ಲಿಯೂ ಭೇಟಿಯಾಗುವೆನು. ಆಬಾಜೀಯವರು ಜೋರಾಗಿ ನಾಮಸ್ಮರಣೆಯ ಹಿಂದೆ ಬಿದ್ದರು.

ಒಂದು ದಿನ ಮಹಾರಾಜರು ಸಹಜವಾಗಿ ಅವರನ್ನು ಕೇಳಿದರು - ನಾಮಸಾಧನೆ ನಡೆಯುತ್ತಿದೆಯಲ್ಲ? ಆಬಾಜೀ ಹೇಳಿದರು - ತಮ್ಮ ಕೃಪೆಯಿಂದ ನಡೆಯುತ್ತಿದೆ, ಆದರೆ ನನ್ನ ಮಗಳ ಮದುವೆಯ ಚಿಂತೆ ಇದೆ. ನನ್ನ ವಿಠಾಬಾಯಿ ಇನ್ನು ಸಣ್ಣವಳಿದ್ದಾಳೆ. ಮಹಾರಾಜರು ಹೇಳಿದರು - ಇಂದಿನಿಂದ ನಿಮ್ಮ ವಿಠಾಬಾಯಿ ನನ್ನ ಕನ್ಯೆಯಾದಳು. ನಾನು ಆಕೆಯನ್ನು ದತ್ತಕ ಪಡೆದಿದ್ದೇನೆ. ಇನ್ನು ನೀವು ನಿಶ್ಚಿಂತ ಮನಸ್ಸಿನಿಂದ ನಾಮಸ್ಮರಣೆ ಮಾಡಿ. ಆಬಾಜೀಪಂತರು ಕೆಲವು ದಿನ ಗೊಂದವಲೆಯಲ್ಲಿದ್ದು ಕರ್ಹಾಡಕ್ಕೆ ಮರಳಿದರು. ಕೆಲವೇ ದಿನಗಳಲ್ಲಿ ಅವರ ಆರೋಗ್ಯ ಕೆಟ್ಟಿತು. ನೋಡು - ನೋಡುತ್ತಾ ಅದು ಚಿಂತಾಜನಕವಾಯಿತು. ಅವರ ಸುತ್ತಲೂ ಚಿಂತಾಕ್ರಾಂತ ಆಪ್ತರು ಸೇರಿದರು, ಆಬಾಜೀಯವರ ಇಚ್ಛೆಗನುಸಾರ ರಾಮನಾಮದ ಭಜನೆ ಗಟ್ಟಿಯಾಗಿ ಆಗತೊಡಗಿತು. ಜಯ ಜಯ ಶ್ರೀರಾಮ ಆಬಾಜೀಯರ ಮುಂದೆ ಮಹಾರಾಜರು ನಿಂತಿದ್ದರು. ಆಬಾಜೀಯವರಿಗೆ ಪರಮಾನಂದವಾಯಿತು. ಅವರ ಅಂತಿಮ ಇಚ್ಛೆ ಪೂರ್ಣವಾಯಿತು. ಪರಮ ಸಂತೋಷದಿಂದ ರಾಮನಾಮ ಹೇಳುತ್ತಾ ಅವರು ಪ್ರಾಣ ಬಿಟ್ಟರು. ಮುಂದೆ ವಿಠಾಬಾಯಿಯು ವಿವಾಹ ಯೋಗ್ಯಳಾದಾಗ ವಾಸುದೇವ ಮಾರ್ಡಿಕರ್ ಇವರೊಡನೆ ಆಕೆಯ ವಿವಾಹ ನೆರವೇರಿತು. ಶ್ರೀಮಹಾರಾಜರು ಸ್ವತಃ ಆಕೆಯ ಸಾಲಂಕೃತ ಕನ್ಯಾದಾನ ಮಾಡಿದರು.

ಬಂದ ಭಕ್ತರನ್ನು ಶ್ರೀಮಹಾರಾಜರು ನಾಮಸಾಧನೆಯಲ್ಲಿ ತೊಡಗಿಸಿದರು. ಅವರ ಎಲ್ಲ ಚಿಂತೆಗಳನ್ನು ತಮ್ಮ ತಲೆಯಲ್ಲಿ ಹೊತ್ತರು. ಜೀವನವಿಡೀ ಅವರು ಇದೇ ವ್ರತ ನಡೆಸಿದರು. ಶ್ರೀಮಹಾರಾಜರ ಭಕ್ತರ ಸಂಖ್ಯೆ ಬೆಳೆಯುತ್ತಿತ್ತು. ಹೆಚ್ಚಿನ ವ್ಯವಸ್ಥೆಯೂ ಆವಶ್ಯಕವಿತ್ತು. ಅವರು ಕಿರಿ ರಾಮ ಮಂದಿರದ ಸ್ಥಾಪನೆ ಮಾಡಿದರು. ಬರುವ ಭಕ್ತರಿಗೆ ಕೆಲವು ಕೋಣೆಗಳನ್ನು ಕಟ್ಟಿಸಿದರು. ತಮ್ಮ ಕುಲ ಪುರೋಹಿತರು ಶ್ರೀಚಿಂತುಬುವಾರವರನ್ನು ಕರೆಸಿಕೊಂಡರು. ಅವರಿಗೆ ಇರಲು ಮನೆ ಮತ್ತು ಜೀವನೋಪಾಯಕ್ಕೆ ಒಂದು ಹೊಲವನ್ನೂ ಕೊಟ್ಟರು. ವ್ಯವಸ್ಥೆಗಾಗಿ ಜನರ ಅವಶ್ಯಕತೆ ಇತ್ತು. ಅವರು ರಾಮಭಕ್ತ ಮತ್ತು ನಾಮಸಾಧಕರಾಗಿರುವುದು ಆವಶ್ಯಕವಾಗಿತ್ತು.

ಶ್ರೀಮಹಾರಾಜರ ಭಕ್ತರ ಸಂಖ್ಯೆ ಬೆಳೆಯುತ್ತಲೇ ಇತ್ತು. ಶ್ರೀಮಹಾರಾಜರು ಇನ್ನೂ ಹೊಲ ಕೊಂಡುಕೊಂಡರು, ಹೊಸ ಬಾವಿ ಕಟ್ಟಿಸಿದರು. ಶ್ರೀಮಹಾರಾಜರು ಹೊಲದಲ್ಲಿ ಪ್ರೇಮದಿಂದ ಕೆಲಸ ಮಾಡುತ್ತಿದ್ದರು. ಅವರೊಂದಿಗೆ ಜೊತೆಯ ಜನರೂ ದುಡಿಯತೊಡಗಿದರು. ಯಾವುದೇ ಕಷ್ಟದ ಕೆಲಸ ಹಗುರವಾಗಿ ತಿಳಿಯುವುದಲ್ಲ, ಕಳೆ ಕೀಳುವುದು, ಕಲ್ಲು ಹರಳು ಎತ್ತುವುದು, ಉಳುವುದು, ಸ್ವಚ್ಛಗೊಳಿಸುವುದು, ಎದುರಿಗಿದ್ದ ಕೆಲಸ ಅವರು ಮಾಡುತ್ತಿದ್ದರು. ನೀರು ತುಂಬುವುದು, ಧಾನ್ಯ ಸ್ವಚ್ಛಗೊಳಿಸುವುದು, ಬೀಸುವುದು, ಅಡಿಗೆ ಮಾಡುವುದು ಇಂತಹ ಕೆಲಸಗಳು ಮಹಿಳಾ ವರ್ಗದವರು ಮಾಡುತ್ತಿದ್ದರು. ರೊಟ್ಟಿ, ಸಾರು ನಿತ್ಯ ಇರುತ್ತಿತ್ತು. ಕೆಲವೊಮ್ಮೆ ಕಾಳಿನ ಉಸಳಿ ಇರುತ್ತಿತ್ತು ಮತ್ತು ಹಬ್ಬದ ದಿನ ಅನ್ನ ಇರುತ್ತಿತ್ತು. ಕಿರಿ ರಾಮ ಮಂದಿರ ಕಟ್ಟಿ ಅಲ್ಲಿ ಮಹಾರಾಜರು ಗಾಯತ್ರೀ ಪುರಶ್ಚರಣ ಮತ್ತು ರುದ್ರ ಸ್ವಾಹಾಕಾರ ನೆರವೇರಿಸಿದರು. ಅಲ್ಲಲ್ಲಿಯ ಬ್ರಹ್ಮವೃಂದ, ವಿದ್ವಾನ್, ವೈದಿಕರಿಗೆ ಆಮಂತ್ರಿಸಿದ್ದರು. ಎಂಟು ದಿನ ಪ್ರಸಾದ ರೂಪೀ ಅನ್ನ ಛತ್ರ ನಡೆಯುತ್ತಿತ್ತು. ಗೊಂದವಲೆ ಮತ್ತು ಅಕ್ಕ ಪಕ್ಕದ ಊರಿನ ಜನರು ಪ್ರಸಾದ ಪಡೆದು ತೃಪ್ತರಾಗುತ್ತಿದ್ದರು. ಶ್ರೀಮಹಾರಾಜರು ಸ್ವತಃ ಎಲ್ಲ ವ್ಯವಸ್ಥೆಯನ್ನು ನೋಡಿಕೊಳ್ಳುತ್ತಿದ್ದರು. ಎಲ್ಲರಿಗೂ ಕಳಕಳಿಯಿಂದ ರಾಮನಾಮ ಜಪಿಸಿ ಎಂದು ಹೇಳುತ್ತಿದ್ದರು. ವೈದಿಕರು - ವೈದಿಕ ಕರ್ಮಗಳು ಮಹತ್ವದ್ದು ಮತ್ತು ಪವಿತ್ರ ಇರುವಾಗ ರಾಮನಾಮದ ಬಂಡಾಯ ಹೆಚ್ಚಿಸುವುದು ಅವೈದಿಕ ಮತ್ತು ಅಶಾಸ್ತ್ರೀಯವಾಗಿದೆ ಎಂಬ ವಾದ ಮಂಡಿಸಿದರು. ಶ್ರೀ ಮಹಾರಾಜರು ಹೇಳಿದರು - ವೈದಿಕ ಕರ್ಮ ಮಾರ್ಗದಲ್ಲಿ ವ್ಯಕ್ತಿಯ ಶಿಸ್ತು, ಅದರಲ್ಲಿನ ನಿತ್ಯ ಕರ್ಮಗಳು, ಸಾತತ್ಯ ಇವೆಲ್ಲವುಗಳ ಬಗ್ಗೆ ನನಗೆ ಪರಮಾದರವಿದೆ, ಆದರೆ ಆ ಕರ್ಮಗಳನ್ನು ಶಾಸ್ತ್ರ ಶುದ್ಧ ಮಾಡುವುದು ಎಲ್ಲರಿಂದ ಸಾಧ್ಯವಾಗುವುದಿಲ್ಲ. ಅಲ್ಲದೆ

ಈ ಕರ್ಮಗಳನ್ನು ನಿತ್ಯ ಮಾಡಿ ಸ್ವಭಾವದಲ್ಲಿ ಕರ್ಮದಂತೆ ಒಂದು ಅಹಂಕಾರ ನಿರ್ಮಾಣವಾಗುವ ಸಂಭವವಿದೆ. ಅಲ್ಲದೆ ವೈದಿಕ ಕರ್ಮದಲ್ಲಿ ನಾಮಸ್ಮರಣೆ ಇದ್ದೇ ಇದೆ. ಋಚೆಗಳಲ್ಲಿ ಈಶ ಸ್ತುತಿ ಇದ್ದೇ ಇದೆ. ಪ್ರತಿಯೊಂದು ಶ್ಲೋಕ ಓಂಕಾರದಿಂದ ಪ್ರಾರಂಭವಾಗುತ್ತದೆ. ರಾಮನಾಮವು ಓಂಕಾರದ್ದೇ ಸ್ವರೂಪವಾಗಿದೆ. ಅದು ಎಲ್ಲ ಕರ್ಮಗಳ ಮತ್ತು ಸಾಧನೆಗಳ ಪ್ರಾಣವಾಗಿದೆ. ಶ್ರೀ ಮಹಾದೇವನಿಂದ ಸಮರ್ಥ ರಾಮದಾಸರವರೆಗೆ ಯಾರು - ಯಾರು ಮಹಾಸಿದ್ಧರಾಗಿ ಹೋಗಿದ್ದಾರೋ ಅವರೆಲ್ಲರೂ ರಾಮನಾಮವನ್ನು ಕಂಠದಲ್ಲಿ ಧರಿಸಿದ್ದರು. ರಾಮನಾಮದ ಮೂರುವರೆ ಕೋಟಿ ಜಪ ಮಾಡುವವನಿಗೆ ಅದರ ದೇವತೆಯ ಅನುಭವ ಬರದೆ ಇರಲಾರದು. ರಾಮ ನಾಮದ ಆಧಾರ ಪಡೆದು ನಾವೆಲ್ಲರೂ ರಾಮನನ್ನು ಜೋಡಿಸಬೇಕು. ಶ್ರೀಮಹಾರಾಜರ ಅಮೃತ ವಾಣಿಯಿಂದ ವೈದಿಕರೆಲ್ಲರೂ ಪ್ರಭಾವಿತರಾದರು. ಅವರು ಶ್ರೀಮಹಾರಾಜರಿಂದ ಶ್ರೀರಾಮನಾಮದ ಅನುಗ್ರಹ ಪಡೆದರು.

ತನ್ನ ಮಗನ ಕಾರ್ಯ, ಅವರ ದೊಡ್ಡ ಮನಸ್ಸು, ಅವರ ಲೋಕಸಂಗ್ರಹ ಎಲ್ಲವನ್ನೂ ನೋಡಿ ಶ್ರೀಮಹಾರಾಜರ ತಾಯಿ ಗೀತಾಬಾಯಿಯವರಿಗೆ ಧನ್ಯತೆ ಅನಿಸುತ್ತಿತ್ತು. ಶ್ರೀಮಹಾರಾಜರು ತಮ್ಮ ತಾಯಿಯ ಸೇವೆ ಅಷ್ಟೇ ಭಕ್ತಿಯಿಂದ ಮಾಡುತ್ತಿದ್ದರು. ಒಮ್ಮೆ ರಾತ್ರೆ ತಾಯಿಯ ಪಾದಸೇವೆ ಮಾಡುತ್ತಿದ್ದಾಗ ಅವರು ನಿಮಗೆ ಇನ್ನೇನಾದರೂ ಇಚ್ಛೆ ಇದೆಯೇ? ಎಂದು ಕೇಳಿದರು. ತಾಯಿ ಹೇಳಿದರು - ನಾನು ತೃಪ್ತಳಾಗಿದ್ದೇನೆ. ನನಗೆ ಇನ್ನೇನೂ ಬೇಡ. ಸಾಯುವ ಮೊದಲು ಒಮ್ಮೆ ಕಾಶಿಗೆ ಹೋಗಬೇಕೆಂದು ಅನಿಸುತ್ತದೆ. ಗಂಗಾಸ್ನಾನ ಮಾಡಿ, ವಿಶ್ವೇಶ್ವರನ ದರ್ಶನ ಪಡೆಯಬೇಕೆಂದು ಮನಸ್ಸಿಗೆ ಬಂದಿದೆ. ಶ್ರೀಮಹಾರಾಜರು ಕೂಡಲೇ ಒಪ್ಪಿಕೊಂಡರು. ಶ್ರೀಮಹಾರಾಜರು ತಯಾರಿಗೆ ತೊಡಗಿದರು. ಇಂದಿನವರೆಗೆ ಅವರು ಹತ್ತಾರು ಸಲ ಕಾಶಿಗೆ ಹೋಗಿ ಬಂದಿದ್ದಾರೆ. ಪ್ರತಿಸಲವೂ ಅವರು ಒಬ್ಬರೇ ಕಾಲ್ನಡಿಗೆಯಿಂದ ಹೋಗಿದ್ದರು. ಈ ಸಲ ಮಾತ್ರ ಅವರು ತಮ್ಮೊಂದಿಗೆ ನೂರು ಭಕ್ತ ಬಂಧು - ಭಗಿನಿಯರನ್ನು ಕರಕೊಂಡರು. ಅವರು ರೈಲ್ವೆಯಿಂದ ಹೋಗುವವರಿದ್ದರು. ಅವರ ಪತ್ನೀ ಗಂಗಾಬಾಯಿಯವರನ್ನು ಎಲ್ಲರೂ ಆಯಿ ಸಾಹೇಬ ಎಂದು ಹೇಳುತ್ತಿದ್ದರು. ಅವರನ್ನು ಅವರ ತವರು ಮನೆಗೆ ಕಳಿಸಿದರು. ಮನೆ ಬಿಡುವಾಗ ಶ್ರೀಮಹಾರಾಜರು ಗೃಹ ಮೋಹವನ್ನು ತ್ಯಾಗ ಮಾಡಿದರು. ಮನೆಯ ಮೇಲೆ ತುಳಸೀ ಪತ್ರವನ್ನಿಟ್ಟರು. ಜನರಿಗೆ ಅವರು ಹೇಳಿದರು - ಈಗ ಈ ಮನೆಯಲ್ಲಿದ್ದುದನ್ನು ಯಾರಿಗೆ ಏನು ಬೇಕೋ ಅದನ್ನು ಕೊಂಡು ಹೋಗಿರಿ. ಹದಿನೈದು ನಿಮಿಷದಲ್ಲಿ ಮನೆ ಪೂರ್ಣ ಖಾಲಿಯಾಯಿತು.

ರೈಲು ಪ್ರಯಾಣ ಪ್ರಾರಂಭವಾಯಿತು. ದಾರಿಯಲ್ಲಿ ಅವರು ನಾಸಿಕ - ತ್ರಯಂಬಕೇಶ್ವರ ನೋಡಿದರು. ತಾಯಿಗೆ ತ್ರಿವೇಣಿ ಸಂಗಮದಲ್ಲಿ ಸ್ನಾನ ಮಾಡಿಸಿ, ಅಕ್ಷಯವಟ ತೋರಿಸಿದರು. ತುಂಬಾ ದಾನ ಧರ್ಮ ಮಾಡಿದರು. ಶ್ರೀಮಹಾರಾಜರು ಪ್ರಯಾಗದಿಂದ ಕಾಶಿಯಲ್ಲಿದ್ದ ಮಸೂರಿಯಾದಿನ ಎಂಬ ಭಕ್ತನಿಗೆ ಪತ್ರ ಕಳಿಸಿದರು. ಅವರಿಗೆ ತಾನು ತಾಯಿಯನ್ನು ಕರೆದುಕೊಂಡು ಕಾಶಿಗೆ ಬರುತ್ತಿರುವುದನ್ನು ತಿಳಿಸಿದರು. ಈ ಮಸೂರಿಯಾದೀನ ಶಿವಮಂಗಲನು ಶ್ರೀಮಹಾರಾಜರ ಪರಮ ಭಕ್ತನಾಗಿದ್ದನು. ಅವನ ಮನೆಯಲ್ಲಿ ಪಿಶಾಚ ಬಾಧೆ ಇತ್ತು. ಅದು ಮಹಾರಾಜರಿಂದ ದೂರವಾಗಿ ಅವನ ಸಂತತಿ ಬದುಕಿತು ಎಂದು ಅವನ ಶ್ರದ್ಧೆ ದೃಢವಾಗಿತ್ತು. ಇವನು ಅತಿಶಯ ಶ್ರೀಮಂತನಾಗಿದ್ದನು. ಪ್ರಯಾಗ, ಹರಿದ್ವಾರ, ಗಯಾ, ಜಗನ್ನಾಥ ಪುರೀ ಮುಂತಾದ ಕ್ಷೇತ್ರಗಳಲ್ಲಿ ಅವನ ವ್ಯಾಪಾರೀ ಮಂಡಿಗಳಿದ್ದವು. ಒಬ್ಬ ರಾಜನಂತೆ ಅವನು ಇರುತ್ತಿದ್ದನು. ಶ್ರೀಮಹಾರಾಜರ ಸ್ವಾಗತಕ್ಕಾಗಿ ಅವನು ಸ್ವತಃ ಸ್ಟೇಷನ್ನಿಗೆ ಬಂದಿದ್ದನು. ಭೋಸಲೆಯವರ ಗಂಗಾ ಮಹಲಿನಲ್ಲಿ ಮಹಾರಾಜರ ನಿವಾಸ ವ್ಯವಸ್ಥೆ ಇತ್ತು. ಮಸೂರಿಯಾದೀನ ಸ್ವತಃ ಆಕಡೆ ಗಮನ ಕೊಡುತ್ತಿದ್ದನು.

ಶ್ರೀಮಹಾರಾಜರು ಅಲ್ಲಿ ಸುಮಾರು ಒಂದು ತಿಂಗಳು ವಾಸ್ತವ್ಯವಿದ್ದರು. ಪ್ರತಿದಿನ ಪ್ರಾತಃಕಾಲದಲ್ಲಿ ಅವರು ತಾಯಿಯನ್ನು ಗಂಗಾ ಘಾಟಿಗೆ ಕೊಂಡು ಹೋಗುತ್ತಿದ್ದರು. ಮೆಟ್ಟಿಲುಗಳನ್ನು ಹತ್ತಿ ಇಳಿಯಲು ಆಗದು ಎಂದು ಅವರನ್ನು ಎತ್ತಿಕೊಂಡು ಹೋಗಿ ಬರುತ್ತಿದ್ದರು. ಸ್ನಾನವಾದ ಮೇಲೆ ವಿಶ್ವೇಶ್ವರನ ದರ್ಶನ, ದರ್ಶನದ ಬಳಿಕ ದಾರಿಯಲ್ಲಿನ ಪ್ರತಿಯೊಬ್ಬ ಭಿಕ್ಷುಕರಿಗೆ ದಾನ ಧರ್ಮ ಹೀಗೆ ಕ್ರಮವಿತ್ತು. ಈ ನಿವಾಸ ಕಾಲದಲ್ಲಿ ಐದು ಸಹಸ್ರ ಭೋಜನ, ಮೂರು ಇಚ್ಛಾ ಭೋಜನ, ಮೂರು ಸಂನ್ಯಾಸೀ ಭೋಜನ ಹಾಕಿಸಿದರು. ಊರಿನಲ್ಲಿದ್ದ ಭಿಕ್ಷುಕರಿಗೆ ಐದು ಸಲ ಹೊಟ್ಟೆ ತುಂಬಾ ಊಟ ಹಾಕಿದರು. ತಾಯಿಯ ಕೈಯಿಂದ ವಸ್ತ್ರಗಳು, ಹಣ ಇವನ್ನು ದಾನ ಮಾಡಿಸಿದರು.

ಈ ಅವಧಿಯಲ್ಲಿ ಅನೇಕ ವೈದಿಕ - ಶಾಸ್ತ್ರೀ, ವಿದ್ವಾನ್, ಪಂಡಿತ ಬರುತ್ತಿದ್ದರು. ಶ್ರೀಮಹಾರಾಜರಲ್ಲಿ ಅನೇಕ ಶಂಕೆಗಳನ್ನು ಕೇಳುತ್ತಿದ್ದರು. ಕೆಲವರಾದರೋ ವಾದಕ್ಕೆ ಬರುತ್ತಿದ್ದರು. ಮಹಾರಾಜರು ಎಲ್ಲರನ್ನು ಪ್ರೇಮದಿಂದ ಸ್ವಾಗತಿಸುತ್ತಿದ್ದರು. ಉತ್ತಮ ಆತಿಥ್ಯ ಮಾಡುತ್ತಿದ್ದರು. ಅತಿಶಯ ಸೌಮ್ಯ ಸ್ವರದಲ್ಲಿ ಆದರೆ ದೃಢ ಆತ್ಮ ಸಾಮರ್ಥ್ಯದಿಂದ ನಾಮ ಮಾಹಾತ್ಮ್ಯವನ್ನು ತಿಳಿಸಿ ಕೊಡುತ್ತಿದ್ದರು. ಎಲ್ಲ ವಿದ್ವಾನ್ ಪಂಡಿತರು ನಾಮ ಜಪಿಸತೊಡಗಿದರು. ಶ್ರೀಮಹಾರಾಜರ ಭಕ್ತರಾಗುತ್ತಿದ್ದರು.

□□

-: ಇಪ್ಪತ್ತೆರಡು :-

# ಮಾತೆಯ ಪರಲೋಕ ಗಮನ

ಆತ್ಮಾನಂದ ಸರಸ್ವತೀ ಹೆಸರಿನ ಓರ್ವ ಸಂನ್ಯಾಸಿಗಳು ಆಗ ಕಾಶಿಯಲ್ಲಿ ಇರುತ್ತಿದ್ದರು. ಅವರ ಸ್ವಂತ ಮಠವಿತ್ತು. ಶಿಷ್ಯ ಶಾಖೆಯೂ ದೊಡ್ಡದಾಗಿತ್ತು. ಅವರು ಸಂಸ್ಕೃತದಲ್ಲೇ ಮಾತನಾಡುತ್ತಿದ್ದರು. ತ್ರಿಕಾಲ ಸ್ನಾನ, ಧ್ಯಾನ-ಧಾರಣಾ ಮತ್ತು ಶಿಷ್ಯರಿಗೆ ಶ್ರೀಶಂಕರಾಚಾರ್ಯರ ಶಾರೀರ ಭಾಷ್ಯದ ಪಾಠ ಮಾಡುವುದರಲ್ಲಿ ಅವರ ಎಲ್ಲ ಸಮಯ ಕಳೆಯುತ್ತಿತ್ತು. ಅವರ ಶಿಷ್ಯರಲ್ಲಿ ಒಬ್ಬನು ಶ್ರೀಮಹಾರಾಜರನ್ನು ಭೆಟ್ಟಿಯಾದನು. ಪರಿಣಾಮ ಅವನು ರಾಮನಾಮ ಜಪಿಸತೊಡಗಿದನು. ಆತ್ಮಾನಂದ ಸರಸ್ವತಿಯವರು ಒಂದು ದಿನ ಗಂಗೆಯಿಂದ ಸ್ನಾನ ಮಾಡಿ ತಮ್ಮ ಮಠಕ್ಕೆ ಹಿಂತಿರುಗುತ್ತಿದ್ದರು. ಆಗ ಅವರು ನೋಡಿದರು - ತಮ್ಮ ಒಬ್ಬ ಶಿಷ್ಯ ಕೈಯಲ್ಲಿ ಮಾಲೆ ಹಿಡಿದು ರಾಮನಾಮ ಜಪಿಸುತ್ತಿದ್ದ. ಅವರು ಅದರ ಕುರಿತು ಅವನನ್ನು ಕೇಳಿದರು. ಅವನು ಮಹಾರಾಜರ ಹೆಸರು ಹೇಳಿದನು. ಅವರಿಗೆ ಅದು ರುಚಿಸಲಿಲ್ಲ. ಅವರೆಂದರು - ನನ್ನನ್ನು ಅವರ ಬಳಿಗೆ ಕೊಂಡು ಹೋಗು. ಶ್ರೀಮಹಾರಾಜರಿಗೆ ಗೊತ್ತಿಲ್ಲದೆಯೇ ಇವರಿಬ್ಬರು ಮಹಾರಾಜರ ಬಳಿಗೆ ಬಂದರು. ಆಗಲೇ ಶ್ರೀಮಹಾರಾಜರು ಬಾಬೂ ಭಟ್ಟರನ್ನು ಕರೆಸಿಕೊಂಡರು. ಈ ಬಾಬೂ ಭಟ್ಟರು ಸಂಸ್ಕೃತ ಭಾಷಾ ಪಂಡಿತರೂ, ದಶಗ್ರಂಥಿಯಾಗಿದ್ದರು. ಆತ್ಮಾನಂದ ಸರಸ್ವತಿ ಮತ್ತು ಅವರ ಶಿಷ್ಯ ಗಂಗಾ ಮಹಲಿಗೆ ಬಂದು ತಲುಪಿದಾಗ ಶ್ರೀಮಹಾರಾಜರು ತಮ್ಮ ಮಾತೆಯ ಕೈ ತೊಳೆಯುತ್ತಿದ್ದರು. ಆಗಲೇ ಆಕೆಯ ಊಟವಾಗಿತ್ತು. ಈ ದೃಶ್ಯದಿಂದ ಆತ್ಮಾನಂದ ಸರಸ್ವತಿಯರು ನಡುಗಿ ಹೋದರು. ಅವರಿಗೆ ತಮ್ಮ ತಾಯಿಯ ನೆನಪಾಯಿತು. ಅವರ ಕಣ್ಣುಗಳಲ್ಲಿ ನೀರು ತುಂಬಿದವು. ತಾಯಿಯನ್ನು ಹಾಸಿಗೆಯಲ್ಲಿ ಮಲಗಿಸಿ ಶ್ರೀಮಹಾರಾಜರು ಬಂದರು. ಮಹಾರಾಜರ ಮತ್ತು ಆತ್ಮಾನಂದ ಸರಸ್ವತಿಯರ ಸಂವಾದ ಪ್ರಾರಂಭವಾಯಿತು. ಬಾಬೂ ಭಟ್ಟರು ಶ್ರೀಮಹಾರಾಜರ ಮರಾಠಿಯನ್ನು ಸಂಸ್ಕೃತದಲ್ಲಿ ಹೇಳುತ್ತಿದ್ದ ಮತ್ತು

ಆತ್ಮಾನಂದರ ಸಂಸ್ಕೃತವನ್ನು ಮಹಾರಾಜರಿಗೆ ಮರಾಠಿಯಲ್ಲಿ ಹೇಳುತ್ತಿದ್ದ. ಸಂವಾದ ಪ್ರಾರಂಭವಾಯಿತು.

ರಾಮನಾಮದ ಮಹತ್ವವೇನು?

ರಾಮನಾಮವು ಎಲ್ಲ ಸಾಧನೆಯಲ್ಲಿ ಸುಲಭ ಮಾರ್ಗವಾಗಿದೆ. ಇದಕ್ಕೆ ಖರ್ಚು ಇಲ್ಲ. ಸ್ಥಳ - ಕಾಲ ಇವುಗಳ ಬಂಧನವಿಲ್ಲ. ಯಾರೇ ಭಕ್ತನು ಅದನ್ನು ಸಹಜವಾಗಿ ಮಾಡಬಲ್ಲನು. ಈ ನಾಮದಿಂದ ಅನೇಕ ಹಿರಿಯ - ಕಿರಿಯ ಜನರ ಉದ್ಧಾರವಾದ ಪುರಾವೆ ಇತಿಹಾಸದಲ್ಲಿ ಇದೆ.

ಈ ಸಾಧನೆ ಮಾಡುತ್ತಿರುವಾಗ ಯಾವುದಕ್ಕೆ ಗಮನ ಕೊಡಬೇಕು?

ನಾಮ ಕೊಂಡಾಡುವಾಗ ವಿಷಯ ವಿಚಾರ ಮಾಡಬಾರದು. ಭಗವಂತನಿಗೆ ವಿಷಯದ ಮೈಲಿಗೆ ನಡೆಯುವುದಿಲ್ಲ.

ಉದಾಹರಣೆ ಹೇಳಬಲ್ಲಿರಾ?

ಸಂನ್ಯಾಸಿಗೆ ಊಟದಲ್ಲಿ ಬೆಳ್ಳುಳ್ಳಿ ಇದ್ದ ಹಾಗೆ.

ಇದಕ್ಕೆ ಶುದ್ಧಿಯ ಉಪಾಯವೇನು?

ಅರ್ಥಾತ್ ರಾಮನಾಮ.

ಆತ್ಮಾನಂದರಿಗೆ ವಿಲಕ್ಷಣ ವಿಸ್ಮಯವಾಯಿತು. ಹಿಂದಿನ ರಾತ್ರೆ ಅವರು ಸ್ವಪ್ನದಲ್ಲಿ ಬೆಳ್ಳುಳ್ಳಿ ತಿಂದಿದ್ದರು. ಶ್ರೀಮಹಾರಾಜರು ಅಂತರ್ಜ್ಞಾನದಿಂದ ತಿಳಿದಿದ್ದರು. ಆದರೆ ಸ್ನಾನ ಶರೀರದ್ದು ಮತ್ತು ವಿಷಯ ಮನಸ್ಸಿನದ್ದು. ಆತ್ಮಾನಂದ ಸರಸ್ವತಿಯರು ಅಂದಿನಿಂದ ಶ್ರೀಮಹಾರಾಜರ ಶಿಷ್ಯರಾದರು. ರಾಮನಾಮದ ದೀಕ್ಷೆ ಪಡೆದರು. ಶ್ರೀಮಹಾರಾಜರು ಅವರಿಗೆ ದೀಕ್ಷೆ ಕೊಡುವ ಅಧಿಕಾರವನ್ನು ಕೊಟ್ಟರು.

ಒಂದು ದಿನ ಬೆಳಿಗ್ಗೆ ಕಾಶಿಯಲ್ಲಿನ ಎಲ್ಲ ಭಿಕ್ಷುಕರಿಗೆ ಊಟ ಹಾಕಬೇಕೆಂದು ಮಹಾರಾಜರ ಮನಸ್ಸಿಗೆ ಬಂತು. ಡಂಗುರ ಸಾರಿ ಎಲ್ಲ ಭಿಕ್ಷುಕರನ್ನು ಕರೆಸಿಕೊಂಡರು. ಮನೆಯಲ್ಲಿ ಸಾಮಾನು ಎಷ್ಟಿದೆ ಎಂದು ನೋಡಿದರೆ ಒಂದು ಸೇರು ಅಕ್ಕಿ ಮತ್ತು ಅರ್ಧ ಸೇರು ಬೇಳೆ ಇತ್ತು. ಆಗ ಹೊಸ ಸಾಮಾನು ತರಲು ಹಣವೂ ಇರಲಿಲ್ಲ. ನನಗೆ ಯಾರ ಕಡವು ಬೇಡ ಮತ್ತು ಸಾಲವೂ ಬೇಡ ಎಂದು ಹೇಳಿ ಅವರು ಇದ್ದ ಧಾನ್ಯದ ಅನ್ನ - ಸಾರು ತಯಾರಿಸಿದರು. ಎರಡೂ ಪದಾರ್ಥಗಳಲ್ಲಿ ಮಹಾರಾಜರು ಶ್ರೀರಾಮನಾಮದ ತೀರ್ಥ ಹಾಕಿದರು. ಸಂಜೆ ನಾಲ್ಕು ಗಂಟೆವರೆಗೆ ಸಾವಿರದ ಇನ್ನೂರು ಭಿಕ್ಷುಕರು ಊಟ ಮಾಡಿದರು. ಮತ್ತೆ ಮಹಾರಾಜರು ಅಡಿಗೆ ಮನೆಗೆ ಬಂದು ನೋಡಿದರೆ ಪಾತ್ರೆಗಳಲ್ಲಿ ಒಂದು ಸೇರಿನ ಅನ್ನ ಮತ್ತು ಅರ್ಧ ಸೇರಿನ ಸಾರು ಎರಡೂ ಹಾಗೆಯೇ ಉಳಿದಿತ್ತು.

ಆಗ ಶಾಂತಾಶ್ರಮಸ್ವಾಮೀ ಕಾಶಿಯಲ್ಲೇ ಇದ್ದರು. ಅವರು ಮಹಾರಾಜರನ್ನು ಭೆಟ್ಟಿಯಾದರು ಹಾಗೂ ಅವರು ಮಹಾರಾಜರೊಂದಿಗೆ ಇರತೊಡಗಿದರು. ಶಾಂತಾಶ್ರಮ ಸ್ವಾಮೀ ಮಹಾ ತಪಸ್ವಿಗಳಾಗಿದ್ದರು. ಅವರು ಕಾಶಿಯಲ್ಲಿ ಹನ್ನೆರಡು ವರ್ಷ ಉಳಕೊಂಡಿದ್ದರು. ಸಂಪೂರ್ಣ ಹನ್ನೆರಡು ವರ್ಷ ಅವರು ಮೌನ ವ್ರತದಲ್ಲೇ ಕಳೆದರು ಮತ್ತು ಹದಿಮೂರು ಕೋಟಿಯ ರಾಮನಾಮದ ಸಂಕಲ್ಪ ಪೂರ್ಣಗೊಳಿಸಿದ್ದರು. ಅವರು ಅತಿಶಯ ಭಾವ ಭಕ್ತಿಯಿಂದ ಮತ್ತು ಮಧುರ ಕಂಠದಿಂದ ಭಜನೆ ಮಾಡುತ್ತಿದ್ದರು. ಅವರ ಭಜನೆಯಲ್ಲಿ ಸ್ವಯಂ ಶ್ರೀರಾಮನು ತಲೆದೂಗುತ್ತಿದ್ದ. ಸ್ವಾಮಿ ಮತ್ತು ಶ್ರೀಮಹಾರಾಜರು ಪರಸ್ಪರ ಗೌರವಿಸುತ್ತಿದ್ದರು. ಒಂದು ದಿನ ಸ್ವಾಮಿಗಳು ಮಹಾರಾಜರನ್ನು ಕೇಳಿದರು – ಭಾರತದಿಂದ ಅಕ್ಷರಶಃ ಲಕ್ಷಗಟ್ಟಳೆ ಜನರು ಕಾಶಿಗೆ ಬಂದು ಗಂಗಾಸ್ನಾನ ಮಾಡುತ್ತಾರೆ ಮತ್ತೆ ಅವರು ಪಾವನ ಶುದ್ಧರೇಕೆ ಆಗುವುದಿಲ್ಲ? ಶ್ರೀಮಹಾರಾಜರು ಹೇಳಿದರು – ಅವರಿಗೆ ದೃಢ ಶ್ರದ್ಧೆ ಇರುವುದಿಲ್ಲ. ಆಗ ಸ್ವಾಮಿಗಳು ಹೇಳಿದರು – ಹೀಗೆ ಹೇಗೆ ? ಇಷ್ಟು ಹಣ ಖರ್ಚು ಮಾಡಿ, ಸಮಯ ವ್ಯರ್ಥ ಮಾಡಿ, ಕಷ್ಟ ಪಟ್ಟು ಜನರು ಇಲ್ಲಿಗೆ ಬರುತ್ತಾರೆ. ಅವರಿಗೆ ದೃಢ ಶ್ರದ್ಧೆ ಇಲ್ಲ ಎಂದು ಹೇಗೆ ಹೇಳಬಹುದು? ಶ್ರೀಮಹಾರಾಜರು ಹೇಳಿದರು – ಬೇಗನೇ ತಿಳಿದೀತು.

ನಾಲ್ಕೈದು ದಿನಗಳ ಬಳಿಕ ಶ್ರೀಮಹಾರಾಜರು ಶಾಂತಾಶ್ರಮ ಸ್ವಾಮಿಗಳ ಕೈಕಾಲುಗಳಿಗೆ ಚಿಂದಿ ಸುತ್ತಿದರು. ಅವರಿಗೆ ಮಹಾರೋಗಿಯ ರೂಪ ಕೊಟ್ಟರು. ಜನರು ಸ್ನಾನ ಮಾಡುತ್ತಿದ್ದ ಆ ಗಂಗಾ ಘಾಟಿನಲ್ಲಿ ಕೊಂಡು ಹೋಗಿ ಕುಳ್ಳಿರಿಸಿದರು. ಶ್ರೀಮಹಾರಾಜರು ಸ್ವತಃ ಬೈರಾಗಿಯ ವೇಷ ಧರಿಸಿದರು. ಶ್ರೀಮಹಾರಾಜರು ಜನರನ್ನು ಕೂಗಿ ಹೇಳತೊಡಗಿದರು. ಕೇಳಿರಿ, ಕೇಳಿ ! ಇವನು ನನ್ನ ತಮ್ಮನಿದ್ದಾನೆ. ಇವನಿಗೆ ಮಹಾ ರೋಗವಾಗಿದೆ. ಗಂಗೆಯಲ್ಲಿ ಸ್ನಾನ ಮಾಡಿ ಶುದ್ಧವಾದ ಬಳಿಕ ಇವನನ್ನು ಯಾರಾದರು ಆಲಿಂಗಿಸಿದರೆ ಇವನ ರೋಗ ಹೊರಟು ಹೋದೀತು ಎಂದು ವಿಶ್ವೇಶ್ವರನು ವಿಧಾನ ಮಾಡಿರುವನು. ಇದು ಸಾಕ್ಷಾತ್ ವಿಶ್ವೇಶ್ವರನ ವರದಾನವಿದೆ. ಕೆಲವರು ಮುಂದೆ ಬಂದರು, ಅವರಿಗೆ ಮಹಾರಾಜರು ಹೇಳಿದರು – ನಿಮ್ಮಲ್ಲಿ ಯಾರೇ ಆಗಲೀ ಗಂಗಾಸ್ನಾನ ಮಾಡಿ ಇವನನ್ನು ಆಲಿಂಗಿಸಬೇಕು. ಆಲಿಂಗನ ಕೊಟ್ಟ ಮೇಲೆ ಆ ವ್ಯಕ್ತಿಗೆ ಮಹಾರೋಗ ಬಂದೀತು. ಆದರೆ ಗಾಬರಿ ಪಡಬೇಡಿ, ಪುನಃ ಅವನು ಶ್ರದ್ಧೆಯಿಂದ ಗಂಗಾಸ್ನಾನ ಮಾಡಿದರೆ ಅವನ ರೋಗ ಹೊರಟು ಹೋದೀತು. ಮುಂದೆ ಬಂದ ಜನರು ಹಿಂದೆ ಸರಿದರು. ಅಲ್ಲಿ ಒಬ್ಬ ಹಳ್ಳಿಯ ರೈತ ಬಂದಿದ್ದ. ಅವನು ಮಹಾರಜರ ಡಂಗುರ

ಕೇಳಿದ. ಅವನು ಗಂಗೆಗೆ ಹಾರಿದ, ಸ್ನಾನ ಮಾಡಿ ಮೇಲಕ್ಕೆ ಬಂದು, ಮಹಾರಾಜರು ಕುಳ್ಳಿರಿಸಿದ ಮಹಾ ರೋಗಿಯನ್ನು ದೃಢವಾಗಿ ಆಲಿಂಗಿಸಿದ. ಪುನಃ ಅವನು ಗಂಗೆಗೆ ಹಾರಿದ. ಆ ರೈತ ತರುಣನಾಗಿದ್ದ. ಮುಂದೆ ಅವನು ಗೊಂದವಲೆಗೆ ಬಂದು ಶ್ರೀಮಹಾರಾಜರ ದರ್ಶನ ಪಡೆದ. ಶಾಂತಾಶ್ರಮ ಸ್ವಾಮಿಗಳಿಗೆ ದೃಢ ಶ್ರದ್ಧೆಯ ಪರಿಣಾಮ ಉದಾಹರಣ ಸಹಿತ ತಿಳಿಯಿತು.

ಕಾಶೀ ಕ್ಷೇತ್ರಕ್ಕೆ ಬಂದು ಒಂದೂವರೆ ತಿಂಗಳಾಗಿತ್ತು. ಶ್ರೀಮಹಾರಾಜರು ತಾಯಿಯನ್ನು ಕರೆದುಕೊಂಡು ಗಯೆಗೆ ಹೋದರು. ಅಲ್ಲಿ ಪಿಂಡದಾನ ಮಾಡಿ, ಎಲ್ಲರೂ ಅಯೋಧ್ಯೆಗೆ ಬಂದರು. ಈಗ ಗೀತಾಬಾಯಿಗೆ ಆಯಾಸವಾಗಿತ್ತು. ಊಟ ನಿಲ್ಲಿಸಿ ಕೇವಲ ಹಾಲು ಕುಡಿಯತೊಡಗಿದರು, ನಾಮಸ್ಮರಣೆ ಮಾತ್ರ ಸತತ ನಡೆಯುತ್ತಿತ್ತು. ಈಗ ಅವರಿಗೆ ತನ್ನ ಮೃತ್ಯು ಹತ್ತಿರ ಬಂದಿದೆ ಎಂದು ಅನಿಸಿತು. ಶರಯೂ ನದಿಯಲ್ಲಿ ಸ್ನಾನ ಮಾಡಿ, ಶ್ರೀರಾಮರಾಯನ ದರ್ಶನ ಮಾಡಿ ಮತ್ತೆ ದೇಹ ಬಿಡಬೇಕು ಎಂಬ ಇಚ್ಛೆ ಅವರು ಮಹಾರಾಜರಿಗೆ ತಿಳಿಸಿದರು. ಅವರ ಇಚ್ಛೆಗನುಸಾರ ಶ್ರೀಮಹಾರಾಜರು ಆಕೆಗೆ ಶರಯೂ ನದಿಯಲ್ಲಿ ಸ್ನಾನ ಮಾಡಿಸಿದರು. ಘಟ್ಟಕ್ಕೆ ಒಂದು ಹಾಸಿಗೆ - ದಿಂಬು ತರಿಸಿದರು. ತಾಯಿಯನ್ನು ದಿಂಬಿಗೆ ಒರಗಿ ಹಾಸಿಗೆಯಲ್ಲಿ ಕುಳ್ಳಿರಿಸಿದರು. ಶ್ರೀಮಹಾರಾಜರು ತಾಯಿಗೆ ಹೇಳಿದರು - ಅಮ್ಮಾ ! ಹಾಸಿಗೆ ಅಡಿಯಲ್ಲಿ ಹಣವಿದೆ, ಮನಸೋಕ್ತ ದಾನ ಧರ್ಮ ಮಾಡು. ತಾಯಿಯು ಹಾಸಿಗೆ ಅಡಿಗೆ ಕೈ ಹಾಕಿದಾಗ ಕೈಗೆ ಹಣ ಬಂತು. ಅವರು ಧಾರಾಳ ದಾನ ಮಾಡಿದರು. ಅವರು ವಿಸ್ಮಯದಿಂದ ಹೇಳಿದರು - ಈ ವಿದ್ಯೆ ನಿನ್ನ ಬಳಿ ಇದೆ ಎಂದು ನೀನು ಎಂದೂ ನನಗೆ ಹೇಳಲಿಲ್ಲ. ಮಹಾರಾಜರೆಂದರು ಈ ವಿದ್ಯೆಯ ಉಪಯೋಗ ಸ್ವಂತಕ್ಕಾಗಿ ಮಾಡಬಾರದು ಎಂದು ಹೇಳಲಿಲ್ಲ.

ದಾನ ಧರ್ಮದ ಇಚ್ಛೆ ಪೂರ್ಣವಾದಾಗ ಶ್ರೀಮಹಾರಾಜರು ಅಮ್ಮನನ್ನು ಎತ್ತಿಕೊಂಡು ಮನೆಗೆ ತಂದರೂ ರಾಮನಿಗೆ ನೈವೇದ್ಯ ಮಾಡಿದರು. ಊರಿಗೆ ಊಟ ಹಾಕಿದರು. ಅದರಲ್ಲಿನ ಸ್ವಲ್ಪ ಪ್ರಸಾದ ತಾಯಿಗೆ ತಿನ್ನಿಸಿದರು. ಕೊನೆಗೆ ತಾಯಿ ಹೇಳಿದರು - ನನಗೆ ನಿನ್ನ ತೊಡೆಯಲ್ಲಿ ತಲೆಯಿಟ್ಟು ಮಲಗುತ್ತೇನೆ. ಅಲ್ಲೇ ನಾನು ರಾಮನಾಮ ಜಪಿಸುತ್ತಾ ನಿಜಧಾಮಕ್ಕೆ ಹೋಗುವೆನು. ಹಾಗೆಯೇ ಶ್ರೀಮಹಾರಾಜರು ತಮ್ಮ ತಾಯಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡರು. ರಾಮನಾಮ ಹೇಳುತ್ತಾ - ಹೇಳುತ್ತಾ ಆಕೆ ದೇಹ ಬಿಟ್ಟಳು. ಮಹಾರಾಜರಿಗೆ ಪರಮ ದುಃಖವಾಯಿತು. ಅವರ ಕಣ್ಣುಗಳಿಂದ ಅಶ್ರುಧಾರೆ ಹರಿಯಿತು, ಬಾಯಿಂದ ಅಭಂಗ ಪ್ರಕಟವಾಗತೊಡಗಿದವು.

1. ದಯಾಕರೀ ರಾಮ ಸೀತಾ । ಸಾಂಭಾಳಾವೀ ಮಾಝೀ ಮಾತಾ ॥
ದಯಾಕರೀ ಶರಯೂಬಾಯಿ । ಮುಕ್ತಕರಿ ಮಾಝಿ ಆಯಿ ॥
ಹನುಂತಾ ಕೃಪಾ ವ್ಹಾವೀ । ಮಾಝೀ ಮಾಯ ಪದೀ ನ್ಯಾವೀ ॥
ಶಿವರೂಪೀ ಬ್ರಹ್ಮ ಗಾ ಮೀ । ಆಯೀವರ ಕೃಪಾಕರಾ ತುಮ್ಹೀ ॥
ಲೋಳೆ ದೇವಾಚೆ ಮೀ ಪಾಯೀ । ಮುಕ್ತಕರಾ ಮಾಝೀ ಆಯೀ ॥
ಆಯಿಚೆ ದೋಷ ಮಾಝೇ ಮಾಥೀ । ಯೆವಢೀ ಐಕಾವೀ ವಿನಂತೀ ॥
ದಾಸಮ್ಹಣೆ ರಘುವೀರಾ । ಮಾಝೀ ಆಯೀ ಮುಕ್ತಕರಾ ॥

2. ಆತಾಕೋಠೇರಾಹೂಕೋಠೇ ಜಾವು । ಆಯಿ ತುಲಾ ಕೋಠೇ ಪಾಹೂ ॥
ತುಮ್ಹೀ ಜನ್ಮ ಮಜ ದಿಲಾ । ಆಜ ಕಂಟಾಳಾ ಹೋ ಕೇಲಾ ॥
ಸರ್ವ ಸುಖ ತುಝೇ ಪಾಯೀ । ಕೋಠೆ ಸೋಡೂನ ಗೇಲಿ ಆಯೀ ॥
ಹರಿಣೀ ಪಾಡಸ ಚುಕಲೀ । ಮಜ ವೇಳ ತೈಸೀ ಆಲೀ ॥
ಮಾಝೆ ದೈವ ಕಮೀ ಝಾಲೆ । ತುಜ ದೇವೆ ಬೋಲಾವಿಲೆ ॥
ದಾಸಮ್ಹಣೇ ಮಾಝಾ ಪ್ರಾಣ । ತುಜವೀಣ ಝಾಲಾ ದೀನ ॥

3. ಅಯೋಧ್ಯಾಪುರೀಚೀ ಹೀ ಥೋರೀ । ಸ್ವರ್ಗದ್ವಾರ ಶರಯೂ ತೀರೀ ॥
ತೇಥೇ ಮಾತೇಸೀ ಆರಾಮ ಝಾಲಾ । ಮಜ ರಾಮ ವಿಸರಲಾ ॥
ಹಾ ವಿಯೋಗ ನ ಪಾಹಾವೆ ಡೋಳಾ । ಆಲಾ ದೇಹಾಚಾ ಕಂಟಾಳಾ ॥
ದಾಸಮ್ಹಣೇ ತುಮ್ಹೀ ಗೇಲಾ । ತೇಥೆ ನಾಹೀ ನೇಲೇ ಮಲಾ ॥

4. ಆಯೀಚ್ಯಾಪೋಟಿ ಜನ್ಮಾ ಆಲೋ । ಕಾಂಹಿ ಉತ್ತೀರ್ಣ ನಾಹೀ ಝಾಲೋ ॥
ಆಯೀ ಫಾರ ವ್ಯಾಕುಲಳ ಝಾಲೀ । ತಿಚಿದಯಾ ನಾಹೀ ಆಲೀ ॥
ಸೋಡೂನಿಯಾ ಆಯಿಬಾಪಾ । ತೀರ್ಥಾ ಜಾವುನ ಕರೀಪಾಪಾ ॥
ಆತಾ ಆಯೀ ರಾಗಾವಲೀ । ಮಜ ಸೋಡೊನಿಯಾ ಗೇಲೀ ॥
ಮಾಸಾ ಮಾಜೇ ಭಾನುವಾರ ದಿವಶೀ । ಆಯಿಗೇಲಿ ವೈಕುಂಠಾಸೀ ॥
ದೀನದಾಸ ಮ್ಹಣೆ ಆಯೀ ಗೇಲೀ । ಆತಾ ದಯಾ ನಾಹೀ ಆಲೀ ॥

ಶ್ರೀ ಮಹಾರಾಜರ ತಾಯಿ ಮಾರ್ಗಶೀರ್ಷ ಶುದ್ಧ ಸಪ್ತಮಿ ಭಾನುವಾರದಂದು ನಿಜಧಾಮಕ್ಕೆ ಹೋದರು. ಹಿಂದಿನ ದಿನ ಅವರು ಮುಕ್ತ ಹಸ್ತದಿಂದ ದಾನ ಮಾಡಿದ್ದರು.

ತುಂಬಾ ಜನ ಸೇರಿದ್ದರು. ತಾಳ - ಮೃದಂಗದೊಂದಿಗೆ ರಾಮನಾಮದ ಸಂಕೀರ್ತನ ವಾಯಿತು. ಮಹಾರಾಜರು ಅಂತ್ಯಸಂಸ್ಕಾರ ಮಾಡಿದರು.

**ಸಾಧು ಸಂತ ವಾಖಾಣಿತೀ । ಧನ್ಯ ಧನ್ಯ ಮಾತಾ ಮ್ಹಣತೀ ॥**
**ತುಳಸೀ ಪುಷ್ಪಾಂಚೆ ಹೇ ಹಾರ । ನಾಮಗರ್ಜತಿ ಅಪಾರ ॥**
**ತೇಜ ಅಲೆ ಬಹು ಫಾರ । ಮುಖ ಪಾಹಾತೀ ನಾರೀನರ ॥**
**ವಾದ್ಯೆವಾಜತೀ ಝುಣತ್ಕಾರ । ಹೋತೋ ನಾಮಾಚಾಗಜರ ॥**
**ಮಾಗೇ ಪುಢೇ ಸಾಧು ಮೇಳಾ । ಕಾಯ ಮೌಜೇಚಾ ಸೋಹಳಾ ॥**
**ದಾಸ ದುಃಖೀ ದೇಹ ಧಾರೀ । ಅಂತರೀ ಆನಂದಾಚ್ಯಾ ಲಹರಿ ॥**

ಮೂರನೇ ದಿನದಿಂದ ಹತ್ತನೆಯ ದಿನದವರೆಗೆ ನಾಮ ಸಪ್ತಾಹ, ಮತ್ತೆ ಉತ್ತರ ಕ್ರಿಯೆ ಆರಂಭ, ಶ್ರೀಮಹಾರಾಜರು ಪ್ರಚಂಡ ದಾನ ಧರ್ಮ ಮಾಡಿದರು. ನೂರು ವೈದಿಕರಿಗೆ ವಸ್ತ್ರ - ಪಾತ್ರೆ - ಕೊಟ್ಟರು. ಬಡವರಿಗೆ ಅನ್ನದಾನ ಮಾಡಿದರು. ನೂರು ಗೋವುಗಳನ್ನು ದಾನ ಮಾಡಿದರು. ನೂರು ಮುತ್ತೈದೆಯರಿಗೆ ಸೀರೆ ಕೊಟ್ಟರು. ಪ್ರತಿಯೊಬ್ಬ ಭಿಕ್ಷುಕರಿಗೆ ಒಂದೊಂದು ಕಂಬಳಿ ಕೊಟ್ಟರು.



-: ಇಪ್ಪತ್ತಮೂರು :-

# ಮರ್ಮಜ್ಞಾನೀ ಶ್ರೀಮಹಾರಾಜರು

ಶ್ರೀಮಹಾರಾಜರು ತಾಯಿಯ ಉತ್ತರ ಕಾರ್ಯ ಮಾಡಿದರು. ಅನಂತರ ಅವರು ಜೊತೆಗಿನ ಜನರೊಂದಿಗೆ ಇಂದೋರಿಗೆ ಬಂದರು. ಅವರಿಗೆ ಜೀಜೀಬಾಯಿಯ ನೆನಪಾಯಿತು. ಅವರು ನಿಜಧಾಮಕ್ಕೆ ಹೋಗಿದ್ದರು. ಶ್ರೀಮಹಾರಾಜರ ಮುಕ್ಕಾಂ ಭಯ್ಯಾ ಸಾಹೇಬ ಮೋಡಕರವರ ಮನೆಯಲ್ಲಿ ಇತ್ತು. ಮೊದಲಿನಿಂದಲೂ ಅವರೊಂದಿಗೆ ಇದ್ದ ಮಂಡಳಿಯ ಅನೇಕರನ್ನು ಮಹಾರಾಜರು ಹಿಂದಕ್ಕೆ ಕಳಿಸಿದರು. ಇನಾಮದಾರ ಭೆಟ್ಟಿಯಾದರು. ಅವರ ಮಗಳು ತಾಯಿ ಭೆಟ್ಟಿಯಾದರು. ದಿವಾಣ ಪಳಶೀಕರರ ಪತ್ನೀ ಭೆಟ್ಟಿಯಾಯಿತು. ತುಕೋಜೀರಾವ್ ಇಲ್ಲದಿದ್ದರಿಂದ ಅವರು ಭೆಟ್ಟಿಯಾಗಲಿಲ್ಲ. ಅವರ ಪತ್ನೀ ಭೆಟ್ಟಿಯಾದರು. ಗೋದೂತಾಯಿ ಭೆಟ್ಟಿಯಾದರು. ನಾಲ್ಕು ವರ್ಷದವಳಿದ್ದಾಗ ತಂದೆ ತಾಯಂದಿರೊಂದಿಗೆ ಮಹಾರಾಜರ ದರ್ಶನಕ್ಕಾಗಿ ಬಂದಿದ್ದಳು. ಶ್ರೀಮಹಾರಾಜರು ಅವಳನ್ನು ಮುದ್ದಿನಿಂದ ಅಂಬೆಹಳದ ಎಂದು ಹೇಳುತ್ತಿದ್ದರು. ಇವಳಿಗೆ ಮಹಾರಾಜರು ಆಗಲೇ ಎಲ್ಲ ಆಸನ ಕಲಿಸಿದ್ದರು. ಅವಳು ಅವನ್ನು ಮಾಡಿ ತೋರಿಸುತ್ತಿದ್ದಳು.

ಮಹಾರಾಜರು ಇಂದೋರಿಗೆ ಬಂದ ವಾರ್ತೆ ಹರಡಿತು. ಅವರ ಕೀರ್ತಿ ಇಂದೋರಕರ್‌ರಿಗೆ ಗೊತ್ತಿತ್ತು. ಮಧ್ಯಭಾರತದ ಅನೇಕ ಜನರು ದರ್ಶನಕ್ಕಾಗಿ ಬರತೊಡಗಿದರು. ಶ್ರೀ ಮಹಾರಾಜರು ಅವರನ್ನು ನಾಮಸ್ಮರಣೆಗಾಗಿ ಕುಳ್ಳಿರಿಸತೊಡಗಿದರು. ರಾಮನಾಮದ ಸಂಕೀರ್ತನೆ ನಡೆಯತೊಡಗಿತು. ಒಂದು ದಿನ ಭಯ್ಯಾ ಸಾಹೇಬರ ಮನೆಗೆ ದೊಡ್ಡ ಗೃಹಸ್ಥರು ಬಂದರು. ದೊಡ್ಡದೆಂದರೆ ಅವರು ಅಬಕಾರಿ ಅಧಿಕಾರಿಗಳಾಗಿದ್ದರು. ಅವರಿಗೆ ತಮ್ಮ ಅಧಿಕಾರದ ಭಾರೀ ಗರ್ವ ಇತ್ತು. ಅವರು ಬಡವರು, ಸ್ತ್ರೀಯರು ತೊಂದರೆಯಲ್ಲಿದ್ದವರು ಇವರೊಂದಿಗೆ ದುರ್ವರ್ತನೆ ಮಾಡುತ್ತಿದ್ದರು. ಬಹಳ ಸೊಕ್ಕಿನ ವ್ಯಕ್ತಿಯಾಗಿದ್ದರು. ಅವರು ಮಹಾರಾಜರ ಕೀರ್ತಿ

ಕೇಳಿದ್ದರು. ಅವರು ಅವರನ್ನು ಭೆಟ್ಟಿಯಗಲು ಬಂದರು. ಎಲ್ಲ ಶ್ರದ್ಧೆಯುಳ್ಳ ಜನರು ನಾಮ ಸ್ಮರಣೆ ಮಾಡುತ್ತಿದ್ದರು. ಅವರು ಅವರ ಪರಿಹಾಸ್ಯ ಮಾಡುವ ಪ್ರಯತ್ನ ಮಾಡಿದನು, ಮಹಾರಾಜರಲ್ಲಿ ಅವನು ಹೇಳಿದ - ನಿಮ್ಮ ಈ ಡೊಂಗಿತನ ನಿಮ್ಮಲ್ಲೇ ಇಟ್ಟುಕೊಳ್ಳಿ, ಇಲ್ಲಿ ಇದೆಲ್ಲ ನಡೆಯಲಾರದು, ಗಮನದಲ್ಲಿ ಇಡಿ! ಇಲ್ಲಿ ನಮ್ಮೊಂದಿಗೆ ಸಂಬಂಧ ಇದೆ, ಮಹಾರಾಜರು ಶಾಂತವಾಗಿ ಹೇಳಿದರು - ನೀವು ನಿಜವನ್ನೇ ಹೇಳುವಿರಿ, ಆದರೆ ನಡೆಯಲಾರದು ಯಾರದು? ಇದೊಂದು ಪ್ರಶ್ನೆಯಾಗಿದೆ. ಅವನೆಂದ - ತನ್ನನ್ನು ಸಾಧು ಎಂದು ಹೇಳಿಕೊಳ್ಳುವಿರಿ, ನನ್ನ ಭವಿಷ್ಯ ಹೇಳಬಲ್ಲಿರಾ? ಮಹಾರಾಜರು ಹೇಳಿದರು - ನಾವು ರಾಮದಾಸಿಯಾಗಿದ್ದೇವೆ, ರಾಮ ನಾಮ ಸ್ಮರಿಸುವುದಷ್ಟೇ ನಾವು ತಿಳಿಯುತ್ತೇವೆ, ಇದಕ್ಕಿಂತ ಬೇರೆ ಜ್ಞಾನ ನಮಗಿಲ್ಲ, ನಿಮ್ಮ ಭವಿಷ್ಯವಲ್ಲವೇ ! ಈ ಗೋದುತಾಯಿ ಹೇಳುವಳು. ಮಹಾರಾಜರು ಗೋದುತಾಯಿಗೆ ಹೇಳಿದರು - ಗೋದೂ ತಾಯಿ! ಈ ರಾವ ಸಾಹೇಬರಿಗೆ ಅವರ ಭವಿಷ್ಯ ಕೇಳುವುದಿದೆ, ಹೇಳು ಮಗು ! ಗೋದು ಪದ್ಮಾಸನ ಹಾಕಿ, ಕಣ್ಣು ಮುಚ್ಚಿಕೊಂಡಳು, ಅವಳು ರಾವಸಾಹೇಬರ ಭವಿಷ್ಯ ಹೇಳತೊಡಗಿದಳು- ಇದಂದಿನಿಂದ ಎಂಟುದಿನಗಳಲ್ಲಿ ನಿಮ್ಮ ಇಬ್ಬರೂ ಮಕ್ಕಳೂ ಸಾಯುವರು, ಹದಿನೈಯ್ದು ದಿನಗಳಲ್ಲಿ ನಿಮ್ಮ ಪತ್ನೀ ಸಾಯುವರು, ನಿಮ್ಮ ಮೇಲೆ ಸರಕಾರಿ ಆರೋಪವೂ ಬಂದೀತು. ಗೋದು ಈ ಭವಿಷ್ಯ ಹೇಳಿದಳು. ಆ ಹೆಣ್ಮಗುವಿಗೆ ಅವನು ನಕ್ಕು ಹೊರಟು ಹೋದ. ಮನಸ್ಸಿನಲ್ಲಿ ಮಾತ್ರ ಅವನು ಹೆದರಿದ್ದರು. ಸರಿಯಾಗಿ ಎಂಟನೆಯದಿನ ಅವರ ಇಬ್ಬರೂ ಮಕ್ಕಳು ಆಡಲಿಕ್ಕೆ ಹೋದವರು ಪ್ರವಾಹದಲ್ಲಿ ಬಿದ್ದು ಸತ್ತು ಹೋದರು, ಪುತ್ರ ವಿರಹದಿಂದ ಅವರ ಹೆಂಡತಿ ಹುಚ್ಚಳಾದಳು ಮತ್ತು ಹದಿನೈಯ್ದು ದಿನಗಳಲ್ಲಿ ಅವಳು ಬಾವಿಗೆ ಹಾರಿ ಆತ್ಮ ಹತ್ಯೆ ಮಾಡಿಕೊಂಡಳು. ಅವರು ಸರಕಾರದ ಹಣ ನುಂಗಿದ್ದ, ಭ್ರಷ್ಟಾಚಾರ ಮಾಡಿದ್ದ, ಸರಕಾರವು ಅವರನ್ನು ನೌಕರಿಯಿಂದ ತೆಗೆದು ಹಾಕಿತು.

ಇದೆಲ್ಲ ನಡೆದ ಮೇಲೆ ಅವನಿಗೆ ಪಶ್ಚಾತ್ತಾಪವಾಯಿತು. ಅವನು ಮಹಾರಾಜರ ಬಳಿಗೆ ಓಡಿದ, ಅವರ ಚರಣಗಳಲ್ಲಿ ಹೊರಳಾಡಿದ, ಶ್ರೀಮಹಾರಾಜರು ಹೇಳಿದರು - ಇದೆಲ್ಲ ಪ್ರಾರಬ್ಧ ಭೋಗವಾಗಿದೆ, ಆದದ್ದು ಮರೆತು ಹೋಗಿ, ರಾಮನಾಮದಲ್ಲಿ ಮನಸ್ಸು ತೊಡಗಿಸಿ, ಎಲ್ಲ ಸರಿಯಾಗುವುದು ಎಂದು ಹೇಳಿ ಅವರನ್ನು ಪ್ರೇಮದಿಂದ ಹತ್ತಿರ ಕುಳ್ಳಿರಿಸಿಕೊಂಡರು. ಅವನು ರಾಮನಾಮ ಸ್ಮರಿಸ ತೊಡಗಿದ. ಮುಂದೆ ಅವನ ವಿರುದ್ಧವಿದ್ದ ತಕರಾರು ಹಿಂಪಡೆಯಲಾಯಿತು, ಅನರು ಪುನಃ ನೌಕರಿಗೆ ಹೋಗ ತೊಡಗಿದ, ದಿನದಿಂದ ದಿನಕ್ಕೆ ಅವನು ರಾಮನಾಮದಲ್ಲಿ ಮಗ್ನನಾದನು, ಜನರು ಅವನನ್ನು 'ಭಗತ್ ಕಿಸನರಾವ್' ಎಂದು ಹೇಳ ತೊಡಗಿದರು.

ತೋಫಕಾನೆಯಲ್ಲಿ ಓರ್ವ ಶಾಸ್ತ್ರಿಗಳು ಇದ್ದರು, ಅವರು ವೇದ ವೇದಾಂಗದಲ್ಲಿ ನಿಷ್ಣಾತರಾಗಿದ್ದರು. ಕೇವಲ ನಾಮಸ್ಮರಣೆಯ ಪ್ರಭಾವದಿಂದ ಇಷ್ಟೊಂದು ಜನರು ಮಹಾರಾಜರ ಹಿಂದೆ ಬಿದ್ದಿರುವುದನ್ನು ಅವರಿಗೆ ಮೆಚ್ಚಿಗೆಯಾಗಲಿಲ್ಲ. ಚೆನ್ನಾಗಿ ಕಲಿತ ವಿದ್ವಾಂಸ ಬ್ರಾಹ್ಮಣರ ಬಾಯಲ್ಲಿ ರಾಮನಾಮ ಮತ್ತು ಕೈಯಲ್ಲಿ ಜಪಮಾಲೆ ನೋಡಿ ಅವರು ಕೆರಳಿದರು. ಅವರು ಆ ಜನರಿಗೆ ಹೇಳಿದರು - ನಿಮ್ಮಂತಹ ಜನರು ಆ ರಾಮದಾಸರ ಹಿಂದೆ ಬಿದ್ದರೆ ಹೇಗಾದೀತು! ಅವರಲ್ಲಿ ಒಬ್ಬನು ಉದ್ದರಿಸಿದ - ನಾಮ ಮಾಹಾತ್ಮ್ಯವಾದರೋ ವೇದಾರಂಭದಲ್ಲೇ ಇದೆ ಮತ್ತು ವೇದದ ಕೊನೆಗೂ ಇದೆ. ಕಲಿಯುಗದಲ್ಲಿ ನಾಮಸ್ಮರಣೆಯೇ ಎಲ್ಲಕ್ಕಿಂತ ಸುಲಭ ಭಕ್ತಿ ಎಂದು ತಿಳಿಯಲಾಗಿದೆ. ಹಾಗೆ ಹೇಳಿದರೆ ನಾವು ನಿಮ್ಮಷ್ಟು ಜ್ಞಾನಿಗಳಲ್ಲ. ನಾಮದ ಮಹಿಮೆ ನಮಗಿಂತ ಶ್ರೀಮಹಾರಾಜರು ಹೆಚ್ಚು ಚೆನ್ನಾಗಿ ಹೇಳುವರು. ಬಳಿಕ ಅವರು ಪುನಃ ನಾಮ ಸ್ಮರಿಸ ತೊಡಗಿದರು. ಶಾಸ್ತ್ರಿಗಳು ಇನ್ನೂ ಕೆರಳಿದರು. ಅವರು ಮಹಾರಾಜರನ್ನು ತುಂಬಾ ನಿಂದಿಸಿದರು. ಒಮ್ಮೆ ಶಾಸ್ತ್ರಿಗಳು ರಾಮಮಂದಿರದಲ್ಲಿ ಮಹಾರಾಜರನ್ನು ಭೆಟ್ಟಿಯಾದರು. ಶಾಸ್ತ್ರಿಗಳು ಕೇಳಿದರು - ಮಹಾರಾಜ! ನೀವು ಖಂಡಿತ ನರಕಕ್ಕೆ ಹೋಗುವಿರಿ, ನೀವು ದ್ವಿಜರಿಗೂ ರಾಮನಾಮ ಸ್ಮರಿಸಲು ಹೇಳುವಿತ್ತೀರಿ, ನಿಮಗೆ ವೇದಶಾಸ್ತ್ರ, ಧರ್ಮ ನಿಯಮಗಳ ಏನಾದರೂ ಜ್ಞಾನವಿದೆಯೋ ಇಲ್ಲವೋ? ಮಹಾರಾಜರು ಹೇಳಿದರು - ಹಾಗಂತ ನಾವು ಅಜ್ಞಾನಿಗಳೆಂದೇ ಹೇಳಿ ! ಆದರೆ ನಾಮಸ್ಮರಣೆಯ ಶಕ್ತಿ ಅಲೌಕಿಕವಾಗಿದೆ, ಇಷ್ಟು ಮಾತ್ರ ನಾವು ತಿಳಿಯುತ್ತೇವೆ. ನೀವು ಶಾದ್ಧೆಯಿಂದ ನಾಮಸ್ಮರಣೆ ಮಾಡಿ, ನಿಮಗೂ ಅನುಭೂತಿ ಬಂದೀತು. ಶಾಸ್ತ್ರಿಗಳು ಇನ್ನೂ ಹೆಚ್ಚು ಕೆರಳಿದರು, 'ನನಗೆ ನಾಮ ಸ್ಮರಿಸಲು ಹೇಳುವಿರೋ! ನಾನು ಎಲ್ಲಾದರೂ ತಪ್ಪಿ ನಾಮ ಹೇಳಿದರೆ, ನನಗೆ ಹುಚ್ಚು ಹಿಡಿದೀತು ಈ ನಾಲಿಗೆಗೆ ನಾಮ ಹೇಳುವುದು ಈ ಜನ್ಮದಲ್ಲಿ ಆಗಲಾರದು. ಶಾಸ್ತ್ರಿಗಳು ಮಹಾರಾಜರನ್ನು ಬಹಳ ನಿಂದಿಸಿದರು. ಅಂದು ರಾತ್ರೆ ಶಾಸ್ತ್ರಿಗಳು ಊಟ ಮುಗಿಸಿ ಮಲಗಿದರು, ಬೆಳಗಿನ ಝಾವ ಅವರಿಗೆ ಎಚ್ಚರವಾಯಿತು, ಎದ್ದವರೇ ಅವರು ಒಲೆಯಲ್ಲಿದ್ದ ಉರಿಯುವ ಎರಡು ಕಟ್ಟಿಗೆ ಎತ್ತಿಕೊಂಡು ಅದನ್ನೇ ತಾಳದಂತೆ ಬಾರಿಸುತ್ತಾ ರಾಮನಾಮ ಹೇಳುತ್ತಾ ಊರೆಲ್ಲಾ ಅಲೆದರು, ದೇಹ-ವಸ್ತ್ರಗಳ ಎಚ್ಚರವಿಲ್ಲ. ಜನರು ಪರಸ್ಪರ ಮಾತನಾಡುತ್ತಾ ಶಾಸ್ತ್ರಿಗಳಿಗೆ ಹುಚ್ಚು ಹಿಡಿದಿದೆ ಎಂದು ಮಾತನಾಡತೊಡಗಿದರು. ಈ ಸುದ್ದಿ ಮಹಾರಾಜರ ಕಿವಿಗೆ ಬಿತ್ತು . ಅವರು ಅವರನ್ನು ಕರೆದುಕೊಂಡು ಬರಲು ಇಬ್ಬರನ್ನು ಕಳಿಸಿದರು. ಶಾಸ್ತ್ರಿಗಳನ್ನು ಮಹಾರಾಜರ ಮುಂದೆ ತಂದರು, ಮಹಾರಾಜರಿಗೆ ಅವರ ಮೇಲೆ ದಯೆ ಬಂತು,

ಅವರು ಅವರ ತಲೆಯ ಮೇಲೆ ಕೈಯನ್ನಿಟ್ಟು ಅವರ ಕಡೆ ದಯಾರ್ದ್ರ ದೃಷ್ಟಿಯಿಂದ ನೋಡಿದರು. ಶಾಸ್ತ್ರಿಗಳು ಶಾಂತರಾದರು, ಅವರಿಗೆ ಗಾಢ ನಿದ್ದೆ ಬಂತು. ಹೆಚ್ಚು ಕಮ್ಮಿ ಆರು ಗಂಟೆಯಲ್ಲಿ ಅವರಿಗೆ ಎಚ್ಚರವಾಯಿತು. ಅವರು ಎಚ್ಚರವಾದಾಗ ಅವರ ಚಿತ್ತವೃತ್ತಿಯು ಪೂರ್ಣ ಬದಲಾಗಿತ್ತು ಅವರು ಶ್ರೀಮಹಾರಾಜರಿಂದ ನಾಮ ದೀಕ್ಷೆ ಪಡೆದರು, ರಾಮನಾಮದ ಜಪ ಪ್ರಾರಂಭಿಸಿದರು, ಹನ್ನೆರಡು ವರ್ಷ ಶ್ರೀರಾಮ ಮಂದರದಲ್ಲಿ ತುಳಸೀರಾಮಾಯಣ ಕಥೆ ಹೇಳಿದರು. ಮಹಾರಾಜರು ಅವರಿಗೆ ದೀಕ್ಷೆ ಕೊಡುವ ಅಧಿಕಾರ ಕೊಟ್ಟಿದ್ದರು. 1905ರಲ್ಲಿ ಅವರು ದೇಹ ಬಿಟ್ಟರು.

ಎಣಿಸಲಾರದಷ್ಟು ಜನರಿಗೆ ಶ್ರೀಮಹಾರಾಜರು ರಾಮನಾಮಿಯಾಗಿಸಿದರು. ಅಪರಿಮಿತ ಅನ್ನದಾನ ಮಾಡಿದರು. ಇಂದೂರಿನಲ್ಲಿ ಯಾವಾಗಲೂ ನೀರಿನ ಬವಣೆ ಇರುತ್ತದೆ, ಆ ವರ್ಷ ಮಳೆ ಬಹಳ ಕಡಿಮೆಯಾಯಿತು, ಹಿಂದಿನ ವರ್ಷವೂ ಮಳೆ ಕೈಕೊಟ್ಟಿತ್ತು . ಶ್ರೀಮಹಾರಾಜರು ಇಂದೋರ ಬಿಟ್ಟು ನೈಮಿಷಾರಣ್ಯಕ್ಕೆ ಹೊರಟಿದ್ದರು. ಹೋಗುವ ಮೊದಲು ಅನ್ನದಾನ ಮಾಡಬೇಕು ಎಂಬ ಇಚ್ಛೆ ಅವರಿಗಿತ್ತು . ಆಗ ಅಲ್ಲಿ ಶ್ರೀಮಂತ ಸಾಹುಕಾರರು, ಸರದಾರರು ದರ್ಶನಕ್ಕಾಗಿ ಬಂದಿದ್ದರು. ಬಂದವರನ್ನು ಉದ್ದೇಶಿಸಿ ಶ್ರೀಮಹಾರಾಜರು ಹೇಳಿದರು – ಪ್ರತಿಯೊಬ್ಬನಿಗೂ ಊಟ ಕೊಡಬೇಕು ಮತ್ತು ಒಂದೊಂದು ರೂಪಾಯಿ ದಕ್ಷಿಣೆ ಕೊಡಬೇಕು. ಒಬ್ಬ ಹೇಳಿದ – ನೀವು ನಾಲ್ಕು ಆಣೆಯೇ ದಕ್ಷಿಣೆ ಕೊಡಬೇಕು, ಇನ್ನೊಬ್ಬ ಹೇಳಿದ – ಬರೇ ಊಟ ಹಾಕಬೇಕು. ದಕ್ಷಿಣೆ ಬೇಡ. ಶ್ರೀಮಹಾರಾಜರು ಎಲ್ಲರ ಮಾತು ಕೇಳಿಕೊಂಡರು, ಮರುದಿನ ಡಂಗುರಸಾರಿ ಜನರಿಗೆ ದಕ್ಷಿಣೆಯೊಂದಿಗೆ ಭೋಜನ ಮಾಡಲು ಬರಬೇಕೆಂದು ಆಮಂತ್ರಣ ಕೊಟ್ಟರು, ಭಗವಾ ಕಫನೀ ಧರಿಸಿದ ಈ ಯೋಗೀ. ರಾತ್ರೆ ಹನ್ನೊಂದರವರೆಗೆ ಪಂಕ್ತಿಗಳು ನಡೆಯುತ್ತಿದ್ದವು. ಬರಿದಾದ ಕಫನಿಯಿಂದ ಅವರು ಪ್ರತಿಯೊಬ್ಬರಿಗೂ ಒಂದೊಂದು ರೂಪಾಯಿ ದಕ್ಷಿಣೆ ಕೊಟ್ಟರು.

ನಿಶ್ಚಯಿಸಿದಂತೆ ಶ್ರೀಮಹಾರಾಜರು ನೈಮಿಷಾರಣ್ಯಕ್ಕೆ ಬಂದರು. ಜೊತೆಗೆ ಭಯ್ಯಾ ಸಾಹೇಬ ಮೋಡಕರು ಇದ್ದರು. ನರ್ಮದಾ ತೀರದಲ್ಲಿ ತಿರುಗಾಡುವಾಗ ಅವರಿಗೆ ಅನೇಕ ಯೋಗೀ, ತಪಸ್ವೀಗಳ ದರ್ಶನವಾಯಿತು. ಮುಂದೆ ನೈಮಿಷಾರಣ್ಯದ ವೃಕ್ಷರಾಜೀ, ದಟ್ಟವಾದ ಕಾಡು, ಭಯ್ಯಾ ಸಾಹೇಬರಿಗೆ ಬಾಯಾರಿಕೆ ಆಯಿತು. ನೀರನ್ನು ಹುಡುಕುತ್ತಾ ಇಬ್ಬರೂ ಒಂದು ಗುಹೆಗೆ ನುಗ್ಗಿದರು, ಒಳಗೆ ತಿಳಿನೀರು ಹರಿಯುತ್ತಿತ್ತು . ಇಬ್ಬರೂ ನೀರು ಕುಡಿದರು. ಆ ಗುಹೆಯಲ್ಲಿ ಮುಂದೆ ಏನಿದೆ ಎಂದು ನೋಡಲು ಮುಂದರಿದರು. ಸ್ವಲ್ಪ ಅಂತರದಲ್ಲಿ ಓರ್ವ ಯೋಗೀ ಧ್ಯಾನಾವಸ್ಥೆಯಲ್ಲಿ

ಕುಳಿತಿರುವುದನ್ನು ಕಂಡರು. ಅವರ ಗಡ್ಡ - ಜಟೆ ನೆಲದಲ್ಲಿ ಹರಡುವಷ್ಟು ಬೆಳೆದಿದ್ದವು. ಇವರಿಬ್ಬರೂ ಆ ಯೋಗಿಯ ಕಡೆಗೇ ನೋಡುತ್ತಿದ್ದರು. ಆ ಯೋಗಿಯು ಕಣ್ಣು ತೆರೆದು ಕೇಳಿದರು - ಶ್ರೀರಾಮಾವತಾರವಾಯಿಯೇ? ಅವನ ದರ್ಶನ ನಾನು ಪಡೆಯಬೇಕು. ನಾನು ಈ ಸ್ಥಾನ ಬಿಟ್ಟು ಶ್ರೀರಾಮನಿರುವಲ್ಲಿಗೆ ಹೋಗಿ ದರ್ಶನ ಮಾಡುವೆನು. ಅದಕ್ಕೆ ಮಹಾರಾಜರು ಹೇಳಿದರು - ಯೋಗಿರಾಜರೇ ! ರಾಮ ಮತ್ತು ಕೃಷ್ಣ ಎರಡೂ ಅವತಾರವಾಗಿ ಹೋಗಿವೆ. ಕೃತ, ತ್ರೇತಾ, ದ್ವಾಪರ ಯುಗಗಳು ಮುಗಿದು ಕಲಿಯುಗ ನಡೆಯುತ್ತಿದೆ. ಯೋಗಿಗಳು ವಿಲಕ್ಷಣ ನಿರಾಶರಾದರು. ಅವರ ಕಣ್ಣುಗಳಿಂದ ಅಶ್ರು ಹರಿದವು. ಶ್ರೀಮಹಾರಾಜರು ತುಂಬು ಪ್ರೇಮದಿಂದ ಅವರ ಮಸ್ತಕದ ಮೇಲೆ ಕೈಯನ್ನಿಟ್ಟರು. ಆ ಯೋಗಿಯೂ ದೇಹ ಬಿಟ್ಟರು. ಶ್ರೀಮಹಾರಾಜರು ಅಂತ್ಯ ಸಂಸ್ಕಾರ ಮಾಡಿದರು. ಅನೇಕ ಯೋಗಿಗಳ ದರ್ಶನ ಪಡೆದು ನೈಮಿಷಾರಣ್ಯ ಬಿಟ್ಟರು.

ಇಂದೋರ, ಹರ್ದಾಗಾಗಿ ಅವರು ನಾಸಿಕಕ್ಕೆ ಬಂದರು. ನಾಸಿಕದಲ್ಲಿ ಅವರು ಪ್ರತಿದಿನ ಶ್ರೀರಾಮನ ದರ್ಶನಕ್ಕೆ ಹೋಗುತ್ತಿದ್ದರು. ಒಂದು ದಿನ ಹನ್ನೊಂದರ ಸುಮಾರಿಗೆ, ದರ್ಶನದ ಬಳಿಕ ಮಹಾರಾಜರು ಪ್ರದಕ್ಷಿಣೆ ಮಾಡತೊಡಗಿದರು. ಉರಿ ಬಿಸಿಲಿತ್ತು , ಜೀಜಾಬಾಯಿಯ ತಾಯಿಯು ಅವರ ಮೇಲೆ ಕೊಡೆ ಹಿಡಿದಿದ್ದರು. ಪ್ರದಕ್ಷಿಣೆಯ ದಾರಿಯಲ್ಲಿ ಒಬ್ಬ ಸಂನ್ಯಾಸೀ ಕುಳಿತ್ತಿದ್ದನು. ಈ ದೃಶ್ಯ ನೋಡಿ ಅವನು ಹೇಳಿದ - ಇವನೆಂತಹ ಸಾಧು ! ಭಗವಾ ಕಫನಿಯಲ್ಲಾದರೂ ನಾಚಿಕೆ ಆಗಬೇಕಿತ್ತು . ರಾಮದರ್ಶನಕ್ಕೆ ಬಂದು ಓರ್ವ ಸ್ತ್ರೀಯ ಸೇವೆ ಪಡೆಯುತ್ತಿದ್ದಾನೆ, ಹೇಗೆ ಪಾಪಕ್ಷಾಲನೆ ಆಗುವುದು ಆ ರಾಮನಿಗೆ ಗೊತ್ತು . ಶ್ರೀ ಮಹಾರಾಜರ ಪ್ರದಕ್ಷಿಣೆ ಪೂರ್ಣವಾಯಿತು, ಅನಂತರ ಅವರು ಆ ಸಂನ್ಯಾಸಿಯ ಬಳಿಗೆ ಹೋಗಿ ಕುಳಿತರು. ಅವರು ಹಿಂದಿಯಲ್ಲೇ ಮಾತನಾಡಿದು, ಕಾರಣ ಆ ಸಂನ್ಯಾಸಿಯ ಮೇಲಿನ ಉದ್ಗಾರ ಹಿಂದಿಯಲ್ಲೇ ಇತ್ತು . ಶ್ರೀಮಹಾರಾಜರು ಹೇಳಿದರು - ಮಹಾರಾಜ! ನೀವು ಯೋಗ್ಯ ಮಾತಾಡಿದಿರಿ. ನಿಜವಾಗಿ ನನಗೆ ಪಶ್ಚಾತ್ತಾಪವಾಗುತ್ತದೆ, ನನ್ನ ಕಥೆ ಕೇಳಿದರೆ ನಿಮಗೆ ಗಮನಕ್ಕೆ ಬಂದೀತು - ''ಅಯೋಧ್ಯೆಯ ಹತ್ತಿರ ಫೈಜಾಬಾದಿನ ಕಾಶೀಪುರದಲ್ಲಿ ನನ್ನ ಜನ್ಮ, ತಂದೆ-ತಾಯಂದಿರಿಗೆ ನಾನೊಬ್ಬನೇ ಮಗ. ಆದರಿಂದ ನನ್ನ ಮೇಲೆ ಅವರಿಗೆ ಭಾರೀ ಪ್ರೇಮ, ನನ್ನ ವಯಸ್ಸು ಹೆಚ್ಚಾದ ಹಾಗೆ ನನಗೆ ಕೆಟ್ಟವರ ಸಹವಾಸವಾಯಿತು, ನನಗೆ ಹದಿನಾರು ವರ್ಷವಾದಾಗಲೇ ಎಲ್ಲ ಕೆಟ್ಟ ಚಟ ಹತ್ತಿಕೊಂಡವು. ನನ್ನ ತಂದೆಗೆ ಇದರಿಂದ ಅಪಾರ ದುಃಖವಾಗಿ, ಇದೇ ಚಿಂತೆಯಲ್ಲಿ ಅವರ ನಿಧನವಾಯಿತು. ತಾಯಿಯು ನನ್ನ ಮದುವೆ ಮಾಡಿದರು, ನನ್ನ ಪತ್ನೀ ಅತಿಶಯ ಸುಂದರಿ ಮತ್ತು ಚತುರಳಾಗಿದ್ದಳು.

ವ್ಯಸನಗಳಿಂದ ನಾನು ಅಶಕ್ತನಾಗಿದ್ದೆ. ಊರಿನ ಕೆಟ್ಟಜನರು ಆಕೆಯನ್ನು ತಮ್ಮ ವಶಾಗಿಸಿಕೊಂಡರು. ಅವಳು ದುರಾಚಾರ ಮಾಡತೊಡಗಿದಳು. ನನಗೆ ಸಂಸಾರದ ಓಕರಿಕೆ ಬಂತು ಮತ್ತು ನಾನು ಬನಾರಸಿಗೆ ಬಂದೆ. ಬನಾರಸದಲ್ಲೇ ನಾನು ಸಂನ್ಯಾಸ ಸ್ವೀಕರಿಸಿದೆ.'' ಸ್ವಾಮಿ ! ನೀವು ಹೇಳಿದ ಕಥೆ ನನ್ನದೇ ಆಗಿದೆ, ನನ್ನ ಜೀವನ ಕಥೆ ನನಗೇಕೆ ಹೇಳುತ್ತಿರುವಿ? ಹೀಗೆ ಹೇಳಿ ಅವನು ಮಹಾರಾಜರ ಕಡೆಗೆ ನೋಡಿದನು. ಅವನು ಪುನಃ ಹೇಳಿದ - ನಿಮಗೆ ನನ್ನ ಜೀವನ ಕಥೆ, ನೀವು.... ಅವರು ಶ್ರೀಮಹಾರಾಜರ ಚರಣಗಳಲ್ಲಿ ಹೊರಳಾಡಿದರು. ಶ್ರೀಮಹಾರಾಜರು ಅವರನ್ನು ತಮ್ಮ ಬಳಿ ಎಂಟು ದಿನ ಇಟ್ಟುಕೊಂಡರು. ಅವರಿಗೆ ರಾಮಾನಾಮದ ಉಪದೇಶ ಮಾಡಿದರು. ಅನಂತರ ಆ ಸಂನ್ಯಾಸಿ ಕಾಶಿಗೆ ಮರಳಿದ.

ಶ್ರೀಮಹಾರಾಜರು ತಾಯಿಯ ಹೆಸರಲ್ಲಿ ಒಂದು ದಿನ ಭಿಕ್ಷುಕರಿಗೆ ಗಂಗಾತೀರದಲ್ಲಿ ಧಾನ್ಯ ಹಂಚಿದರು. ಇತರ ಊರುಗಳಿಂದ ಬಂದಿರುವ ಮಂಡಳಿಯವರನ್ನು ತಮ್ಮ ಊರಿಗೆ ಹಿಂದಕ್ಕೆ ಕಳಿಸಿದರು ಮತ್ತು ಗೊಂದವಲೆಗೆ ಮಂಡಳಿಯೊಂದಿಗೆ ಅವರು ಗೊಂದವಲೆಗೆ ಮರಳಿ ಬಂದರು.



-: ಇಪ್ಪತ್ತ ನಾಲ್ಕು :-

# ಹರಿಹರರಲ್ಲಿ ಅದ್ವೈತ

ಶ್ರೀಮಹಾರಾಜರು ಕಾಶೀಯಾತ್ರೆಯಿಂದ ಗೊಂದವಲೆಗೆ ಹಿಂತಿರುಗಿದರು. 1896 ವರ್ಷ, ಈ ವರ್ಷ 1876-77ರಂತೆಯೇ ಭಯಂಕರ ದುಷ್ಕಾಲ ಉಂಟಾಯಿತು. ಈ ಕ್ಷಾಮದಲ್ಲಿಯೂ ಮಹಾರಾಜರು ಸುಮ್ಮನೆ ಕುಳಿತಿರಲಿಲ್ಲ. ಅವರು ದುಷ್ಕಾಲದ ಕೆಲಸ ಪ್ರಾರಂಭಿಸಿದರು. ಜನರಿಗೆ ಊಟ ಹಾಕಿದರು, ವಯೋವೃದ್ಧರಾದ ಜನರಿಗೆ ಉಚಿತವಾಗಿ ಧಾನ್ಯ ಹಂಚಿದರು. ಮಂದಿರದಲ್ಲಿ ಕುಳಿತು ಹತ್ತುಸಾವಿರ ರಾಮನಾಮ ಜಪ ಮಾಡುವವರಿಗೆ ಒಂದು ಹೊತ್ತಿನ ಊಟ ಕೊಡಲು ತೊಡಗಿದರು. ಈ ಬರಗಾಲದಲ್ಲಿ ಮೇವು ಸಿಗುತ್ತಿರಲಿಲ್ಲ, ನೀರು ಸಿಗುತ್ತಿರಲಿಲ್ಲ, ಹಳ್ಳಿಗಳು ಬರಿದಾದುವು, ಮಹಾರಾಜರ ಮಾವ ಆಟಪಾಡಿಯಲ್ಲಿದ್ದು ಶ್ರೀಮಹಾರಾಜರು ಅವರನ್ನು ಗೊಂದವಲೆಗೆ ಕರೆಸಿಕೊಂಡರು. ಅವರಿಗೆ ಶ್ರೀರಾಮಪೂಜೆಯನ್ನು ಒಪ್ಪಿಸಿದರು, ಈ ದುಷ್ಕಾಲದಲ್ಲಿ ಮಹಾರಾಜರು ಗೋಮಾತೆಗೆ ಕಷ್ಟವಾಗಲು ಬಿಡಲಿಲ್ಲ. ಅವರು ಒಂದು ಗೋಶಾಲೆ ಕಟ್ಟಿಸಿ ಜಾನುವಾರುಗಳ ವ್ಯವಸ್ಥೆ ಮಾಡಿದರು. ಶ್ರೀಮಹಾರಾಜರು ಮತ್ತು ಅವರ ಭಕ್ತರು ಕ್ಷಾಮದಲ್ಲಿ ಜನರಿಗೆ ಉಪವಾಸ ಆಗಬಾರದೆಂದು ಕೆಲಸ ಮಾಡಿಸುತ್ತಿದ್ದರು. ಜಾನುವಾರುಗಳಿಗೆ ಮೇವು ಇಲ್ಲದೆ ಸಾಯಬಾರದೆಂದು ಮೇವು-ನೀರಿನ ವ್ಯವಸ್ಥೆ ಮಾಡುತ್ತಿದ್ದರು. ಮಹಾರಾಜರು ಗೊಂದವಲೆಯಲ್ಲೇ ಇದ್ದಾರೆ ಎಂದು ತಿಳಿದಾಗ ನಾಗಪೂರ, ಇಂದೋರ, ಜಾಲನಾ, ಹುಬ್ಬಳ್ಳಿ, ಧಾರವಾಡ ಹೀಗೆ ಊರುಗಳಿಂದ ಭಕ್ತರು ದರ್ಶನಕ್ಕಾಗಿ ಬರತೊಡಗಿದರು, ವರ್ಹಾಡದ ವಿಷ್ಣು ಬುವಾ ಕುಂಭಾರೇ ತೀರ್ಥಯಾತ್ರೆ ಮಾಡುತ್ತಾ ಅಂಬಡಕ್ಕೆ ಹೋಗಿದ್ದರು, ಅಲ್ಲಿ ಅವರು ಆನಂದ ಸಾಗರರಿಗೆ ಭೆಟ್ಟಿಯಾದರು, ವಿಷ್ಣುಬುವಾ ನಿಜವಾದ ಈಶ್ವರ ಭಕ್ತರಾಗಿದ್ದರು. ಅನಂತರ ಸಾಗರರು ಶ್ರೀ ಮಹಾರಾಜರ ವರ್ಣನೆ ಮಾಡಿ ಅವರಿಗೆ ಗೊಂದವಲೆಗೆ ಹೋಗಲು ಸಲಹೆ

ಕೊಟ್ಟರು. ಶ್ರೀಮಹಾರಾಜರದಿಂದ ಉಪದೇಶ ಪಡೆದು ಸಾಧನೆ ಮಾಡಬೇಕೆಂದು ಸೂಚಿಸಿದರು. ವಿಷ್ಣುಬುವಾ ಗೊಂದವಲೆಗೆ ಬಂದರು, ಮಹಾರಾಜರ ದರ್ಶನ ಪಡೆದರು, ಶ್ರೀಮಹಾರಜರು ಅವರನ್ನು ಪ್ರೇಮದಿಂದ ಇರಿಸಿಕೊಂಡರು. ಶ್ರೀಮಹಾರಾಜರ ಆಧ್ಯಾತ್ಮಿಕ ಉನ್ನತಿ ನೋಡಿ ವಿಷ್ಣುಬುವಾ ಅವಾಕ್ಕಾದರು. ಶ್ರೀಮಹಾರಾಜರ ನಿತ್ಯವ್ಯವಹಾರ ನೋಡಿ ಅವರು ಅವರಕಡೆ ಆಕರ್ಷಿತರಾದರು. ಅವರು ಮಹಾರಾಜರಿಗೆ ಅನುಗ್ರಹ ಕೊಡಲು ವಿನಂತಿಸಿದರು. ಮಹಾರಾಜರು ಹೇಳಿದರು – ಈ ಮೊದಲು ನಿಮಗೆ ಉಪದೇಶವಾಗಿದೆ, ಹಿಂದಿನ ಗುರುಗಳನ್ನು ಮರೆತಿರಿ! ನಾಳೆ ನನ್ನನ್ನೂ ಮರೆಯುವಿರಿ, ಜೀವನದಲ್ಲಿ ಒಮ್ಮೆಗೇ ಗುರು ಮಾಡಿಕೊಳ್ಳಬೇಕು. ಅವರಲ್ಲಿ ಪ್ರಾಮಾಣಿಕವಾಗಿ ಕೊನೆಯವರೆಗೆ ಇರಬೇಕು. ವಿಷ್ಣುಬುವಾ ಆರೇಳು ವರ್ಷದವರಾಗಿದ್ದಾಗ ಓರ್ವ ಸತ್ಪುರುಷರು ಅವರಿಗೆ ಶಿವಮಂತ್ರ ಕೊಟ್ಟಿದ್ದರು ಮತ್ತು ಅವರು ಹೇಳಿದ್ದರು – ಮುಂದಿನ ಆಯುಸ್ಸಿನಲ್ಲಿನಿನಗೆ ಬ್ರಹ್ಮಚೈತನ್ಯರ ದರ್ಶನ ಆಗುವುದು. ಅವರು ಮಹಾನ್ ಆಧ್ಯಾತ್ಮಿಕ ಅಧಿಕಾರಿಗಳಾಗಿರುತ್ತಾರೆ, ಅವರನ್ನೇ ನೀನು ಗುರು ಎಂದು ತಿಳಿ. ಶ್ರೀಮಹಾರಾಜರು ವಿಷ್ಣುಬುವಾರವರಿಗೆ ರಾಮ ಮತ್ತು ಶಿವ ಎರಡೂ ದೇವರಲ್ಲಿ ಶ್ರದ್ಧೆಯನ್ನಿಡಲು ಸಲಹೆ ಕೊಟ್ಟರು. ಸ್ನಾನವಾದ ಮೇಲೆ ಶಿವಮಂತ್ರ ಜಪಿಸಬೇಕು ಹಾಗೂ ಉಳಿದ ಸಮಯದಲ್ಲಿ ರಾಮನಾಮದ ಜಪ ಮಾಡಬೇಕು ಎಂದು ಹೇಳಿದರು. ವಿಷ್ಣುಬುವಾ ಶ್ರೀಮಹಾರಾಜರ ಆಜ್ಞೆಗನುಸಾರ ಸಾಧನೆ ಮಾಡತೊಡಗಿದರು. ಅವರು ಹನ್ನೆರಡು ಜ್ಯೋತಿರ್ಲಿಂಗ ಮತ್ತು ತೀರ್ಥಯಾತ್ರೆ ಮಾಡಿದರು. ಮುಂದೆ ಶ್ರೀಮಹಾರಾಜರು ಅವರಿಗೆ ದೀಕ್ಷಾಧಿಕಾರ ಕೊಟ್ಟರು.

ಬರಗಾಲ ಮುಗಿಯಿತು, 1897ರ ಏಪ್ರಿಲ್ ತಿಂಗಳಾಗಿತ್ತು , ರಾಮನವಮಿಯ ಉತ್ಸವ ನೆರವೇರಿತು. ಇನ್ನು ಗೊಂದವಲೆಯಲ್ಲಿ ಹೊರ ಊರಿನ ಜನರು ಇದ್ದರು. ಒಂದು ದಿನ ಬೆಳಿಗ್ಗೆ ಶ್ರೀರಾಮನ ಎದುರಿಗೆ ಶ್ರೀಮಹಾರಾಜರು ಭಜನೆ ಮಾಡಲು ನಿಂತುಕೊಂಡರು, ಭಕ್ತಿಭಾವದಿಂದ ಮಿಂದಿರುವ ಶ್ರೀಮಹಾರಾಜರ ಭಜನೆ ಮತ್ತು ನಿರೂಪಣ.

**ತ್ರೇಪನ್ನ ವರ್ಷೇ ಭೂಮಿಭಾರ । ಆತಾ ಪಾಹೂ ಆಪಲೇ ಘರ ॥**
**ದೇಹ ಮರ್ಯಾದಾ ಸರಲೀ । ಮಾಗೇ ಭಕ್ತಿ ಕರಾ ಭಲೀ ॥**
**ತುಮ್ಹಾ ಸಂಗಿತಲ್ಯಾ ಖುಣಾ । ವಿಸರೂ ದೇವು ನಕಾ ಮನಾ ॥**
**ದೀನದಾಸ ಆನಂದಲಾ । ರಾಮ ಬೋಲವಿತೋ ಮಲಾ ॥**

ರಾಮರಾಯಾ! ನಾನು ಐವತ್ತು ಮೂರು ವರ್ಷ ಈ ಭೂಮಿಗೆ ಭಾರವಾಗಿ ಇದ್ದೆ. ಈ ದೇಹ ಎಷ್ಟು ಬದುಕಿಸುವುದು ! ಇನ್ನು ನಿಜಧಾಮಕ್ಕೆ ಹೋಗುವುದೇ ಸರಿ. ದೇಹದ ಕಾಲ ಮರ್ಯಾದೆ ಮುಗಿಯಿತು, ಜನರೇ ! ನಾನು ಹೊರಟೇ ಈಗ, ನಾಮಸ್ಮರಣೆ ಮರೆಯಬೇಡಿ, ರಾಮನ ಮೇಲೆ ನಿಷ್ಠೆಯನ್ನಿಡಿ, ಭಕ್ತಿಭಾವ ಮನಸ್ಸಿನಲ್ಲಿಡಿ, ಅವನನ್ನು ಮರೆಯಬೇಡಿ, ನಾನು ಈಗ ಹೋಗುತ್ತೇನೆ, ನಾನು ನೈಮಿಷಾರಣ್ಯಕ್ಕೆ ಹೋಗುವೆ. ನನ್ನ ಬಳಿಕ ನನ್ನ ರಾಮನ ಪೂಜೆ, ಮನಸ್ಸಿಟ್ಟು ಮಾಡಿ, ಅವನ ನಾಮಸ್ಮರಣೆ ಮಾಡಿ, ಅದೇ ಸರ್ವ ಶ್ರೇಷ್ಠ ಸಾಧನೆಯಾಗಿದೆ.

ಶ್ರೀಮಹಾರಾಜರು ಹೊರಟರು, ಟಾಂಗಾ ಕರೆಸಲಾಯಿತು, ಎಲ್ಲ ಜನರು ಓಡಿದರು, ಅವರನ್ನು 'ಹೋಗಬೇಡಿ, ನಮಗೆ ನೀವು ಬೇಕು' ಎಂದು ವಿನಂತಿಸತೊಡಗಿದರು. ಶ್ರೀಮಹಾರಾಜರು ಯಾರ ಮಾತು ಕೇಳಲಿಲ್ಲ. ಕಾಲಲ್ಲಿ ಪಾದುಕೆ, ಮೈಮೇಲೆ ಕಫನಿ ಇದಲ್ಲದೆ ಜೊತೆಯಲ್ಲಿ ಅಕ್ಷರಶಃ ಏನೂ ಇಲ್ಲ. ಮಧ್ಯಾಹ್ನ ಹನ್ನೆರಡು ಗಂಟೆ ಹೊತ್ತಿಗೆ ಯಾರೂ ಏನನ್ನೂ ತಿಂದಿರಲಿಲ್ಲ. ಜನರು ಕೈಮುಗಿದು ವಿನಂತಿಸುತ್ತಿದ್ದರು. ಅಷ್ಟರಲ್ಲಿ ಒಬ್ಬ ಭಕ್ತ ಓಡುತ್ತಾ ಮಹಾರಾಜರ ಮುಂದೆ ಬಂದು, ಕೈ ಜೋಡಿಸಿ ಹೇಳಿದ - ಮಹಾರಾಜ! ಶ್ರೀರಾಮ, ಶ್ರೀಸೀತಾ, ಲಕ್ಷ್ಮಣ ಇವರ ಕಣ್ಣುಗಳಿಂದ ಅಶ್ರುಗಳು ಹರಿಯುತ್ತಿವೆ.

ಶ್ರೀಮಹಾರಾಜರು ರಾಮಮಂದಿರಕ್ಕೆ ಓಡಿದರು. ನಿಜವಾಗಿಯೂ ರಾಮ-ಲಕ್ಷ್ಮಣ- ಸೀತೆ ಮೂರು ಮೂರ್ತಿಗಳ ಕಣ್ಣುಗಳಿಂದ ನೀರು ಹರಿಯುತ್ತಿದ್ದವು. ಅವರ ಕಣ್ಣುಗಳಲ್ಲಿ ಅಶ್ರು ನೋಡಿ ಮಹಾರಾಜರ ಕಣ್ಣುಗಳಿಂದ ಅಶ್ರುಧಾರೆ ಹರಿಯಿತು, ಅವರು ಮೆತ್ತನೆಯ ಮತ್ತು ಸ್ವಚ್ಛ ಬಟ್ಟೆಯಿಂದ ಮೆಲ್ಲನೆ ಮೂವರ ಕಣ್ಣುಗಳಲ್ಲಿನ ಅಶ್ರು ಒರೆಸಿದರು. ಆದರೂ ಅಶ್ರು ನಿಲ್ಲದು, ಮತ್ತೆ ಶ್ರೀಮಹಾರಾಜರು ಕೈ ಮುಗಿದು ಹೇಳಿದರು - 'ನಾನು ಹೋಗಬಾರದೆಂದು ನಿನ್ನ ಇಚ್ಛೆ ಇದ್ದರೆ ನಾನು ಹೋಗುವುದಿಲ್ಲ. ಶ್ರೀಮಹಾರಾಜರು ಹೀಗೆ ಹೇಳಿದಾಕ್ಷಣ ಮೂರೂ ಮೂರ್ತಿಗಳ ಕಣ್ಣುಗಳಿಂದ ಅಶ್ರು ಬರುವುದು ನಿಂತಿತು. ಶ್ರೀಮಾಹಾರಾಜ ಎಲ್ಲ ಉಪಸ್ಥಿತಿ ಭಕ್ತಭಾವಿಕರಿಗೆ ಹೇಳಿದರು - ''ನಡೆದ ಪ್ರಸಂಗವನ್ನು ಹೊರಗೆ ಹೇಳಬೇಡಿ' ಸ್ನಾನ ಮುಗಿಸಿಕೊಳ್ಳಿ, ನೈವೇದ್ಯದ ಸಿದ್ಧತೆಗೆ ತೊಡಗಿರಿ, ಮೂರೂ ಮೂರ್ತಿಗಳಿಗೆ ಹಾಲಿನ ಅಭಿಷೇಕ ಮಾಡಿ ಪೂಜೆ ಮಾಡಿದರು. ತುಂಬಾ ಅನ್ನದಾನವಾಯಿತು, ಪ್ರಸಾದದ ಬಳಿಕ ಭಜನೆಗೆ ಪ್ರಾರಂಭವಾಯಿತು. ಶ್ರೀಮಹಾರಾಜರು ದೇಹಭಾವ ಮರೆಯಿತು, ರಾಮರಾಯನ ಮಸ್ತಕದ ಮೇಲಿನ ಕಿರೀಟದಿಂದ ತುರಾಯಿ ಹಾರಿ ಶ್ರೀಮಹಾರಾಜರ ಮೈಮೇಲೆ ಬಿತ್ತು .

ವಿಷ್ಣುಪಂತ ನಗರಕರ್ ಎಂಬ ಒಬ್ಬ ಶಿವ ಭಕ್ತನಿದ್ದನು. ಅವರು ಸಾಂಗಲಿಯಲ್ಲಿ ಪೋಷ್ಟ ಮಾಸ್ತರೆಂದು ಕೆಲಸ ಮಾಡುತ್ತಿದ್ದರು. ಆಚರಣ ಅತಿಶಯ ಒಳ್ಳೆಯದು, ಶಂಕರನ ಮೇಲೆ ದೃಢ ನಿಷ್ಠೆ. ಬೆಳಿಗ್ಗೆ ಎದ್ದು, ಪ್ರಾತರ್ವಿಧಿ ಮುಗಿಸಿ ಸ್ನಾನ, ಸಂಧ್ಯೆ ಮಾಡುವುದು, ಪಾರ್ಥಿವ ಲಿಂಗದ ಪೂಜೆ ಮಾಡುವುದು, ಶಿವಲೀಲಾಮೃತವನ್ನು ಓದುವುದು ಹೀಗೆ ಅವರ ನಿತ್ಯಕ್ರಮವಿತ್ತು . ಅತ್ಯಂತ ಪ್ರಾಮಾಣಿಕವಾಗಿ ನೌಕರಿ ಮಾಡುತ್ತಿದ್ದರು, ದಿನವಿಡೀ ಅವರ ಬಾಯಲ್ಲಿ ಶಿವನಾಮ ಇತ್ತು . ಈ ಎಲ್ಲ ಒಳ್ಳೆಯ ವರ್ತನೆಯ ಗೃಹಸ್ಥನಲ್ಲಿ ಒಂದು ದೋಷವಿತ್ತು ಅದು ವಿಷ್ಣುಭಕ್ತರನ್ನು  ಶತ್ರುಗಳಂತೆ ಕಾಣುತ್ತಿದ್ದರು. ಶ್ರೀಕೃಷ್ಣನನ್ನು ಟೀಕಿಸುತ್ತಿದ್ದರು, ಅವನ ಲೀಲೆಗಳ ಅಪಹಾಸ್ಯ ಮಾಡುತ್ತಿದ್ದರು. ಒಂದು ದಿನ ನಿತ್ಯಕ್ರಮ ಪೂರೈಸಿ ಅವರು ಧ್ಯಾನಧಾರಣೆಗೆ ಕುಳಿತರು. ಧ್ಯಾನ ಮಾಡುತ್ತಿದ್ದಾಗ ಅವರಿಗೆ ತಂದ್ರಾ ಬಂತು. ಆ ತಂದ್ರಿಯಲ್ಲಿ ಅವರು ಒಂದು ಅರಣ್ಯಕ್ಕೆ ಹೋದರು. ಮರ-ಗಿಡ-ಬಳ್ಳಿಗಳಿಂದ ತುಂಬಿದ ಅರಣ್ಯ , ಪಕ್ಕದಲ್ಲಿ ಒಂದು ನದಿ ಹರಿಯುತ್ತಿತ್ತು . ಅದರ ತೀರದಲ್ಲಿ ಒಂದು ಸುಂದರ ಶಿವಾಲಯವಿತ್ತು ವಿಷ್ಣುಪಂತರು ನದಿಯಲ್ಲಿ ಸ್ನಾನ ಮಾಡಿ, ಶಿವಮಂದಿರಕ್ಕೆ ಹೋದರು. ಬಾಯಿಯಿಂದ 'ಓಂ ಹರಹರ ಮಹಾದೇವ' ಎಂದು ಹೇಳುತ್ತಾ ಪೂಜೆ ಮಾಡ ತೊಡಗಿದರು. ಶಿವಲಿಂಗಕ್ಕೆ ಗಂಧ ಹಚ್ಚಬೇಕಷ್ಟರಲ್ಲಿ ಶಂಕರನ ಲಿಂಗದಿಂದ ಮಹಾರಾಜರು ಪ್ರಕಟರಾದರು. ಕಾಲಲ್ಲಿ ಖಡಾವು, ಭಗವಾ ಕಫನೀ, ಕೊರಳಲ್ಲಿ ಕಂಠೀ ಮತ್ತು ತುಲಸೀಮಾಲೆ, ಹಣೆಯಲ್ಲಿ ಕೇಸರೀ ತ್ರಿಪುಂಡ್ರ , ಒಂದು ಕೈಯಲ್ಲಿ ಯೋಗದಂಡ, ಇನ್ನೊಂದರಲ್ಲಿ ತುಳಸೀಮಾಲೆ, ಮಹಾರಾಜರು ಪಂತರಕಡೆಗೆ ಪರಮ ಸ್ನೇಹದಿಂದ ನೋಡಿದರು, ಅವರು 'ಜಯ ಜಯ ರಘುವೀರ ಸಮರ್ಥ' ಎಂದು ಗಟ್ಟಿಯಾಗಿ ಹೇಳಿದರು. ವಿಷ್ಣುಪಂತ! ನೀನು ನಿಷ್ಠಾವಂತ ಶಂಕರ ಭಕ್ತನಾಗಿರುವೆ, ನೀನು ಶ್ರೀಕೃಷ್ಣನ ನಿಂದೆ ಮಾಡುತ್ತಿರುವೆ ಇದು ಮಾತ್ರ ಒಳ್ಳೆಯದಲ್ಲ. ಹರಿ ಮತ್ತು ಹರ ಇವರಲ್ಲಿ ಭೇದವಿಲ್ಲ. ವಿಷ್ಣುಭಕ್ತರ ನಿಂದೆ ಮಾಡಬೇಡ. ಅದರಿಂದ ಶಿವೋಪಾಸನೆಗೆ ಕೊರತೆ ಬರುತ್ತದೆ. ವಿಷ್ಣುವಿನ ಪೂಜೆ ಮಾಡು, ಶಿವ ಪ್ರಸನ್ನನಾಗುವನು, ಇಂದಿನಿಂದ ನೀನು ಶಾಲಿಗ್ರಾಮದ ಪೂಜೆ ಮಾಡು, ಪುನಃ ನಮ್ಮ ಭೇಟ್ಟಿಯಾದೀತು. ಆಗ ವಿಷ್ಣುಪಂತರು ತಂದ ಸಾಹಿತ್ಯದಿಂದ ಶ್ರೀಮಹಾರಾಜರ ಪೂಜೆ ಮಾಡಿದರು. ಅವರು ಪಂತರ ಬೆನ್ನಮೇಲೆ ಪ್ರೇಮದಿಂದ ಕೈ ಸವರಿದರು ಮತ್ತು ಅಂತರ್ಧಾನರಾದರು. ವಿಷ್ಣುಪಂತರ ತಂದ್ರಾ ಹರಿಯಿತು. ಅವರು ಎಚ್ಚರಗೊಂಡರು, ಶ್ರೀಮಹಾರಾಜರು ಅವರ ಮನಸ್ಸಿನಲ್ಲಿ ಗಟ್ಟಿಯಾಗಿ ನೆಲೆಸಿದರು. ಸ್ವಲ್ಪ ಕಣ್ಣು ಮುಚ್ಚಿದಾಗ ಅವರ ಮನೋಚಕ್ಷುಗಳ

ಎದುರು ಶ್ರೀಮಹಾರಾಜರು ನಿಲ್ಲ ತೊಡಗಿದರು. ಮರುದಿನದಿಂದ ಅವರು ಶಾಲಿಗ್ರಾಮದ ಪೂಜೆ ಮಾಡತೊಡಗಿದರು. ಶಂಕರನಧ್ಯಾನದ ಬದಲು ಅವರಿಂದ ಮಹಾರಾಜರ ಧ್ಯಾನವೇ ಆಗತೊಡಗಿತು. ಅವರ ಮನಸ್ಸಿನಲ್ಲಿ ಶ್ರೀಮಹಾರಾಜರನ್ನು ಭೆಟ್ಟಿಯಾಗುವ ತೀವ್ರ ಇಚ್ಛೆ ಉಂಟಾಯಿತು. ಒಟ್ಟಾರೆ ದರ್ಶನವಾದಂತೆ ಅವರು ರಾಮದಾಸೀ ಆಗಿರಬೇಕು ಎಂದು ಅವರಿಗೆ ಅನಿಸಿತು. ಅವರ ದರ್ಶನಕ್ಕಾಗಿ ಅವರು ಸಜ್ಜನಗಡಕ್ಕೆ ಹೋಗಿ ಬಂದರು, ಆಳಂದಿಗೆ ಹೋಗಿ ಬಂದರು, ಅಧ್ಯಾತ್ಮದಲ್ಲಿನ ಜನರಿಗೆ ಶ್ರೀಮಹಾರಾಜರ ವರ್ಣನೆ ಹೇಳಿ,' ಅವರು ನನಗೆ ಎಲ್ಲಿ ಸಿಗುವರು?' ಎಂದು ಕೇಳತೊಡಗಿದರು. ಅವರ ಒಬ್ಬ ಮಿತ್ರ ಆಗಲೇ ಪಂಢರಪುರಕ್ಕೆ ಹೋಗಿ ಬಂದಿದ್ದ, ಅವನಿಗೆ ಅಲ್ಲಿ ಮಹಾರಾಜರ ದರ್ಶನವಾಗಿತ್ತು . ಏಕಾದಶೀ ನಿಮಿತ್ತ ಮಹಾರಾಜರು ಅಲ್ಲಿಗೆ ಬಂದಿದ್ದರು.

ಮಿತ್ರನಿಂದ ತಿಳಿದಾಕ್ಷಣ ಪಂತರು ಪಂಢರಪುರಕ್ಕೆ ಹೊರಟರು. ಶ್ರೀಮಹಾರಾಜರು ಗೊಂದವಲೆಗೆ ಮರಳಿ ಹೊರಟಿದ್ದರು. ಓರ್ವ ತಾಯಿ ಆಕೆಯ ಮೂರು ವರ್ಷದ ಮಗಳನ್ನು ಎತ್ತಿಕೊಂಡು ದರ್ಶನಕ್ಕಾಗಿ ಬಂದಿದ್ದಳು. ಇಬ್ಬರೂ ಅವರಿಗೆ ವಿನಮ್ರರಾಗಿ ನಮಸ್ಕರಿಸಿದರು. ಆ ಹೆಣ್ಣು ಮಗುವಿಗೆ ಶ್ರೀಮಹಾರಾಜರು ಕೇಳಿದರು - ಮಗು ! ಇಂದು ನಾನು ಗೊಂದವಲೆಗೆ ಹೋಗಲೇ? ಆ ಮಗು ಉತ್ತರಿಸಿತು - ಇಂದು ಹೋಗಬೇಡಿ.

ಇತ್ತ ವಿಷ್ಣುಪಂತರು ಪಂಢರಪುರಕ್ಕೆ ತಲುಪಿದರು, ಪಾಂಡುರಂಗನ ದರ್ಶನ ಪಡೆದರು, ರಾಮಮಂದಿರವನ್ನು ಹುಡುಕಿದರು, ರಾಮಮಂದಿರ ಸುಲಭವಾಗಿ ಸಿಕ್ಕಿತು, ಪಂತರು ಮಂದಿರಕ್ಕೆ ತಲುಪಿದಾಗ ಮಹಾರಾಜರು ಸೊಂಟದ ಮೇಲೆ ಕೈಯಿಟ್ಟು ಭಕ್ತನ ಪ್ರತೀಕ್ಷೆ ಮಾಡುತ್ತಾ ನಿಂತಿದ್ದರು. ಪಂತರು ಅವರನ್ನು ನೋಡಿದರು, ತಂದ್ರಿಯಲ್ಲಿ ದರ್ಶನವಾದ ಸತ್ಪುರುಷರು ಇವರೇ ಎಂದು ತಿಳಿದು ಶ್ರೀಮಹಾರಾಜರ ಚರಣಗಳಲ್ಲಿ ಶಿರವನ್ನಿಟ್ಟರು. ಅವರ ಕಣ್ಣುಗಳಿಂದ ಆನಂದಾಶ್ರು ಹರಿಯ ತೊಡಗಿತು. ಶ್ರೀಮಹಾರಾಜರು ಪಂತರನ್ನು ಕೇಳಿದರು - ಶಾಲಿಗ್ರಾಮದ ಪೂಜೆ ನಡೆಯುತ್ತಿದೆಯಲ್ಲ! ಪಂತರು ಹೌದೆಂದರು, ಪಂತರು ಎರಡು ದಿನ ಅಲ್ಲಿ ಉಳಿದರು. ಅವರು ಶ್ರೀಮಹಾರಾಜರಲ್ಲಿ ಅನುಗ್ರಹ ಕೇಳಿದರು, ಶ್ರೀಮಹಾರಾಜರು ಅವರಿಗೆ ಶಂಕರನಿಗೆ ಪ್ರಿಯವಾದ ಶ್ರೀರಾಮನ ಉಪದೇಶ ನೀಡಿದರು.

□□

-: ಇಪ್ಪತ್ತೈದು :-

## ಶ್ರೀಮಹಾರಾಜರ ಆಧ್ಯಾತ್ಮಿಕ ಶಕ್ತಿ

ಮಹಾರಾಜರು ಇಂದೋರನಿಂದ ಮರಳಿದ್ದರು. ಈಗ ಗೋದೂತಾಯಿಯ ಲಗ್ನವಾಗಿ ಅವಳಿಗೆ ಒಬ್ಬ ಮಗನೂ ಇದ್ದ. ಆ ಮಗನ ಉಪನಯನದ ಸಮಯ, ಗೋದೂ ಶ್ರೀಮಹಾರಾಜರ ಪರಮಭಕ್ತಳು. ಅವಳು ಅವರಿಗೆ ಮುಂಜಿಯ ನಿಮಂತ್ರಣ ಕೊಡಲು ಪ್ರತ್ಯಕ್ಷ ಹೋಗಲಾಗಲಿಲ್ಲ. ಉಪನಯನದ ದಿನ ಅವಳು ಕೆಲಸದ ವಿಲಕ್ಷಣ ಅವಸರದಲ್ಲಿದ್ದಳು. ಆಕೆಯ ಚಿತ್ತ ಮಾತ್ರ ಶ್ರೀಮಹಾರಾಜರ ಆಗಮನದ ಕಡೆಗೇ ಇತ್ತು. ಬ್ರಹ್ಮೋಪದೇಶದ ವಿಧಿಯೆಲ್ಲ ನೆರವೇರಿತು, ಊಟದ ಪಂಕ್ತಿ ಶುರು ಆಯಿತು, ತುಪ್ಪ ಬಡಿಸುವ ಸಮಯ, ಮನೆಯಲ್ಲಿ ತುಪ್ಪ ಸಾಕಷ್ಟಿರಲಿಲ್ಲ, ಗೋದೂತಾಯಿ ಗಾಬರಿಗೊಂಡಳು, ಪರ ಊರಿನಿಂದ ತುಪ್ಪ ಬರುವುದಿತ್ತು, ಅದು ಇನ್ನೂ ಬಂದಿರಲಿಲ್ಲ. ಈಗ ಏನು ಮಾಡುವುದು? ಶ್ರೀಮಹಾರಾಜರ ಸ್ಮರಣೆ ಸತತ ನಡೆಯುತ್ತಲೇ ಇತ್ತು. ಈಗ ಅವಳು ಅವರಿಗೆ ಮೊರೆಯಿಟ್ಟಳು, ಫೋಟೋದಿಂದ ಮಹಾರಾಜರು ಪ್ರಕಟರಾದರು, ಮನೆಯ ತುಪ್ಪದ ಪಾತ್ರೆ ಎತ್ತಿಕೊಂಡು ಅವರು ಸ್ವತಃ ಎಲ್ಲ ಪಂಕ್ತಿಗಳಿಗೆ ತುಪ್ಪ ಬಡಿಸಿದರು, ಪಂಕ್ತಿಗಳು ಮುಗಿದವು, ತುಪ್ಪ ಎಲ್ಲರಿಗೆ ಧಾರಾಳ ಬಡಿಸಿದರು, ಎಲ್ಲರ ಊಟ ಆಯಿತು, ಆಗ ಮನೆಯ ಪಾತ್ರೆಯಲ್ಲಿ ಅಷ್ಟೇ ತುಪ್ಪ ಉಳಿದಿತ್ತು. ಶ್ರೀಮಹಾರಾಜರು ಗೋದೂಗೆ ಹೇಳಿದರು - ಗೋದೂ! ನೀನು ರಾಮಭಕ್ತಳಲ್ಲವೇ? ಇಷ್ಟು ಸಣ್ಣ ಪ್ರಸಂಗದಲ್ಲಿ ಧೈರ್ಯ ಗೆಡುತ್ತಿಯಲ್ಲ? ರಾಮನ ಮೇಲೆ ಶ್ರದ್ಧೆ ಇಡು, ರಾಮನನ್ನು ಮರೆತರೆ ಎಲ್ಲವೂ ಮುಗಿಯಿತು. ಇಷ್ಟು ಹೇಳಿ ಪ್ರಕಟರಾದ ಶ್ರೀಮಹಾರಾಜರು ದೇವರ ಮನೆಗೆ ಹೋಗಿ ಅಂತರ್ಧಾನರಾದರು.

ಶ್ರೀಮಹಾರಾಜರ ಸ್ವಂತ ಮಕ್ಕಳು ಮಾತ್ರ ಬದುಕಲಿಲ್ಲ, ಮೊದಲನೆಯ ಪತ್ನಿಯಿಂದ ಆದ ಮಗು ಚಿಕ್ಕಂದಿನಲ್ಲೇ ದೇವರ ಪಾದ ಸೇರಿತು, ಎರಡನೆಯ ಪತ್ನಿಯಲ್ಲಿ ಅವರಿಗೆ ಇಬ್ಬರು ಪುತ್ರರಾದರು, ಅವು ಬಾಲ್ಯದಲ್ಲೇ ಹೋದುವು. ಮತ್ತೆ ಆಕೆಯಿಂದ

ಒಂದು ಕನ್ಯೆ ಹುಟ್ಟಿದಳು. ಅವಳು ಬೆಳ್ಳಗಿದ್ದು, ಶಾಂತವಾಗಿತ್ತು, ಹೆಚ್ಚು ಅಳುತ್ತಿರಲಿಲ್ಲ. ಶ್ರೀ ಮಹಾರಾಜರು ಆಕೆಯನ್ನು ಶಾಂತಾ ಎಂದು ಹೇಳುತ್ತಿದ್ದರು. ಒಂದುವರೆ ವರ್ಷವಾದರೂ ಆಕೆಗೆ ಮಾತನಾಡಲು ಬರುತ್ತಿರಲಿಲ್ಲ. ಮಂದಿರದಲ್ಲಿ ಭಜನೆ ಶುರು ಆದಾಗ ಅಲ್ಲಿಗೆ ಹೋಗಲು ಹಠ ಮಾಡುತ್ತಿದ್ದಳು. ಅವಳು ತಪ್ಪದೆ ಶ್ರೀರಾಮನ ತೀರ್ಥ ತೆಗೆದುಕೊಳ್ಳುತ್ತಿದ್ದಳು. ಶ್ರೀಮಹಾರಾಜರ ನಿರೂಪಣವನ್ನು ಅವಳು ಶಾಂತಚಿತ್ತದಿಂದ ಕೇಳುತ್ತಿದ್ದಳು. 'ನಿನಗೇನು ತಿಳಿದದೆ' ಎಂದು ಕೇಳಿದರೆ ಅವಳು ಮುದ್ದಾಗಿ ನಗುತ್ತಿದ್ದಳು. ಒಮ್ಮೆ ಶಾಂತಾಳ ಚಿಕ್ಕಮ್ಮ ಆಕೆಯನ್ನು ಎತ್ತಿಕೊಂಡು ತುಳಸೀ ವೃಂದಾವನದ ಕಡೆಗೆ ಹೋದರು. ಓರ್ವ ಸ್ತ್ರೀಯು ತುಳಸಿಗೆ ಪ್ರದಕ್ಷಿಣೆ ಮಾಡುತ್ತಿದ್ದರು, ಪ್ರದಕ್ಷಿಣೆ ಮುಗಿದಾಗ ಆಕೆಯ ಗಮನ ಈ ಮಗುವಿನ ಕಡೆಗೆ ಹೋಯಿತು, ಆಕೆ ಸ್ನೇಹದಿಂದ ತನ್ನ ಕೊರಳಲ್ಲಿದ್ದ ಪುತ್ಥಳಿಗಳ ಸರ ಆಕೆಯ ಕೊರಳಲ್ಲಿ ಹಾಕಿದಳು. ಆಗ ಮಹಾರಾಜರು ಅಲ್ಲೇ ನಿಂತಿದ್ದರು, ಅವರು ಹೇಳಿದರು – ಈ ಮಾಲೆ ನನಗೆ ಕೊಡುವೆಯಾ? ಶಾಂತಾಳಿಗೆ ತನ್ನ ಕೊರಳಲ್ಲಿದ್ದ ಮಾಲೆ ಸರಿಯಾಗಿ ತೆಗೆಯಲಾಗಲಿಲ್ಲ. ಅವಳು ಬಿಕ್ಕತೊಡಗಿದಳು. ಕೊನೆಗೆ ಚಿಕ್ಕಮ್ಮನು ಆ ಮಾಲೆ ತೆಗೆದು ಮಹಾರಾಜರ ಕೈಗೆ ಕೊಟ್ಟಳು, ಈ ಒಂದೂವರೆ ವರ್ಷದ ಮಗು ತುಳಸಿಯ ಒಂದು ಎಲೆ ಕಿತ್ತು ಶ್ರೀಮಹಾರಾಜರ ಕೈಯ ಮಾಲೆ ಮೇಲೆ ಇಟ್ಟಳು. ಶ್ರೀಮಹಾರಾಜರಿಗೆ ಧನ್ಯ-ಧನ್ಯ ಅನಿಸಿತು. ಮುಂದೆ ಆರೇ ತಿಂಗಳಲ್ಲಿ ಶಾಂತಾಳು ಹರಿಪಾದ ಸೇರಿದಳು. ಶ್ರೀಮಹಾರಾಜರು ಹೇಳುತ್ತಿರುತ್ತಾರೆ, ಯಾರ ಹೊಟ್ಟೆಯಲ್ಲಿ ಯಾರು ಹುಟ್ಟುತ್ತಾರೆಂದು ಸಾಮಾನ್ಯಜನರಿಗೆ ತಿಳಿಯಲು ಶಕ್ಯವಿಲ್ಲ. ಕೇವಲ ಸತ್ಪುರುಷರಿಗೇ ಅದು ತಿಳಿಯುತ್ತದೆ. ಅನೇಕ ಸಲ ಒಳ್ಳೆಯ ಅಧಿಕಾರೀ ಜೀವರು ಯಾವುದಾದರೂ ಸಣ್ಣ ವಾಸನೆಯಿಂದ ಸಿಕ್ಕಿ ಬೀಳುತ್ತಾರೆ ಮತ್ತೆ ಅವರು ಅಧ್ಯಾತ್ಮದೃಷ್ಟ್ಯಾ ಒಳ್ಳೆಯ ಕುಲದಲ್ಲಿ ಹುಟ್ಟುತ್ತಾರೆ. ಅಲ್ಲಿ ಅವರ ವಾಸನಾ ತೃಪ್ತಿಗಾಗಿ ಬಹಳ ಹೊತ್ತು ಬೇಕಾಗುವುದಿಲ್ಲ, ಆದ್ದರಿಂದ ಬಾಲ್ಯದಲ್ಲೇ ಅವರು ಜಗತ್ತನ್ನು ಬಿಟ್ಟು ಹೋಗುತ್ತಾರೆ, ಅವರ ಮೃತ್ಯುವಿನ ದುಃಖ ಮಾಡುವುದು ಸರಿಯಲ್ಲ. ವಾಸನೆಯೊಂದಿಗೆ ಜಗಳವಾಡುವುದು ಶೂರನೊಂದಿಗೆ ವೈರ ಕಟ್ಟಿಕೊಂಡಂತೆ ಆಗಿದೆ. ಅದು ಯಾವಾಗ ನಮ್ಮ ಘಾತ ಮಾಡೀತು ಇದರ ಹೊತ್ತಿಲ್ಲ. ಅದಕ್ಕಾಗಿ ಸಾಮಾನ್ಯ ಜನರು ಭಗವಂತನಿಗೆ ಶರಣಾಗಿ, ಅವನ ನಾಮದ ಆಧಾರ ಗಟ್ಟಿಯಾಗಿ ಹಿಡಿಯಬೇಕು. ಆಗ ವಾಸನೆಯ ಮೂಲೋಚ್ಛಾಟನೆ ತಾನಾಗಿ ಆಗುತ್ತದೆ.

ಶ್ರೀಮಹಾರಾಜರು ಸ್ವಂತ ಜೀವನದ ಕಠಿಣ, ದುಃಖೀ ಪ್ರಸಂಗಗಳನ್ನು ಧೈರ್ಯದಿಂದ ಸಹಿಸಿದರು, ರಾಮನಾಮ ಇದು ಅವರ ಜೀವನ ಧ್ಯೇಯವಾಗಿತ್ತು.

ಈ ಧ್ಯೇಯ ಮಾರ್ಗದಲ್ಲಿ ಅವರು ಅನೇಕ ಜನರ ಅನುಭವ ಪಡೆದರು. ಬಡವ-ಮಧ್ಯಮ-ಶ್ರೀಮಂತ, ಅಹಂಕಾರೀ, ನಮ್ರ ಹೀಗೆ ಅನೇಕ ಪ್ರಕಾರದ ಜನರು ಭೆಟ್ಟಿಯಾದರು, ಸರ್ವ ಸಮಸ್ಯೆ , ಎಲ್ಲ ವ್ಯಾಧಿಗಳ ಔಷಧಿ ಉಪಾಯ ಒಂದೇ ರಾಮನಾಮ.

ಕಾಳೆ ಎಂಬ ಓರ್ವ ಗೃಹಸ್ಥರಿದ್ದರು, ಸರಕಾರಿ ಅಧಿಕಾರಿಗಳಾಗಿದ್ದರು. ಅವರ ಪತ್ನಿಗೆ ಸಂಧಿವಾತದಂತಹ ವ್ಯಾಧಿ ಇತ್ತು. ಆಕೆಯ ಕಾಲು ಕುಂಟಾಗಿ ಪರಾವಲಂಬಿಯಾಗಿದ್ದರು. ಕಾಳೆಯವರು ಶ್ರೀಮಹಾರಾಜರ ವಿಷಯ ಕೇಳಿದ್ದರು. ಕಾಳೆಯವರ ಆರ್ಥಿಕ ಪರಿಸ್ಥಿತಿ ಚೆನ್ನಾಗಿತ್ತು . ಅವರು ಪತ್ನೀಯ ಕಾಯಿಲೆ ವಾಸಿಯಾಗಲು ತುಂಬಾ ಉಪಾಯಗಳನ್ನೂ ಮಾಡಿದ್ದರು, ಗುಣ ಸಿಗಲಿಲ್ಲ. ಒಮ್ಮೆ ಕಾಳೆಯವರು ಪತ್ನೀ ಸಹಿತ ಗೊಂದವಲೆಗೆ ಬಂದರು, ಮಹಾರಾಜರನ್ನು ಭೆಟ್ಟಿಯಾದರು, ಶ್ರೀಮಹಾರಾಜರು ಅವರ ಯಥೋಚಿತ ಸ್ವಾಗತ ಮಾಡಿದರು. ಕಾಳೆಯವರು ತಮ್ಮ ಪತ್ನಿಯ ವ್ಯಾಧಿಯ ವಿಷಯದಲ್ಲಿ ಮತ್ತು ಆದ ಔಷಧೋಪಚಾರದ ಬಗ್ಗೆ ಸವಿಸ್ತರ ವಿವರ ಹೇಳಿದರು. ಶ್ರೀಮಹಾರಾಜರು ಒಂದು ಕಷಾಯದ ಔಷಧಿ ಹೇಳಿದರು. ಕಾಳೆಯವರು ಕೇಳಿದರು - ಈ ಔಷಧಿ ಎಲ್ಲಿ ಸಿಗಬಹುದು? ಮಹಾರಾಜರೆಂದರು - ಇದು ನಿಮಗೆ ಹೋಗುತ್ತಾ ಹೋಗುತ್ತಾ ದಾರಿಯಲ್ಲೇ ತಿಳಿದೀತು. ಕಾಳೆ ಮತ್ತು ಅವರ ಧರ್ಮಪತ್ನೀ ಇಬ್ಬರೂ ಕುದುರೆಗಾಡಿಯಲ್ಲಿ ಹೊರಟರು, ಬೀಳ್ಕೊಡುವಾಗ ಮಹಾರಾಜರು ಹೇಳಿದರು - ತಾಯಿ! ಚಿಂತಿಸಬೇಡಿ, ರಾಮರಾಯನ ಕೃಪೆಯಿಂದ ಮುಂದಿನ ಸಲ ಬರುವಾಗ ಸ್ವಂತ ಕಾಲುಗಳಿಂದ ನಡೆದೇ ಬರುವಿರಿ.

ಕುದುರೆ ಗಾಡಿ ಎರಡು ಮೂರು ಮೈಲು ಮುಂದೆ ಹೋಯಿತು, ಗಾಡಿಯ ಮುಂದೆ ಓರ್ವ ಆಳು ನಡೆಯುತ್ತಾ ಇದ್ದ, ಅವನು ದಾರಿ ಬಿಡನು, ಪಕ್ಕಕ್ಕೆ ಹೋಗಲು ಪದೇ - ಪದೇ ಹೇಳಲಾಯಿತು, ಅವನು ಪಕ್ಕಕ್ಕೆ ಸರಿಯಲಿಲ್ಲ, ಕೊನೆಗೆ ಕುದುರೆಗಾಡಿ ನಿಲ್ಲಿಸಿದನು. ಆ ಆಳು ಕಾಳೆಯವರ ಬಳಿಗೆ ಬಂದು, ಮಹಾರಾಜರು ಹೇಳಿದ ಕಶಾಯಕ್ಕೆ ಜನರು ಏನು ಹೇಳುತ್ತಾರೆಂದು ತಿಳಿಸಿದನು. ಅದು ಸಿಗುವ ವಿಳಾಸವೂ ಹೇಳಿದ. ಕಾಳೆಯವರು ಆ ಔಷಧಿ ತಂದು ಪತ್ನಿಗೆ ಕೊಟ್ಟರು. ಕೆಲವೇ ದಿನಗಳಲ್ಲಿ ಔಷಧದ ಪರಿಣಾಮ ಉತ್ತಮವಾಯಿತು. ಪುನಃ ಕಾಳೆ ದಂಪತಿಗಳು ಗೊಂದವಲೆಗೆ ಬಂದರು. ಕಾಳೆಯವರ ಪತ್ನೀ ನಡೆದುಕೊಂಡೇ ಬಂದರು, ಇಬ್ಬರೂ ಶ್ರೀಮಹಾರಾಜರ ಪಾದಗಳಲ್ಲಿ ಶಿರಗಳನ್ನು ಇಟ್ಟರು.

ಕಾಳೆಯವರು ಹಠಟೆವಲ್ಲ, ವಾದಪ್ರಿಯರು, ಒಮ್ಮೆ ಅವರಲ್ಲಿ ಮಾತನಾಡುವಾಗ ಶ್ರೀಮಹಾರಾಜರು ಸಹಜವಾಗಿ ಹೇಳಿದರು - ಒಂದು ಮಾತು ಸತ್ಯ , ಗುರುವನ್ನಾಗಿಸುವಾಗ, ಅವರಿಂದ ಉಪದೇಶ ಪಡೆಯುವಾಗ, ಆ ವ್ಯಕ್ತಿಯನ್ನು ಸರಿಯಾಗಿ ಪರೀಕ್ಷಿಸಿಕೊಳ್ಳಬೇಕು. ನಿಶ್ಚಿಯವಾದ ಮೇಲೆಯೇ ಅವರನ್ನು ಗುರುವಾಗಿಸಬೇಕು. ಅದಕ್ಕೆ ಕಾಳೆ ಹೇಳಿದರು - ಸಂತರು, ಅಧಿಕಾರೀ, ಪುರುಷನಾದರೂ ಮನುಷ್ಯನೇ ಅಲ್ಲವೇ? ಮನುಷ್ಯನೆಂದಾಗ ಪ್ರಮಾದದ ಶಕ್ಯತೆ ಇರುತ್ತದೆ. ಆದ್ದರಿಂದ ನನಗೆ ಯಾವುದೇ ಮನುಷ್ಯನಿಂದ ಉಪದೇಶ ಬೇಡ, ದೇವರೇ ನನಗೆ ಅನುಗ್ರಹ ಕೊಡಬೇಕು. ಮಹಾರಾಜರು ಹೇಳಿದರು - ರಾಮರಾಯನಿಗೇ ನಾಮ ಕೊಡಬೇಕೆಂದು ಪ್ರಾರ್ಥಿಸಿರಿ. ಬಳಿಕ ಮಹಾರಾಜರು 'ಶ್ರೀರಾಮ ಜಯ ರಾಮ ಜಯ ಜಯ ರಾಮ'' ಎಂಬ ಮಂತ್ರವನ್ನು ಒಂದು ಕಾಗದದ ಮೇಲೆ ಬರೆದು ಹನುಮಂತನ ಬಾಯಿಗೆ ಅಂಟಿಸಿದರು ಹಾಗೂ ಕಾಳೆಯವರಿಗೆ ಹೇಳಿದರು - ಈಗ ನಿಮ್ಮ ಬಲ ಕಿವಿಯನ್ನು ಹನುಮಂತನ ಬಾಯಿಗೆ ಹಚ್ಚಿ. ಕಾಳೆಯವರು ಮೂರುತಿಯ ಮುಖಕ್ಕೆ ಬಲ ಕಿವಿಯನ್ನು ಹಚ್ಚಿದರು. ಅವರಿಗೆ ''ಶ್ರೀರಾಮ'' ಎಂದು ಕೇಳಿಸಿತು. ಅಷ್ಟರಲ್ಲಿ ಹೊರಗೇನೋ ಗದ್ದಲವಾಗಿ ಮುಂದಿನದು ಅಸ್ಪಷ್ಟವಾಗಿ ಕೇಳಿಸಿತು. ಕಾಳೆಯವರಿಗೆ ದೇವರಿಂದಲೇ ನಾಮ ದೊರೆಯಿತು.

ಶ್ರೀಮಹಾರಾಜರ ಸ್ಮರಣ ಶಕ್ತಿ ಅಲೌಕಿಕವಾಗಿತ್ತು . 1901ರಲ್ಲಿ ಬ್ರಹ್ಮಾನಂದರು ಶ್ರೀಮಹಾರಾಜರಿಗೆ ರಾಮನವಮಿಗಾಗಿ ಆಮಂತ್ರಿಸಿದರು. ಬ್ರಹ್ಮಾನಂದರು ಗದಗಿನಲ್ಲೇ ಬಹಳ ವರ್ಷ ಇದ್ದರು. ಅವರ ತಪಸ್ಸಾಚರಣೆ, ಸದ್‌ವರ್ತನೆಯಿಂದ ಜನರ ಮನಸ್ಸಿನಲ್ಲಿ ಅವರ ಕುರಿತು ಭಕ್ತಿಭಾವವಿತ್ತು . ಶ್ರೀಮಹಾರಾಜರು ಬ್ರಹ್ಮಾನಂದರ ಗುರುಗಳು, ಗುರುಗಳ ಗುರು ಬರುತ್ತಾರೆಂದು ಜನರು ದರ್ಶನಕ್ಕಾಗಿ ಮುಗಿಬಿದ್ದರು. ಜನಾರ್ದನ ಪಂತ ಆಠವಲೆಯವರ ಮನೆಯಲ್ಲಿ ಉಳಕೊಳ್ಳಲು ವ್ಯವಸ್ಥೆ ಮಾಡಲಾಗಿತ್ತು . ಅನೇಕ ಜನರು ದರ್ಶನಕ್ಕಾಗಿ ಬರುತ್ತಿದ್ದರು. ಅವರಲ್ಲಿ ಭಾವುಸಾಹೇಬ ಕೇತಕರ್ ಒಬ್ಬರು. ಅವರ ಮತ್ತು ಮಹಾರಾಜರ ಬೇಟ್ಟಿ ಇಪ್ಪತ್ತೈದು ವರ್ಷಗಳ ಹಿಂದೆ ಗೊಂದವಲೆಯಲ್ಲಿ ಆಗಿತ್ತು . ಶ್ರೀಮಹಾರಾಜರು ಆಗಿನ ಘಟನೆಗಳನ್ನು ಹೇಳಿದರು, ಹೆಸರ್ಹಿಡಿದು ಅವರೊಂದಿಗೆ ಸಂವಾದ ನಡೆಯಿತು; ಭಾವುಸಾಹೇಬರು ಆಶ್ಚರ್ಯ ಪಟ್ಟರು. ಅವರು ಗದುಗಿಗೆ ಬರಲು ಆಮಂತ್ರಣ ಕೊಟ್ಟರು. ಬೆಲಧಡಿಯಲ್ಲಿ ರಾಮನವಮಿ ಆಚರಿಸಿ ಅವರು ಗದುಗಿಗೆ ಬಂದರು, ಅವರೊಂದಿಗೆ ಅಂದಾಜು ನೂರು ಜನರಿದ್ದರು. ಅಲ್ಲಿ ಹನುಮ ಜಯಂತಿ ನೆರವೇರಿತು, ಜಯಂತಿಯ ದಿನ ಬ್ರಹ್ಮಾನಂದ

ಮಹಾರಾಜರ ರಸವತ್ತಾದ ಕೀರ್ತನೆ ನಡೆಯಿತು, ಭಾವುಸಾಹೇಬರ ಬಂಗಲೆಯ ಅಂಗಳದಲ್ಲೇ ಭವ್ಯ ಮಂಟಪ ಹಾಕಲಾಗಿತ್ತು . ಆಗ ಅಲ್ಲಿ ಬಾವಿ ಅಗೆಯುವುದಿತ್ತು. ಮೊದಲ ಗುದ್ದಲಿ ಮಹಾರಾಜರೇ ಹೊಡೆದರು, ಸುಮಧುರ- ನಿರ್ಮಲ ನೀರು ಆ ಬಾವಿಗೆ ಬಂತು.

ಗದಗ ಹತ್ತಿರ ಯಾವಂಗಲ ಎಂಬ ಒಂದು ಊರು ಇತ್ತು . ಅಲ್ಲಿ ಶಿವದೀಕ್ಷಿತರೆಂಬ ಶ್ರೀ ಮಹಾರಾಜರ ಪರಮಭಕ್ತರು ಇರುತ್ತಿದ್ದರು. ಅವರೂ ಮಹಾರಾಜರನ್ನು ಒತ್ತಾಯ ಪೂರ್ವಕ ಆಮಂತ್ರಿಸಿದ್ದರು, ಶಿವದೀಕ್ಷಿತರ ಪ್ರಯತ್ನದಿಂದ ಆ ಊರಿನಲ್ಲಿ ಮಹಾರಾಜರ ಕೈಯಿಂದ ಶ್ರೀದತ್ತ ಮಂದಿರದ ಸ್ಥಾಪನೆ ಆಯಿತು. ಉತ್ಸವ, ವಿವಿಧ ಧಾರ್ಮಿಕ ಕಾರ್ಯಕ್ರಮಗಳಿಗೆ ಸಾಕಷ್ಟು ನೀರು ಬೇಕು, ಅದಕ್ಕಾಗಿ ಅಲ್ಲಿನ ಜನರು ಮಂದಿರದ ಬಳಿಯಲ್ಲೇ ಒಂದು ಬಾವಿ ಅಗೆದರು. ತುಂಬಾ ಆಗೆಯ ಬೇಕಾಯಿತು, ಬಹಳ ಖರ್ಚು ಬಂತು, ಇಷ್ಟೊಂದು ಪ್ರಯತ್ನ ಮಾಡಿಯೂ ನೀರು ಸವುಳಾಗಿತ್ತು . ಶಿವದೀಕ್ಷಿತರು ಮಹಾರಾಜರು ಇಲ್ಲಿಗೆ ಬಂದಾಗ ಈ ಬಾವಿಯ ವಿಷಯದಲ್ಲಿ ಮತ್ತು ನೀರಿನ ವಿಷಯದಲ್ಲಿ ತಿಳಿಸಿದರು. ಶ್ರೀಮಹಾರಾಜರೆಂದರು – 'ಈ ನೀರಿನಲ್ಲಿ ಶ್ರೀದತ್ತ ಗುರುವಿನ ತೀರ್ಥ ಹಾಕಿರಿ. ತೀರ್ಥ ಹಾಕಿದ ಮೇಲೆ ಮಹಾರಾಜರು ಸ್ವತಃ ಬಿಂದಿಗೆ ಇಳಿ ಬಿಟ್ಟರು. ಬಿಂದಿಗೆ ತುಂಬಿದಾಗ ಮೇಲಕ್ಕೆ ಎಳೆದು ನೋಡಿದರೆ ನೀರು ಸಿಹಿ ಮತ್ತು ನಿರ್ಮಲವಾಗಿತ್ತು . ಅಂದಿನಿಂದ ಆ ಬಾವಿಯ ನೀರು ಚೆನ್ನಾಗಿ ಆಯಿತ್ತು . ಸ್ವಲ್ಪ ದಿನಗಳಲ್ಲಿ ಶ್ರೀಮಹಾರಾಜರು ಜೊತೆಗಿನ ಜನರೊಂದಿಗೆ ಗದುಗಿಗೆ ಮರಳಿದರು. ಅಲ್ಲಿ ಭಾವುಸಾಹೇಬರಲ್ಲಿ ಎಂಟುದಿನ ಇದ್ದು, ಮುಂದಿನ ಪ್ರವಾಸಕ್ಕಾಗಿ ಅವರಿಂದ ಬೀಳ್ಕೊಂಡು ಹೊರಟರು.

□□

## -: ಇಪ್ಪತ್ತಾರು :-

# ಜೀವನದ ಮರ್ಮ

ಶ್ರೀ ಮಹಾರಾಜರಿಗೆ ಪುಣೆಯಲ್ಲಿ ಅನೇಕ ಶಿಷ್ಯರು ಇದ್ದರು. ಆದ್ದರಿಂದ ಅವರು ಆಗಾಗ ಪುಣೆಗೆ ಹೋಗಿ ಬರುತ್ತಿದ್ದರು. ಶ್ರೀಮಹಾರಾಜರು ಮತ್ತು ಲೋಕಮಾನ್ಯ ಟಿಳಕರ ಪರಿಚಯ ಚೆನ್ನಾಗಿ ಆಗಿತ್ತು. ಶ್ರೀಮಹಾರಾಜರು ಪುಣೆಗೆ ಬಂದಾಗ ಲೋಕಮಾನ್ಯರನ್ನು ಮುದ್ದಾಂ ಭೇಟಿಯಾಗುತ್ತಿದ್ದರು. ಬರುವಾಗ ಒಂದು ರೂಪಾಯಿ ಮತ್ತು ತೆಂಗಿನಕಾಯಿ ತೆಗೆದುಕೊಂಡು ಬರುತ್ತಿದ್ದರು. ಅವರು ಪರಸ್ಪರ ಮನಬಿಚ್ಚಿ ಮಾತನಾಡುತ್ತಿದ್ದರು. ಒಂದು ದಿನ ಶ್ರೀಮಹಾರಾಜರ ಶಿಷ್ಯರು ಅವರನ್ನು ಕೇಳಿದರು - ಮಹಾರಾಜ! ನಿಮಗೆ ಲೋಕಮಾನ್ಯರು ಹೇಗೆ ಇಷ್ಟು ಮೆಚ್ಚುತ್ತಾರೆ? ಮಹಾರಾಜರು ಉತ್ತರಿಸಿದರು – ಅತಿಶಯ ನೀತಿವಂತ, ನಿರ್ಭಯೀ, ನಿಃಸ್ವಾರ್ಥಿ ಮತ್ತು ದೇವರ ಮೇಲೆ ಅಪಾರ ನಿಷ್ಠೆ ಈ ಅವರ ಗುಣಗಳಿಂದ ನನಗೆ ಅವರು ಪ್ರಿಯರಾಗಿದ್ದಾರೆ.

ಹೀಗೆಯೇ ಅವರ ಹರಟೆ ನಡೆಯುತ್ತಿದ್ದಾಗ ಲೋಕಮಾನ್ಯರು ಶ್ರೀಮಹಾರಾಜರನ್ನು ಕೇಳಿದರು– ನೀವು ರಾಜಕಾರಣದಲ್ಲಿ ಏಕೆ ಪ್ರವೇಶಿಸುವುದಿಲ್ಲ? ನಿಮ್ಮ ಕೈಯಿಂದ ಬಹಳ ದೊಡ್ಡ ಕಾರ್ಯವಾದೀತು. ಮಹಾರಾಜರು ಉತ್ತರಿಸಿದರು - ಪ್ರಾರಬ್ಧದ ಸಿದ್ಧಾಂತವನ್ನು ಒಂದು ಗಳಿಗೆ ಪಕ್ಕಕ್ಕಿಟ್ಟರೂ ಆಧ್ಯಾತ್ಮವು ರಾಜಕಾರಣಕ್ಕಿಂತ ಹೆಚ್ಚು ಇಲ್ಲದಿದ್ದರೂ ಅದರಷ್ಟೇ ಯೋಗ್ಯವಾಗಿದೆ. ಇದನ್ನು ನೀವು ಒಪ್ಪುವಿರಿ, ನನ್ನ ಜೀವನವನ್ನು ನಾನು ಆಧ್ಯಾತ್ಮಕ್ಕಾಗಿ ಅರ್ಪಿಸಿರುವೆ.

ಪುಣೆಯಲ್ಲಿ ಒಂದು ವ್ಯಾಯಾಮದ ತಂಡ ಇತ್ತು . ಎಂಟು ಹತ್ತು ಜನರಿರಬಹುದು. ಅವರಿಗೆ ವ್ಯಾಯಾಮದ ಹುಚ್ಚು ಇತ್ತು . ಡೋಂಗೀಬಾಬಾ, ಭಗವಾವಸ್ತ್ರದ ವಂಚಕರು, ಭವಿಷ್ಯವಾದೀ, ಬುಡಬುಡಿಕೆಯವರು ಇಂತಹವರ ಕಪಟ ಇವರ ಮುಂದೆ ಬಯಲಾಗುತ್ತಿತ್ತು . ಈ ಡೋಂಗೀ ಜನರನ್ನು ಓಡಿಸಿ ಬಿಡುತ್ತಿದ್ದರು. ಅವರು. ಅವರಲ್ಲಿ ಗೋಪಾಳರಾವ್ ಗೋಖಲೆ ಎಂಬ ಓರ್ವ ಗೃಹಸ್ಥರಿದ್ದರು. ಅವರು

ಸ್ವತಃ ಶಿವಭಕ್ತರಾಗಿದ್ದರು. ಅವರಿಗೆ ಶಿವಭಕ್ತಿ ಹೇಳುವ ಗುರು ಬೇಕಾಗಿತ್ತು. ಒಮ್ಮೆ ಶ್ರೀಮಹಾರಾಜರು ಪುಣೆಗೆ ಬಂದಿದ್ದಾಗ ಆ ತಂಡ ಅಲ್ಲಿಗೆ ಬಂತು. ಅವರ ಭಕ್ತ ಮಂಡಳಿಯವರೊಂದಿಗೇ ಕುಳಿತರು. ಶ್ರೀಮಹಾರಾಜರ ಮಾತು, ಹಾವಭಾವಗಳನ್ನು ಅವರು ನಿರೀಕ್ಷಿಸಿದರು. ಅವರಲ್ಲಿನ ಒಬ್ಬ ಎದ್ದು ನಿಂತು ಅವನು ಶಿಷ್ಟಾಚಾರ ಬಿಟ್ಟು ಶ್ರೀಮಹಾರಾಜರಲ್ಲಿ ಅಸಂಬದ್ಧ ಪ್ರಶ್ನೆ ಕೇಳಿದ. ಮಹಾರಾಜರು ಅವನ ಉದ್ದೇಶ ಗುರುತಿಸಿದರು. ಅವರೆಂದರು – ಈಗ ನನಗೆ ಒಬ್ಬರ ಕಡೆಗೆ ಹೋಗಬೇಕಾಗಿದೆ, ನಾವು ನಾಳೆ ಭೆಟ್ಟಿಯಾಗುವಾ ಮತ್ತು ಮಾತನಾಡುವಾ ಎಂದು ಹೇಳಿ ಎದ್ದು ಹೊರಟು ಹೋದರು. ಅನಂತರ ಈ ತಂಡದ ಜನರಿಗೂ, ಮಹಾರಾಜರ ಭಕ್ತರಿಗೂ ವಾಗ್ವಾದ ನಡೆಯಿತು, ಪರಸ್ಪರ ಕೈ ಕೈ ಮಿಲಾಯಿಸಿತು. ಭಕ್ತರ ಸಂಖ್ಯೆ ಹೆಚ್ಚಿತ್ತು. ನಿಂದಕ ತಂಡ ಅಲ್ಲಿಂದ ಓಡಿ ಹೋಯಿತು, ಆದರೂ ಗೋಖಲೆಯವರಿಗೆ ಒಂದೆರಡು ಏಟಿನ ಪ್ರಸಾದ ಸಿಕ್ಕಿತು. ಮರುದಿನ ಗೋಖಲೆಯವರು ಮಹಾರಾಜರ ಬಳಿಗೆ ಬಂದರು, ಅವರು ಬಂದಾಗ ಶ್ರೀಮಹಾರಾಜರು ಹೇಳಿದರು – 'ನಾನು ರಾಮೋಪಾಸಕನಾಗಿದ್ದೇನೆ, ಆದರೂ ನನಗೆ ಶಂಕರನ ಭಕ್ತರು ತುಂಬಾ ಮೆಚ್ಚುತ್ತಾರೆ, ಗೋಖಲೆಯವರು ಅವರ ಮಾತಿನ ಮರ್ಮ ತಿಳಿದರು. ಅವರು ಮಹಾರಾಜರ ಚರಣ ಹಿಡಿದರು, ಅಂದಿನಿಂದ ಅವರು ಅವರ ಶಿಷ್ಯರಾದರು.

ಗೊಂದವಲೆ ಇದು ಉಷ್ಣತೆ ಹೆಚ್ಚು ಇದ್ದ ಭಾಗದ ಊರು. ಬೇಸಿಗೆ ಅಲ್ಲಿ ಭಾರೀ ಕಠಿಣವಾಗಿರುತ್ತದೆ. ಮಧ್ಯಾಹ್ನದ ಉರಿ ಬಿಸಿಲಿನಲ್ಲಿ ಒಂದು ಕತ್ತೆ ರಸ್ತೆಯಲ್ಲಿ ಹೋಗುತ್ತಿತ್ತು, ಆ ಕತ್ತೆಯು ರೋಗೀ ಮತ್ತು ಅಶಕ್ತವಾಗಿತ್ತು. ನಡೆಯುತ್ತಾ ನಡೆಯುತ್ತಾ ಅದು ಮಂದಿರದ ಮುಂದೆ ಬಂದು ಅಲ್ಲೇ ಬಿತ್ತು. ಮಧ್ಯಾಹ್ನದ ಎರಡು ಗಂಟೆ ಸುಮಾರಿಗೆ ಶ್ರೀಮಹಾರಾಜರು ವಿಶ್ರಾಂತಿ ಪಡೆಯುತ್ತಿದ್ದರು. ಕತ್ತೆ ಬಿದ್ದಿರುವ ವಾರ್ತೆ ಅವರ ಕಿವಿಗೂ ಬಿತ್ತು. ಕೂಡಲೇ ಅವರು ಎದ್ದು ಕತ್ತೆಯ ಬಳಿಗೆ ಬಂದರು. ಓರ್ವ ಶಿಷ್ಯನಿಗೆ ಗಂಗೆ ತರಲು ಹೇಳಿದರು, ಅವರು ಆ ಮರಣೋನ್ಮುಖ ಕತ್ತೆಯ ಬಾಯಿಗೆ ಗಂಗೆ ಹಾಕಿದರು, ಅದರ ಮೈಮೇಲಿನಿಂದ ಪ್ರೇಮದಿಂದ ಕೈಯಾಡಿಸಿದರು. ಗಂಗೆ ಬಾಯಿಗೆ ಬಿದ್ದಾಗ ಆ ಕತ್ತೆಯು ಒಮ್ಮೆ ಶ್ರೀಮಹಾರಾಜರ ಕಡೆ ನೋಡಿ, ಕತ್ತು ಅಡ್ಡವಾಗಿಸಿತು. ಮಹಾರಾಜರು ಹೇಳಿದರು – ಶ್ರೀರಾಮನು ಈ ಕತ್ತೆಯ ಮೇಲೆ ಕೃಪೆ ಮಾಡಿದ, ಇನ್ನು ಇದಕ್ಕೆ ಮುಂದಿನ ಜನ್ಮ ಒಳ್ಳೆಯದಾಗುವುದು.

ಶ್ರೀಮಹಾರಾಜರ ಮೋರಗಿರಿಯಲ್ಲೂ ರಾಮಮಂದಿರ ಇದೆ. ಅಲ್ಲಿ ವಾಮನರಾವ ಪೆಂಢಾರಕರ್ ಎಂಬ ಓರ್ವ ರಾಮೋಪಾಸಕರಿದ್ದರು. ಅವರ

ವಿವಾಹವಾಗಿ ಅವರಿಗೆ ಬೇಗನೇ ಮಕ್ಕಳಾಗಲಿಲ್ಲ. ಇಪ್ಪತ್ತು ವರ್ಷ ಕಳೆದ ಮೇಲೆ ಅವರಿಗೆ ಪುತ್ರಪ್ರಾಪ್ತಿಯಾಯಿತು. ಮನೆ ಆನಂದದಿಂದ ತುಂಬಿತು, ಆದರೆ ಈ ಆನಂದ ಹೆಚ್ಚು ದಿನ ಉಳಿಯಲಿಲ್ಲ. ಆ ಮಗು ಕಾಯಿಲೆ ಬಿತ್ತು . ಅನೇಕ ವೈದ್ಯರು, ಡಾಕ್ಟರರು ಆದರು, ಆದರೆ ಮಗು ಚೇತರಿಸಿಕೊಂಡಿಲ್ಲ. ಕೊನೆಗೆ ಅವರಿಬ್ಬರೂ ಪತಿ-ಪತ್ನೀಯರು ಆ ಮಗುವನ್ನೆತ್ತಿಕೊಂಡು ಗೊಂದವಲೆಗೆ ಬಂದರು. ಆ ಮಗುವಿನ ಆಯುಷ್ಯ ಅಷ್ಟೇ ಇತ್ತು, ಯಾರ ಜೀವನ ಕಾಲ ಎಷ್ಟು ಹೆಚ್ಚು-ಕಡಿಮೆ ಇದು ಸರ್ವಸ್ವೀ ಈಶ್ವರಾಧೀನ ವಾಗಿರುತ್ತದೆ ಎಂದು ಶ್ರೀಮಹಾರಜರು ಇಬ್ಬರಿಗೂ ಸಮಜಾಯಿಸಿ ಹೇಳಿದರು, ಮಗುವಿನ ತಲೆಯನ್ನು ತಮ್ಮ ತೊಡೆಯಲ್ಲಿ ಇಟ್ಟುಕೊಂಡರು. ಅದರ ಬಾಯಿಗೆ ರಾಮತೀರ್ಥ ಹಾಕಿದರು, ಕಿವಿಯಲ್ಲಿ ತುಳಸೀ ಇಟ್ಟರು, ಆ ಮಗುವಿಗೆ ಆನಂದವಾಗಿ ಗಮಿಸಲು ಹೇಳಿದರು. ಮಗು ಶಾಂತವಾಗಿ ಹೊರಟು ಹೋಯಿತು. ಅದರ ತಂದೆ-ತಾಯಿಯರು ಪುತ್ರಮೃತ್ಯುವನ್ನು ಶಾಂತವಾಗಿ ಸ್ವೀಕರಿಸಿದರು. ಸುಮ್ಮನೇ ಆಕ್ರೋಶ, ಅಳು, ಗದ್ದಲ ಇಲ್ಲ. ಬದಲಿಗೆ ಅವರಿಬ್ಬರೂ ಶ್ರೀಮಹಾರಾಜರು ಹೇಳಿದಂತೆ ದಾನ ಧರ್ಮ ಮಾಡಿದರು.

ನಾಸ್ತಿಕರಾದರೂ ಕೂಡ ಶ್ರೀಮಹಾರಾಜರ ಸಂಗದಿಂದ ಆಸ್ತಿಕರಾದರು. ಕೆಲವು ಜನರಾದರೋ ಅವರ ನಿಂದಕರಾಗಿದ್ದವರೂ ಕೂಡ ಅವರ ಭಕ್ತರಾದರು. ಅಪ್ಪಾಸಾಹೇಬ ಭಡಗಾವಕರರ ಪರಿಚಾರಕ ಬಾಳಕೋಬಾ ಎಂಬುವರು ಸ್ನೇಹಿಯಾಗಿದ್ದರು. ಅವರು ಯಾವಾಗಲೂ ಸಾಧು ಸಂತರನ್ನು ನಿಂದಿಸುತ್ತಿದ್ದರು. ಅವರು ಶ್ರೀಮಹಾರಾಜರಿಗೂ ಹೆಸರಿಡುತ್ತಿದ್ದರು, ಹಾಗಂತ ಅವರು ಪಂಢರಪುರದವರು, ಆದರೆ ಶ್ರೀಮಹಾರಾಜರನ್ನು ಪ್ರತ್ಯಕ್ಷ ನೋಡದೆಯೇ ಅವರ ನಿಂದೆ ಮಾಡುತ್ತಿದ್ದ . ಕೆಲದಿನ ಕಳೆಯಿತು, ಅವರ ಮತ್ತು ಮಹಾರಾಜರ ಬೆಟ್ಟಿಯಾಯಿತು, ಶ್ರೀಮಹಾರಾಜರ ಮಾತಿನ ಶೈಲಿ, ಅದರಲ್ಲಿನ ಭಕ್ತಿ ಹಾಗೂ ಭೆಟ್ಟಿಯಾದ ವ್ಯಕ್ತಿಯನ್ನು ಆತ್ಮೀಯವಾಗಿ ಕಾಣುವ ವೃತ್ತಿ ನೋಡಿ ಅವರು ಪ್ರಭಾವಿತರಾದರು. ಅವರು ಶ್ರೀಮಹಾರಾಜರೊಂದಿಗೆ ಅತಿಶಯ ಆತ್ಮೀಯರಾಗಿ ವರ್ತಿಸ ತೊಡಗಿದರು. ಕೆಲವೊಮ್ಮೆ ಮಾತನಾಡುವಾಗ ಹಳಿ ತಪ್ಪುತ್ತಿತ್ತು. ಶ್ರೀಮಹಾರಾಜರು ಮಾತ್ರ ಅವರೊಂದಿಗೆ ಪ್ರೇಮದಿಂದ ನಡೆಯುತ್ತಿದ್ದರು, ಒಂದು ದಿನ ಅವರು ಬಾಳಕೋಬರಿಗೆ ಹೇಳಿದರು - ನೀವು ರಾಮನಾಮ ಜಪಿಸುತ್ತಾ ಹೋಗಿ, ಕಾಲಗತಿ ಹೇಳಲಾಗುವುದಿಲ್ಲ. ಬಾಳಕೋಬಾ ಕೇಳಿದರು - ನಾನು ಸುಮ್ಮನೆ ರಾಮನಾಮ ಜಪಿಸಲು ಸಮಯ ಕಳೆಯಲಾರೆ, ನಾನೇ ಜಪ ಮಾಡುವುದಾದರೆ ನಿಮ್ಮ

ಉಪಯೋಗವೇನು? ಶ್ರೀಮಹಾರಾಜರು ಹೇಳಿದರು – ನಾನು ಮಾಡುವುದನ್ನು ನಾನು ಮಾಡುತ್ತೇನೆ, ಆದರೆ ನೀವು ನಿತ್ಯ ಕನಿಷ್ಟ ಒಂದು ಸಲವಾದರೂ ರಾಮನಾಮ ಜಪಿಸಿರಿ, ಪ್ರತಿದಿನ ರಾತ್ರೆ ಮಲಗುವ ಮೊದಲು ರಾಮನಾಮ ಜಪಿಸಿರಿ, ಶ್ರೀಮಹಾರಾಜರು ಬಾಳಕೋಬಾರ ಅಂತರ್ಯವನ್ನು ನಾಮರೂಪದಿಂದ ಪ್ರವೇಶಿಸಿದರು. ಮುಂದೆ ಅವರಿಗೆ ಕ್ಷಯರೋಗ ಉಂಟಾಯಿತು, ಔಷಧೋಪಚಾರ ಮಾಡಿಯೂ ವ್ಯಾಧಿ ವಾಸಿಯಾಗಲಿಲ್ಲ. ಕೊನೆಗೆ ಅವರು ಶ್ರೀಮಹಾರಾಜರ ಬಳಿಗೆ ಬಂದು ಹೇಳಿದರು – ಈಗ ನನ್ನ ಅಂತ್ಯಕಾಲ ಹತ್ತಿರ ಬಂದಿದೆ, ನಾನು ತಮ್ಮ ತೊಡೆಯಲ್ಲಿ ತಲೆಯನ್ನಿಟ್ಟು ಮೃತ್ಯುವನ್ನು ಸ್ವಾಗತಿಸುತ್ತೇನೆ, ಈಗ ಬಾಳಕೋಬಾ ನಾಸ್ಮರಣೆಯಲ್ಲಿ ಮಗ್ನರಾಗಿದ್ದರು. ಅವರು ನಾಮದ ನಾದದಲ್ಲೇ ಇದ್ದರು. ಅತ್ಯಂಕಾಲ ಹತ್ತಿರ ಬಂದಾಗ ಅವರು ತಮ್ಮ ತಲೆಯನ್ನು ಶ್ರೀಮಹಾರಾಜರ ತೊಡೆಯಲ್ಲಿ ಇಟ್ಟರು. ಬಾಯಿಯಲ್ಲಿ ರಾಮನಾಮವಿತ್ತು , ಅವರ ಪ್ರಾಣೋತ್ಕ್ರಮಣವಾಯಿತು. ಅವರಿಗೆ ಉತ್ತಮ ಗತಿ ಪ್ರಾಪ್ತವಾಯಿತು. ಹೀಗೆಯೇ ಇನ್ನೊಬ್ಬ ಜಮಖಂಡಿಯ ತರುಣನಿಗೆ ಶ್ರೀಮಹಾರಾಜರು ಉತ್ತಮ ಗತಿ ದೊರಕಿಸಿಕೊಟ್ಟರು.

ಪುಣೆಯ ನಾಲ್ವರು ತರಣ ಮಕ್ಕಳು ಒಮ್ಮೆ ಶ್ರೀಮಹಾರಾಜರ ದರ್ಶನ ಮಾಡಿ ಹೋದರು. ಒಂದು ತಿಂಗಳು ಆದಾಗ ಅವರಿಗೆ ಪುನಃ ದರ್ಶನ ಪಡೆಯುವ ಇಚ್ಛೆಯುಂಟಾಯಿತು. ಆ ಮಕ್ಕಳು ಗೊಂದವಲೆಗೆ ಬಂದರು. ಆಗ ಗೊಂದವಲೆಯಲ್ಲಿ ಪ್ಲೇಗಿನ ಮಾರಿ ಆವರಿಸಿತ್ತು. ಸುರಕ್ಷಿತವಾಗಿ ಊರ ಹೊರಗೆ ವ್ಯವಸ್ಥೆ ಇದ್ದವರಿಗೆ ಊರ ಹೊರಗೆ ಕಳಿಸಲಾಯಿತು. ಈ ಹುಡುಗರು ಬಂದಾಗ ಮಹಾರಾಜರು ಅವರ ಸ್ವಾಗತ ಮಾಡಿದರು. ಅವರಿಗೆ ಊರಿನ ಪರಿಸ್ಥಿತಿ ತಿಳಿಸಿದರು. ಬಂದಿದ್ದೀರಿ ಇಂದು ರಾತ್ರೆ ಇರಿ, ಇಲ್ಲಿರುವುದೂ ಸದ್ಯಕ್ಕೆ ಸುರಕ್ಷಿತವಿಲ್ಲಾ. ನಾಳೆ ಬೆಳಿಗ್ಗೆ ನೀವೆಲ್ಲರೂ ಪುಣೆಗೆ ಮರಳಿ ಹೋಗಿ ಎಂದು ಮಹಾರಾಜರು ಹೇಳಿದರು. ಮರುದಿನ ಬೆಳಗಿನ ಝಾವ ಎದ್ದು, ಒಂದು ದೊಡ್ಡ ತಪಲೆ ತೆಗೆದುಕೊಂಡು ಮನೆ–ಮನೆಗೆ ಹೋಗಿ ನೀರು ಕೇಳಿ ತಂದರು. ಹುಡುಗರು ಏಳುವಷ್ಟರಲ್ಲಿ ಸ್ವತಃ ಸ್ನಾನ ಮಾಡಿಕೊಂಡರು. ಬರೇ ಝುಣಕಾ–ಅನ್ನ ಇತ್ತು ಆದರೆ ಅದರ ರುಚಿ ವಿಲಕ್ಷಣವಾಗಿತ್ತು . ಶ್ರೀಮಹಾರಾಜರು ಹುಡುಗರನ್ನು ಬೀಳ್ಕೊಟ್ಟರು. ಈ ಮಹಾರಾಜರ ಆತಿಥ್ಯ ಹುಡುಗರಿಗೆ ಚಿರಸ್ಮರಣೀಯದಲ್ಲಿತ್ತು .

'ಸಂತ' ಈ ಶಬ್ದದ ಅರ್ಥ ತುಂಬಾ ವ್ಯಾಪಕವಾಗಿದೆ. ಅವರ ಚರಿತ್ರೆ ಕೇವಲ ಘಟನೆ ಹೇಳಿ ಎಂದೂ ಪೂರ್ಣವಾಗುವುದಿಲ್ಲ, ಅಲ್ಲಿ ಭಕ್ತಿ ಭಾವ ಇರುತ್ತದೆ. ಅವರ ಜೀವನದಲ್ಲಿ ಅವರ ಸಾಧನ ಸಾಮರ್ಥ್ಯದಿಂದ ಚಮತ್ಕಾರ ಘಟಿಸುತ್ತವೆ. ಅವರು

ಬೇಕಂತ ಚಮತ್ಕಾರ ಮಾಡುವುದಿಲ್ಲ, ಆದರೆ ಅನೇಕ ಸಲ ಚರಿತ್ರ ಲೇಖಕ ಘಟನೆ ಮತ್ತು ಚಮತ್ಕಾರಗಳಿಗೆ ದೊಡ್ಡ ಸ್ಥಾನ ಕೊಡುತ್ತಾನೆ ಮತ್ತು ಓದುಗರಿಗೂ ಅದೇ ಹೆಚ್ಚು ಇಷ್ಟವಾಗುತ್ತವೆ. ಯಾವುದೇ ಪರಿಸ್ಥಿತಿಯಲ್ಲಿ, ಸಂಕಟಕಾಲದಲ್ಲಿ ಯಾರಿಗೆ ಭಗವಂತನ ಅನುಸಂಧಾನ ಸದಾ ಇರುತ್ತದೋ ಅವನೇ ನಿಜ ಸಂತನಾಗಿರುತ್ತಾನೆ. ಸಂತರ ಚರಿತ್ರೆ ಬರೆಯುವವರಿಗೆ ಘಟನೆಗಳ ವಿವರ ತಿಳಿಯಲೇಬೇಕು, ಇದರ ಜೊತೆಗೆ ಅವರ ಅಖಂಡ ನಾಮಸಧಾನೆ ಸತತವಾಗಿ ಇರಬೇಕು, ಎಂಬುದು ಮಹಾರಾಜರ ನಿಶ್ಚಿತಮತವಾಗಿದೆ.

ಭಾವುಸಾಹೇಬ ಎಂಬ ಓರ್ವ ಗೃಹಸ್ಥರು ಗೊಂದವಲೆಗೆ ಬಂದರು. ಅವರು ಅರಣ್ಯ ವಿಭಾಗದಲ್ಲಿ ನೌಕರಿಗಿದ್ದು, ನಿವೃತ್ತರಾಗಿದ್ದರು. ಗೊಂದವಲೆಗೆ ಬಂದು ಆರು ತಿಂಗಳು ಇದ್ದರು. ಶ್ರೀಮಹಾರಾಜರ ವರ್ತನೆಯಿಂದ ಮತ್ತು ವ್ಯಕ್ತಿತ್ವದ ನಿರೀಕ್ಷಣೆಯಿಂದ ಒಮ್ಮೆಗೆ ಪ್ರಭಾವಿತರಾದರು. ಅವರಿಗೆ ತಿಳಿದ ಕೆಲವು ಘಟನೆಗಳನ್ನು ಅವರು ಬರೆದಿಟ್ಟರು. ಭಾವುಸಾಹೇಬರು ಅವರಲ್ಲಿ ಅವರ ಜನ್ಮತಿಥಿ, ಜನ್ಮ ಸಮಯ ಕೇಳಿದರು, ಮಹಾರಾಜರು ಹೇಳಿದರು. ಭಾವು ಸಾಹೇಬ ಹೇಳಿದರು - ಏನು ಆಶ್ಚರ್ಯ! ನಿಮ್ಮ ಮತ್ತು ನನ್ನ ಸಮಯ ಮತ್ತು ತಿಥಿ ಒಂದೇ ಆಗಿದೆ, ಶ್ರೀಮಹಾರಾಜರು ನಗತೊಡಗಿದರು. ಮತ್ತೆ ಶ್ರೀಮಹಾರಾಜರು ತಮ್ಮ ಸಮಯ ಮತ್ತು ತಿಥಿ ಹೇಳದೆ ಅವರ ಸಮಯ, ತಿಥಿ ಹೇಳಿದರು. ಭಾವುಸಾಹೇಬರಿಗೆ ಹೇಗೆ ಗಮನಕ್ಕೆ ಬರುವುದು? ಆದರೂ ಭಾವುಸಾಹೇಬರು ವಿಷಯ ಸಂಗ್ರಹಿಸಿ ಶ್ರೀ ಮಹಾರಾಜರ ಚರಿತ್ರವನ್ನು ಬರೆದು ಮುಗಿಸಿದರು. ಪೂರ್ಣವಾದ ಬಳಿಕ ಅವರು ಅದನ್ನು ಮಹಾರಾಜರಿಗೆ ತೋರಿಸಿದರು. ಶ್ರೀಮಹಾರಾಜರು ಅದರ ಮೇಲೆ ಕಣ್ಣಾಡಿಸಿ, ಹರಿದು ಹಾಕಿದರು. ಅಯ್ಯಾ! ಇದೇನು? ಭಾವುಸಾಹೇಬರಿಗೆ ಆಘಾತವಾಯಿತು. ಮಹಾರಾಜರು ಹೇಳಿದರು - ಸಂತರ ಚರಿತ್ರೆ ಬರೆಯುವವನು ಸ್ವತಃ ನಾಮಸಾಧನೆಯಲ್ಲಿ ಮುಳುಗಿ ಹೋಗಬೇಕು, ಅನಂತರ ಅವರ ಅನುಮತಿ ಪಡೆದು ಚರಿತ್ರೆ ಬರೆಯಬೇಕು.



-: ಇಪ್ಪತ್ತೇಳು :-

# ಭಕ್ತ ಪಾಲಕ ಶ್ರೀಮಹಾರಾಜರು

ನಮಗೆ ಒಳ್ಳೆಯದು - ಕೆಟ್ಟದ್ದು ತಿಳಿಯಬೇಕಾಗುತ್ತದೆ, ಅನೇಕ ಸಲ ನಮಗೆ ತಿಳಿಯುವುದಿಲ್ಲ. ಒಬ್ಬ ವ್ಯಕ್ತಿ ಒಳ್ಳೆಯವನೋ - ಕೆಟ್ಟವನೋ ಇದೂ ಕೂಡ ತಿಳಿಯುವುದಿಲ್ಲ. ಇದರಿಂದ ಹಿರಿಯರು ಅಥವಾ ಅಧಿಕಾರೀ ವ್ಯಕ್ತಿಯೂ ಹೇಳಿದುದನ್ನು ಸುಲಭ, ಸರಳ ಮಾತೂ ನಾವು ಕೇಳುವುದಿಲ್ಲ. ಮಳೆಗಾಲದ ದಿನಗಳಿದ್ದವು, ರಾತ್ರೆಯ ಸಮಯ, ಜನರು ರಾತ್ರಿಯ ಊಟ ಮುಗಿಸಿ ಮಲಗಲು ಸಿದ್ಧತೆ ಮಾಡುತ್ತಿದ್ದರು. ಶ್ರೀಮಹಾರಾಜರೂ ಮಲಗಲು ಹೋಗುವವರಿದ್ದರು, ಅಷ್ಟರಲ್ಲಿ ಹೊರಗೆ ಹೋಗಲು ತಯಾರಾದರು, ನಾಗಪ್ಪ ಎಂಬ ಭಕ್ತನಿಗೆ ಲಾಟೇನು ಎತ್ತಿಕೊಂಡು ಜೊತೆಗೆ ಬರಲು ಹೇಳಿದರು. ಮಳೆ ಬರುತ್ತಿದ್ದುದರಿಂದ ನಾಗಪ್ಪ ಕಂದೀಲು ಮತ್ತು ಕೊಡೆ ಹಿಡಿದುಕೊಂಡು ಶ್ರೀಮಹಾರಾಜರೊಂದಿಗೆ ಹೊರಟನು. ಅವನೊಂದಿಗೆ ಅವರು ಊರಿನ ಮಾರುತಿ ಮಂದಿರಕ್ಕೆ ಹೋದರು. ಆ ಮಂದಿರ ಹತ್ತಿರ ಮುರುಕು ಮನೆಯೊಂದಿತ್ತು. ಅಲ್ಲಿ ಇಬ್ಬರು ದಾರಿ ಹೋಕರು ಆಸರೆಗಾಗಿ ಬಂದಿದ್ದರು. ಶ್ರೀಮಹಾರಾಜರು ಅವರ ಬಳಿಗೆ ಹೋಗಿ ಹೇಳಿದರು - ಮಳೆ ಬೀಳುತ್ತಾ ಇದೆ, ಮನೆ ಹಳೆಯದಾಗಿದೆ, ಗೋಡೆ ಯಾವಾಗ ಕುಸಿಯಬಹುದು ಎಂಬ ನಿಯಮವಿಲ್ಲ, ನಮ್ಮ ಮಂದಿರದಲ್ಲಿ ಬಂದು ಮಲಗಿರಿ, ಇಲ್ಲಿ ಸುರಕ್ಷಿತತೆ ಇಲ್ಲ. ಇಬ್ಬರಲ್ಲಿ ಒಬ್ಬನಿಗೆ ಶ್ರೀಮಹಾರಾಜರ ಮಾತು ಸರಿಕಂಡಿತು, ಅವನು ಹಸೆ ಮಡಚಿಕೊಂಡು ಮಹಾರಾಜರು ಮತ್ತು ನಾಗಪ್ಪ ಜೊತೆಗೆ ಮಂದಿರಕ್ಕೆ ಬಂದನು. ಇನ್ನೊಬ್ಬ ಮಾತ್ರ, ಅದಕ್ಕೇನಾಗುತ್ತದೆ, ಒಂದು ರಾತ್ರಿಯ ಪ್ರಶ್ನೆ ತಾನೇ! ಎಂದು ಹೇಳುತ್ತಾ ಅವನು ಹೋಗಲಿಲ್ಲ. ರಾತ್ರೆ ಅಲ್ಲೇ ಇದ್ದ. ರಾತ್ರೆ ಭಾರೀ ಮಳೆಬಂತು ಆ ಮನೆಯ ಗೋಡೆ ಕುಸಿದು ದಾರಿಹೋಕ ಮಣ್ಣಿನ ಅಡಿಗೆ ಬಿದ್ದು ಸತ್ತು ಹೋದ.

ತನ್ನ ಜೊತೆಯನಂತೆ ಅವನು ಶ್ರೀಮಹಾರಾಜರ ಒಂದು ಸಮಾನ್ಯ ಆಜ್ಞೆ ಪಾಲಿಸಿಲ್ಲ, ಅದರಿಂದ ಅವನು ಪ್ರಾಣ ಕಳೆದುಕೊಂಡ. ಪ್ರಾರಬ್ಧದ ತೀವ್ರತೆ ಹೀಗೆ ಇರುತ್ತದೆ. ಸಂತರಿಗೆ ತುಂಬಾ ದೂರದ ದೃಷ್ಟಿ ಇರುತ್ತದೆ, ಆದ್ದರಿಂದ ಅವರು ಹೇಳಿದುದನ್ನು ಪಾಲಿಸಬೇಕು. ಇಂತಹುದೇ ಒಂದು ಪ್ರಸಂಗ :- ಒಂದು ದಿನ ಮಧ್ಯಾಹ್ನ ನಿತ್ಯದ ಗ್ರಂಥಪಠಣ ನಡೆಯುತ್ತಿತ್ತು . ಭಾವಿಕ ಭಕ್ತರು ಶ್ರವಣಿಸುತ್ತಿದ್ದರು. ಇದ್ದಕ್ಕಿದ್ದಂತೆ ಶ್ರೀಮಹಾರಾಜರು ಎದ್ದರು. ಎಲ್ಲರಿಗೆ ಆಶ್ಚರ್ಯವಾಯಿತು, ಹೀಗೆ ಮಹಾರಾಜರ ಏಕಾಗ್ರತೆ ಎಂದೂ ಭಂಗವಾಗುವುದಿಲ್ಲ. ಅವರು ಅವರಸರದಿಂದ ಊರಿನ ನದಿತೀರಕ್ಕೆ ಬಂದರು, ಅಲ್ಲಿ ಒಂದು ಅರಳೀಮರವಿತ್ತು, ಆ ಮರದ ಕೊಂಬೆಗಳನ್ನು ಇಬ್ಬರು ಗರಗಸದಿಂದ ತುಂಡರಿಸಿ ಬರುತ್ತಿದ್ದರು. ಮಹಾರಾಜರು ಅವರಿಗೆ ಹೇಳಿದರು- ಮರ ಬಹಳ ಹಳೆಯದಾಗಿದೆ, ಜೀರ್ಣವಾಗಿದೆ, ಯಾವಾಗ ಕಿತ್ತು ಬೀಳುತ್ತದೋ ಹೇಳಲಾಗುವುದಿಲ್ಲ. ನೀವು ದೂರ ಹೋಗಿ. ಜನರು ಅವರ ಆಯುಧ ಎತ್ತಿಕೊಂಡು ದೂರ ಹೋದರು, ಕೆಲವೇ ಕ್ಷಣದಲ್ಲಿ ಅವರ ಎದುರಿಗೇ ಆ ಅರಳೀಮರ ಬುಡಮೇಲಾಗಿ ಉರುಳಿತು. ಜನರು ಅವಾಕ್ಕಾದರು. ಅವರು ಮಹಾರಾಜರ ಚರಣಗಳಲ್ಲಿ ಕೃತಜ್ಞತೆಯಿಂದ ಶಿರವನ್ನಿಟ್ಟರು.

ಸಂತರು ಎಲ್ಲರ ಯೋಗಕ್ಷೇಮದ ಚಿಂತೆ ಮಾಡುತ್ತಾರೆ. ಕರ್ನಾಟಕದ ಗದುಗಿನ ಘಟನೆಯಾಗಿದೆ ಇದು. ಗದಗಿನ ಭಾವುಸಾಹೇಬ ಕೇತಕರ್‌ರವರ ಮೂರನೆಯ ಮಗನ ವಿವಾಹದ ಸಮಯದ ಕಥೆಯಾಗಿದೆ. ಅವನ ಹೆಸರು ರಾಮಚಂದ್ರ , ಅವನನ್ನು ತಾತ್ಯಾ ಎಂದು ಸಂಬೋಧಿಸುತ್ತಿದ್ದರು. ಅವನಿಗಾಗಿ ಕನ್ಯೆಯನ್ನು ಮಹಾರಾಜರೇ ಹುಡುಕಬೇಕು ಎಂಬ ಇಚ್ಛೆ ಅವರದಾಗಿತ್ತು . ಸಾಂಗಲಿಯ ಗೋಖಲೆಯವರ ಎರಡನೆಯ ಕನ್ಯೆಯನ್ನು ಮಹಾರಾಜರು ನಿಶ್ಚಯಿಸಿದರು. ಮದುವೆ ಗೊಂದವಲೆಯಲ್ಲೇ ಆಗುವುದೆಂದು ನಿಶ್ಚಯಿಸಲಾಯಿತು. ವಿವಾಹ ಮುಹೂರ್ತ ಬೆಳಗಿನದಾಗಿತ್ತು . ಶ್ರೀಮಹಾರಾಜರ ಉಪಸ್ಥಿತಿಯಲ್ಲೇ ಅಕ್ಕಿಕಾಳು ಬೀಳುವುದು, ಆದರೆ ಮಹಾರಾಜರು ಮಲಗಿದ್ದರು. ಗಾಢ ನಿದ್ದೆಯಲ್ಲಿದ್ದ ಅವರನ್ನು ಎಚ್ಚರಿಸಲು ಯಾರಿಗೂ ಧೈರ್ಯವಾಗಲಿಲ್ಲ. ಮಹಾರಾಜರು ಏಳಲೊಲ್ಲರು ಮುಹೂರ್ತ ಕಳೆಯಿತು, ಮಧ್ಯಾಹ್ನದಾಟಿತು, ಸಂಜೆಯೂ ಆಯಿತು. ಸೂರ್ಯಾಸ್ತವಾಗಿ ಏಳುಗಂಟೆಯ ಬಳಿಕ ಅವರು ಎಚ್ಚರರಾದರು. ಎದ್ದ ಮೇಲೆ ಹೇಳಿದರು, 'ನನ್ನನ್ನು ಏಕೆ ಎಬ್ಬಿಸಲಿಲ್ಲ? ನಮ್ಮಲ್ಲಿ ವಿವಾಹವಿದೆಯಲ್ಲ? ನಡೀರಿ, ಹೊತ್ತು ಕಳೆಯಬಾರದು. ಮದುಮಗನಿಗಾಗಿ ಬತಾಶಾ ಕುದುರೆಯನ್ನು ಅಲಂಕರಿಸಿದರು. ಬಾತಾಶಾ ಕೇವಲ ಮಹಾರಾಜರ ಆಜ್ಞೆಯಲ್ಲಿ ಇರುವವ.

ಶ್ರೀಮಹಾರಾಜರು ಸ್ವತಃ ಕುದುರೆ ಹಿಡಿದು ತಂದರು, ಶ್ರೀಮಹಾರಾಜರ ಉಪಸ್ಥಿತಿಯಲ್ಲಿ ಎಲ್ಲ ಧಾರ್ಮಿಕ ವಿಧಿಗಳು ನಡೆದವು. ಪ್ರತ್ಯಕ್ಷದಲ್ಲಿ ಲಗ್ನವು ರಾತ್ರೆ ಗಂಟೆ ಹನ್ನೆರಡು ದಾಟಿದ ಮೇಲೆ ನಡೆಯಿತು. ರಾತ್ರಿಯ ಹೊತ್ತು ವಧೂ-ವರರ ತಲೆಯ ಮೇಲೆ ಅಕ್ಷತೆ ಬೀಳುವುದು, ಅನೇಕರಿಗೆ ವಿಚಿತ್ರವಾಗಿ ಅನಿಸಿತು. ಆ ವಿವಾಹ ಮಂಟಪದಲ್ಲಿ ಓರ್ವ ತಜ್ಞ ಜ್ಯೋತಿಷಿಗಳಿದ್ದರು. ಜ್ಯೋತಿಷಿ ಗೋಖಲೆಯವರೊಂದಿಗೆ ಬಂದಿದ್ದರು, ಅವರ ಮಿತ್ರರಾಗಿದ್ದರು ಜ್ಯೋತಿಷಿ. ವಿವಾಹ ನೆರವೇರಿದ ಸಮಯವನ್ನು ಜ್ಯೋತಿಷಿ ಪಂಚಾಂಗ ನೋಡಿದರು – ಆ ಸಮಯ ವಿವಾಹಕ್ಕೆ ಅತ್ಯುತ್ತಮವಾಗಿತ್ತು .

ಮಹಾರಾಜರ ಭಕ್ತರ ಸಂಖ್ಯೆ ಅಗಣಿತವಾಗಿತ್ತು . ಅನೇಕ ಸಲ ಭಕ್ತ ಮಂಡಳಿಯು ಶ್ರೀಮಹಾರಾಜರ ಮುಂದೆ ಮತ್ತು ಶ್ರೀರಾಮನ ಮುಂದೆ ಹಣ, ಹಣ್ಣು ಇಡುತ್ತಿದ್ದರು. ಆಯೀ ಸಾಹೇಬರಿಗೂ ನಮಸ್ಕರಿಸುತ್ತಿದ್ದರು. ಅವರ ಮುಂದೆಯೂ ಧನ, ಖಣ, ಸೀರೆ, ಒಡವೆ, ಚಿನ್ನ-ಬೆಳ್ಳಿ ಮುಂತಾದವುಗಳನ್ನು ಶ್ರದ್ಧೆಯಿಂದ ಇಡುತ್ತಿದ್ದರು. ಶ್ರೀರಾಮನ ಮುಂದೆ ಮತ್ತು ಶ್ರೀಮಹಾರಾಜರ ಮುಂದೆ ಇರಿಸಿದೆಲ್ಲವನ್ನೂ ಬರುವ ಜನರಿಗೆ ಹಂಚಿಬಿಡುತ್ತಿದ್ದರು. ಆಯಿಸಾಹೇಬರು ಮಾತ್ರ ತಮ್ಮ ಬಳಿ ಇಟ್ಟುಕೊಳ್ಳುತ್ತಿದ್ದರು. ಎರಡು ದೊಡ್ಡ ಟ್ರಂಕ್‌ಗಳು ತುಂಬಿ ಹೋದವು. ಮುಂದೆ ಅವರು ಕಾಯಿಲೆ ಬಿದ್ದರು. ನೆಗಡಿ-ಕೆಮ್ಮು ಆಗಿ ಎದೆಯಲ್ಲಿ ಕಫ ತುಂಬಿತು, ಜ್ವರ ಬಂತು, ಮಹಾರಾಜರು ಭಟಜೀಯವರನ್ನು ಕರೆಸಿಕೊಂಡರು, ಸಂಕಲ್ಪ ಮಾಡಿಸಿ, ಎರಡೂ ಟ್ರಂಕ್‌ಗಳಲ್ಲಿದ್ದ ವಸ್ತುಗಳನ್ನು ಊರಿನ ಸ್ತ್ರೀಪುರುಷರಿಗೆ ಹಂಚಿಬಿಟ್ಟರು. ಮಹಾರಾಜರು ಹೇಳಿದರು- ಇನ್ನು ನಿನ್ನ ಯಾವುದೇ ಭರವಸೆ ಇಲ್ಲ.

ಓಮ್ಮೆ ಓರ್ವ ದಶಗ್ರಂಥಿ ಚಿಂತಾಮಣಿ ಎಂಬ ವೈದಿಕ ಬ್ರಾಹ್ಮಣ ಗೊಂದವಲೆಗೆ ಬಂದರು. ಅವರು ಸಾತ್ವಿಕರಾಗಿದ್ದು ಕರ್ನಾಟಕದವರಾಗಿದ್ದರು. ಅವರಿಗೆ ಪ್ರಂಚಡ ಹೊಟ್ಟೆನೋವು ಇತ್ತು . ಅನ್ನವು ಶತ್ರುವಿನಂತೆ ಆಗಿತ್ತು . ತಿಂದುಣ್ಣುವ ಇಚ್ಛೆ ಇದ್ದರೂ ಉಪಯೋಗವಿಲ್ಲ. ಸ್ವಲ್ಪ ತಿಂದರೂ ಹೊಟ್ಟೆ ನೋಯುತ್ತಿತ್ತು . ಮರಣಪ್ರಾಯ ವೇದನೆಯಾಗುತ್ತಿತ್ತು . ಅಂದು ಅವನು ಮಧ್ಯಾಹ್ನ ಎರಡರ ಸುಮಾರಿಗೆ ಗೊಂದವಲೆಗೆ ತಲುಪಿದನು. ಅಂದು ಯಾರೋ ಶ್ರೀರಾಮನಿಗೆ ವಿಶೇಷ ನೈವೇದ್ಯ ಮಾಡಿಸಿದ್ರು. ಭೋಜನ ಪ್ರಸಾದಕ್ಕೆ ತಡವಾಗಿತ್ತು . ಜನರು ತಯಾರು ಮಾಡಿ ಊಟಕ್ಕೆ ಕುಳಿತರು ಶ್ರೀಮಹಾರಾಜರು ಚಿಂತಾಮಣಿಯವರನ್ನು ಕರೆದರು, ಚಿಂತಾಮಣಿ ಹೇಳಿದರು – ಮಹಾರಾಜರೇ! ಕ್ಷಮಿಸಬೇಕು, ಅನ್ನ ನನ್ನ ಶತ್ರುವಾಗಿದೆ, ಸ್ವಲ್ಪ ತಿಂದರೂ ಹೊಟ್ಟೆ ಶೂಲೆ ಬರುತ್ತದೆ. ಮಹಾರಾಜರು ಹೇಳಿದರು – ರಾಮಪ್ರಸಾದಕ್ಕೆ ಬಾಧೆ ಇಲ್ಲ, ಅವರು

ಅವರಿಗೆ ಹೊಟ್ಟೆತುಂಬಾ ಊಟ ಹಾಕಿದರು. ಅವರು ಶ್ರೀಮಹಾರಾಜರ ಆಗ್ರಹದಿಂದ ಹೆದರಿ-ಹೆದರಿ ಊಟ ಮಾಡಿದರು. ಅವರಿಗೆ ಹೊಟ್ಟೆನೋವು ಅಂದಿನಿಂದ ಪೂರ್ಣ ಮಾಯವಾಯಿತು. ಈ ಹಿಂದೆ ಅವರು ಅನೇಕ ಉಪಾಚರ ಮಾಡಿಸಿಕೊಂಡಿದ್ದರು, ಆದರೆ ಏನೂ ಉಪಯೋಗ ಆಗಿರಲಿಲ್ಲ. ರಾಮಪ್ರಸಾದದ ಪ್ರಭಾವ ಮಾತ್ರ ವಿಲಕ್ಷಣವಾಗಿತ್ತು.

ಗೋಮೇವಾಡಿಯ ಪಾಟಿಲರ ಕಥೆ ಹೀಗಿದೆ - ಅವರಿಗೆ ಶ್ರೀಮಹಾರಾಜರ ಮೇಲೆ ಅಚಲ ಶ್ರದ್ಧೆ ಇತ್ತು. 1872ರಲ್ಲಿ ಅವರು ಶ್ರೀಮಹಾರಾಜರಿಂದ ನಾಮ ಪಡೆದರು. ಪರಮ ಶ್ರದ್ಧೆಯಿಂದ ಅವರು ಸಾಧನೆ ಮಾಡಿದರು. ಶ್ರೀಮಹಾರಾಜರು ಕೊಟ್ಟ ಪಾದುಕೆಗಳನ್ನು ನಿತ್ಯ ಪೂಜಿಸುತ್ತಿದ್ದರು, ಪಾದುಕೆಗಳಿಗೆ ನೈವೇದ್ಯ ಮಾಡಿಯೇ ಮತ್ತೆ ಅವರು ಅನ್ನ ಗ್ರಹಣ ಮಾಡುತ್ತಿದ್ದರು. ಪಾಟೀಲರ ಸಾಧನೆಗೆ ಇಪ್ಪತ್ತೈದು ವರ್ಷವಾಯಿತು. 1897ರಲ್ಲಿ ಶ್ರೀಮಹಾರಾಜರು ಅವರನ್ನು ಉತ್ಸವಕ್ಕಾಗಿ ಗೊಂದವಲೆಗೆ ಕರೆಸಿದರು. ಪಾಟೀಲರು ಗೊಂದವಲೆಗೆ ಬಂದರು. ಉತ್ಸವ ನೆರವೇರಿತು, ಮುಂದೆ ಅವರು ಎಂಟುದಿನಗಳಲ್ಲಿ ತಮ್ಮ ಊರು ಗೋಮೆವಾಡಿಗೆ ಹೊರಟರು. ಅವರನ್ನು ಬೀಳ್ಕೊಳ್ಳುವಾಗ ಶ್ರೀಮಹಾರಾಜರು ಒಂದು ತೆಂಗಿನ ಕಾಯಿ ಕೊಟ್ಟು ಹೇಳಿದರು - ಇಂದಿನವರೆಗೆ ನೀವು ನನಗೆ ಬೆಲ್ಲದ ನೈವೇದ್ಯ ಮಾಡಿದಿರಿ, ನನಗೆ ಬೆಲ್ಲ ಬೇಸರ ಬಂದಿದೆ, ನಾಳೆಯಿಂದ ನೀವು ಉಳ್ಳಾಗಡ್ಡಿ ರೊಟ್ಟಿಯ ನೈವೇದ್ಯ ಮಾಡಿ. ಈ ತೆಂಗಿನಕಾಯಿ ದೇವರ ಮನೆಯಲ್ಲಿ ಇಡಿರಿ. ನಿಮ್ಮ ಕಡೆ ಬಂದಾಗ ನಾನು ಅದನ್ನು ಒಡೆಯುವೆನು.

ಶ್ರೀಮಹಾರಾಜರನ್ನು ಬೀಳ್ಕೊಂಡು ಪಾಟಿಲರು ತಮ್ಮ ಊರಿಗೆ ಹೊರಟರು. ದೇವರ ಬಳಿ ಅವರು ಕೊಟ್ಟ ತೆಂಗಿನಕಾಯಿ ಇಟ್ಟರು. ಈಗ ಅವರು ನಿತ್ಯ ದೇವರಿಗೆ ಉಳ್ಳಾಗಡ್ಡಿ - ರೊಟ್ಟಿಯ ನೈವೇದ್ಯ ಮಾಡತೊಡಗಿದರು. ಪ್ರತಿಯೊಂದು ವ್ಯಕ್ತಿಯ ಜೀವನದಲ್ಲಿ ಪ್ರಪಾಂಚಿಕ, ಆರ್ಥಿಕ ದೃಷ್ಟಿಯಿಂದ ಏರಿಳಿತಗಳು ಬರುತ್ತವೆ, ಮಧ್ಯದಲ್ಲಿ ಅವರ ಪರಿಸ್ಥಿತಿ ಸ್ವಲ್ಪ ಕೆಟ್ಟಿತು, ಕೆಲದಿನಗಳಲ್ಲಿ ಅದು ಪುನಃ ಸುಧಾರಿಸಿತು. ಪರಿಸ್ಥಿತಿ ಕೆಡುವುದು, ಸುಧಾರಿಸುವುದು ಇವೆರಡೂ ಸ್ಥಿತಿಗಳಲ್ಲಿ ಪಾಟೀಲರ ಮನೋಸ್ಥಿತಿ ಚೆನ್ನಾಗಿತ್ತು. ಅವರಲ್ಲಿನ ಶಾಂತತೆ ಮತ್ತು ಸಮಾಧಾನ ಎರಡೂ ಹಾಗೆಯೇ ಇತ್ತು. ನಾಮಸಾಧನೆಯಿಂದ ಅವರ ಪ್ರವೃತ್ತೀ ಆನಂದೀಯಾಗಿತ್ತು. ಪರಿಸ್ಥಿತಿ ಪುನಃ ಉತ್ತಮವಾಯಿತು. ಪಾಟೀಲರು ಸಂಸಾರ ಮತ್ತು ಎಲ್ಲ ಕರ್ಮಗಳ ಜವಾಬ್ದಾರಿ ಮಗನಿಗೆ ಒಪ್ಪಿಸಿದರು, ಸ್ವತಃ ನಾಮಸಾಧನೆಯಲ್ಲಿ ನಿಮಗ್ನರಾದರು. ಮುಂದೆ ಕೆಲವು

ಕಾಲದಲ್ಲಿ ಪಾಟೀಲರು ಕಾಯಿಲೆ ಬಿದ್ದರು, ಜ್ವರ ಏರಿತು, ಏಳನೆಯ ದಿನ ಸಾಯಂಕಾಲ ಅವರ ಮಾತು ನಿಂತಿತು, ವೈದ್ಯರನ್ನು ಕರೆತರಲಾಯಿತು, ಅವರು ಉಪಚಾರ ಮಾಡಿದರು, ವೈದ್ಯರ ಮಾತ್ರೆಯ ಪರಿಣಾವಾಯಿತು, ಮಾತು ಬಂದಾಗ ಪಾಟೀಲರು ತಮ್ಮ ಮಗನಿಗೆ ಹೇಳಿದರು – ನನ್ನ ರಾಮನು ನನ್ನನ್ನು ಕರೆಯುತ್ತಿದ್ದಾನೆ, ಬೇಗನೇ ಮಹಾರಾಜರು ಬಂದಾರು. ಇತ್ತ ಶ್ರೀಮಹಾರಾಜರು ಬತಾಶಾ ಹತ್ತಿ ಗೋಮೇವಾಡಿಗೆ ಹೊರಟರು. ರಾತ್ರೆ ಹನ್ನೆರಡರ ಸುಮಾರಿಗೆ ಪಾಟೀಲರ ಮನೆ ತಲುಪಿದರು, ಮನೆಗೆ ಹೋಗಿ ಅವರು ಪಾಟೀಲರನ್ನು ಭೆಟ್ಟಿಯಾದರು. ಅವರ ಮಸ್ತಕವನ್ನು ತಮ್ಮ ತೊಡೆಯಲ್ಲಿ ಪ್ರೇಮದಿಂದ ಇಟ್ಟುಕೊಂಡರು, ಪಾಟೀಲರು ಶ್ರೀಮಹಾರಾಜರನ್ನು ಕೇಳಿದರು – ನನಗೆ ಒಂದು ದೊನ್ನೆ ಮೊಸರು ಬೇಕು, ಸ್ವರ್ಗದಲ್ಲಿ ಮೊಸರು ಸಿಗಬಹುದೋ ಇಲ್ಲವೋ ತಿಳಿಯದು, ನನಗೆ ಮೊಸರು ಸಿಗಬಹುದೇ? ಶ್ರೀಮಹಾರಾಜರು ಒಂದು ದೊನ್ನೆ ಮೊರಸನ್ನು ತರಿಸಿದರು. ಅವರು ಹಿಂದೆ ಕೊಟ್ಟಿದ್ದ ತೆಂಗಿನಕಾಯಿಯನ್ನು ಒಡೆದು ಅದರ ನೀರು ಅವರು ಮೊಸರಿಗೆ ಬೆರೆಸಿ, ಪಾಟೀಲರಿಗೆ ತಿನ್ನಲು ಕೊಟ್ಟರು. ಪಾಟೀಲರು ಪೂರ್ಣತೃಪ್ತರಾಗಿ, ನಾಮ ಜಪಿಸುತ್ತಾ – ಜಪಿಸುತ್ತಾ ದೇಹ ಬಿಟ್ಟರು.

ಶ್ರೀಮಹಾರಾಜರು ಅನೇಕರಿಗೆ ಶ್ರೀರಾಮನಾಮ ಉಪದೇಶಿಸಿದರು. ಅವರ ತಾಪತ್ರಯದ, ಸಂಕಟಗಳ ಹೊಣೆಗಾರಿಕೆ ಹೊತ್ತರು. ಅವರು ನಿಜ ಅರ್ಥದಲ್ಲಿ ನಾಮಸಾಧನಾ ಮಾಡುವ ಶ್ರದ್ಧಾವಂತ ಭಕ್ತರ ಪಾಲಕರಾಗಿದ್ದರು. ಅವರು ಸರಕಾರಿ ಅಧಿಕಾರಿಗಳೊಂದಿಗೆ ಅತಿಶಯ ಆದರದಿಂದ ವರ್ತಿಸುತ್ತಿರುವಂತೆಯೇ ವಯೋವೃದ್ಧ ಜನರನ್ನು ಅಷ್ಟೆ ಆದರ ಮಾಡುತ್ತಿದ್ದರು. ಅತಿ ಸಾಮಾನ್ಯ ವ್ಯಕ್ತಿಯೊಂದಿಗೂ ಅವರು ವಿಲಕ್ಷಣ ಪ್ರೇಮದಿಂದ ನಡೆದು ಕೊಳ್ಳುತ್ತಿದ್ದರು. ಹೀಗೆಯೇ ಒಬ್ಬ ಕಾಳೆ ಎಂಬ ವ್ಯಕ್ತಿಯ ಘಟನೆ. ಕಾಳೆಯವರು ಇನ್ಸ್‌ಪೆಕ್ಟರ್ ಆಗಿದ್ದು, ಅತಿಶಯ ಪ್ರಾಮಾಣಿಕ ಮತ್ತು ದಕ್ಷ ಅಧಿಕಾರಿಯಾಗಿದ್ದರು. ಜನಮಾನಸದಲ್ಲಿ ಆದರವಿತ್ತು . ಒಂದು ದಿನ ಅವರು ತಮ್ಮ ಕ್ಷೇತ್ರದ ಇತರ ನಾಲ್ವರು ಅಧಿಕಾರಿಗಳನ್ನು ತಮ್ಮ ಮನೆಗೆ ಊಟಕ್ಕೆ ಕರೆದರು. ಅವರೊಂದಿಗೆ ಅವರು ಶ್ರೀಮಹಾರಾಜರಿಗೂ ಭೋಜನದ ಆಮಂತ್ರಣ ಕೊಟ್ಟರು. ಪಂಕ್ತಿ ಕುಳಿತುಕೊಂಡಿತು, ಬಡಿಸುವಾಗ ತುಪ್ಪ ಬಡಿಸಲು ತಡವಾಯಿತು, ಕಾಳೆಯವರು ತನ್ನ ಪತ್ನೀಯ ಮೇಲೆ ರೇಗಿದರು, ಎಲ್ಲರೆದುರು ಆಕೆಗೆ ಖಾರಮಾತುಗಳಿಂದ ಸಿಟ್ಟಾದರು. ಅವರ ಕಣ್ಣುಗಳಲ್ಲಿ ನೀರೂರಿತು. ಇತರ ಜನರೂ ಗಾಬರಿಗೊಂಡರು. ಶ್ರೀಮಹಾರಾಜರು ಅತಿಶಯ ಅರ್ಥಪೂರ್ಣ ದೃಷ್ಟಿಯಿಂದ ಕಾಳೆಯವರ ಕಡೆಗೆ

ನೋಡಿದರು. ತನ್ನ ತಪ್ಪಾಯಿತು ಎಂದು ಕಾಳೆಯವರಿಗೆ ಅನಿಸಿತು, ಅನಂತರ ಶ್ರೀಮಹಾರಾಜರು ಕಾಳೆಯವರಿಗೆ ಹೇಳಿದರು - ನಾಮ ಸಾಧಕರು ವಿಕಾರಗಳನ್ನು ಗೆಲ್ಲಬೇಕಾಗುತ್ತದೆ, ಅದರ ಮೇಲೆ ಹತೋಟಿ ಗಳಿಸಬೇಕು. ಸಣ್ಣ ವಿಷಯದಲ್ಲಿ ಕ್ರೋಧ ಪ್ರಕಟಪಡಿಸಿದರೆ ಸಾಧನೆಯ ಬಹಳ ದೊಡ್ಡ ಹಾನಿಯಾಗುತ್ತದೆ.

□□

- ಇಪ್ಪತ್ತೆಂಟು :-

# ಸಂಕಟ ಮೋಚಕ ಶ್ರೀಮಹಾರಾಜರು

ಶ್ರೀಮಹಾರಾಜರು ಭಕ್ತ ಪಾಲಕರಿದ್ದಂತೆ ಗೋಸೇವಕರೂ ಆಗಿದ್ದರು. ಅವರ ಗೋಶಾಲೆಯಲ್ಲಿ ತುಂಬಾ ಹಸುಗಳಿದ್ದವು. ಕೃಷ್ಣರಾವ ಭಿಕವಡೀಕರ್ ಎಂಬುವರು ಅವರ ಶಿಷ್ಯನಾಗಿದ್ದರು. ದೊಡ್ಡ ಹುದ್ದೆಯಲ್ಲಿ ಇದ್ದರು. ಅವನು ಗೋವುಗಳ ಸಂಖ್ಯೆ ನೋಡಿ ಒಂದು ದಿನ ಶ್ರೀಮಹಾರಾಜರಲ್ಲಿ ಹೇಳಿದ - ಮಹಾರಾಜ! ನಿಮ್ಮ ಗೋಶಾಲೆಯಲ್ಲಿ ಬಹಳ ಹಸುಗಳಿವೆ, ನನಗೆ ಮೇವು ಇತ್ಯಾದಿ ಪುಕ್ಕಟೆಯಾಗಿ ಸಿಗುತ್ತದೆ. ಅವುಗಳಲ್ಲಿ ನಾಲ್ಕು ಗೋವುಗಳು ಸಾಕಲು ಕೊಂಡು ಹೋಗಲೇ? ಮಹಾರಾಜರು ಹೇಳಿದರು - ಅದರ ಅವಶ್ಯಕತೆ ಇಲ್ಲ. ಇಲ್ಲಾದರೋ ನಾವು ಸೇವೆ ಮಾಡಿಯೇ ಮಾಡುತ್ತೇವೆ, ಆದರೆ ಸಾಕ್ಷಾತ್ ರಾಮನೆ ಅವುಗಳ ವ್ಯವಸ್ಥೆ ನೋಡಿಕೊಳ್ಳುವನು. ಆದರೆ ಕೃಷ್ಣರಾವ ಹಟವೇ ಹಿಡಿದರು. ನಾಲ್ಕು ಆಕಳುಗಳನ್ನು ಅವರು ತಮ್ಮ ಮನೆಗೆ ಸಾಕಲು ಕೊಂಡು ಹೋದರು. ಪ್ರಾರಂಭದಲ್ಲಿ ಅವರು ಆ ದನಗಳನ್ನು ಚೆನ್ನಾಗಿ ಸಾಕಿದರು. ಮುಂದೆ ಮಾತ್ರ ಅವುಗಳ ದುರ್ಲಕ್ಷವಾಗ ತೊಡಗಿತು, ಅವುಗಳಿಗೆ ಮೇವು - ನೀರು ಸಿಗದಷ್ಟು ದುರ್ಲಕ್ಷವಾಯಿತು. ಅವು ಉಪವಾಸ ಬಿದ್ದವು. ಆ ಗೋವುಗಳು ಸಾಯಲು ಮುಟ್ಟಿದರು.

ಇತ್ತ ಗೊಂದವಲೆಯಲ್ಲಿ ಶ್ರೀಮಹಾರಾಜರಿಗೆ ಸ್ವಪ್ನ ದೃಷ್ಟಾಂತವಾಯಿತು. ಆ ಕೃಷ್ಣರಾಯರ ಕಡೆಗಿದ್ದ ನಾಲ್ಕೂ ಹಸುಗಳು ಅವರ ಸ್ವಪ್ನದಲ್ಲಿ ಬಂದುವು. ಅವುಗಳ ಕಣ್ಣುಗಳಿಂದ ಸತತ ಅಶ್ರುಧಾರೆ ಹರಿಯುತ್ತಿತ್ತು . ಅವು ನಮ್ಮನ್ನು ಗೊಂದವಲೆಗೆ ಕೊಂಡು ಹೋಗುವಂತೆ ವಿನಂತಿಸುತ್ತಿದ್ದವೋ ಎಂಬತಿತ್ತು . ಮಹಾರಜರು ಚಡಪಡಿಸಿ ಎದ್ದು ಬಿಟ್ಟರು, ಅವರು ನೀಲಕಂಠ ಎಂಬ ಭಕ್ತನನ್ನು ಕರೆದು ಹೇಳಿದರು - ನೀಲಕಂಠ! ಆ ಕೃಷ್ಣರಾಯರ ಕಡೆಗೆ ಹೋಗಿ, ಅವರಲ್ಲಿ ನಮ್ಮ ಗೋಶಾಲೆಯ ನಾಲ್ಕು ಹಸುಗಳು ಇವೆ. ಅವನ್ನು ಕೂಡಲೇ ಗೊಂದವಲೆಗೆ ಕರೆದುಕೊಂಡು ಬಾ. ಹೋಗುವಾಗ ಆ

ಗೋಮಾತೆಯರಿಗಾಗಿ ಈ ರಾಮತೀರ್ಥ ಕೊಂಡುಹೋಗು. ಅಲ್ಲಿ ಮುಟ್ಟಿದಾಕ್ಷಣ ಅವುಗಳಿಗೆ ಮೊದಲು ರಾಮತೀರ್ಥ ಕುಡಿಸು ಮತ್ತು ಕೂಡಲೇ ಕರಕೊಂಡು ಬಾ ಬಹಳ ಉಪವಾಸ ಆಗಿದೆ ಅವುಗಳಿಗೆ.

ನೀಲಕಂಠನು ಕೃಷ್ಣರಾಯರಲ್ಲಿಗೆ ಹೋಗಿ, ಹಸುಗಳಿಗೆ ರಾಮತೀರ್ಥ ಕುಡಿಸಿದನು, ಕೃಷ್ಣರಾಯರಿಗೆ ಶ್ರೀ ಮಹಾರಾಜರ ಆಜ್ಞೆ ತಿಳಿಸಿದನು. ಮತ್ತು ಗೋವುಗಳನ್ನು ಗೊಂದವಲೆಗೆ ತಂದನು, ಆಕಳುಗಳು ಹಿಂದಕ್ಕೆ ಬರುವವರೆಗೆ ಶ್ರೀಮಹಾರಾಜರು ಬಾಯಿಗೆ ಅನ್ನದ ಅಗಳು ಹಾಕಲಿಲ್ಲ ನೀರ ಹನಿ ಸೇವಿಸಲಿಲ್ಲ. ದನಗಳು ಮರಳಿ ಬಂದವು. ಶ್ರೀಮಹಾರಾಜರ ದರ್ಶನ ವಾದಾಗ ಅವುಗಳ ಕಣ್ಣುಗಳಿಂದ ಅನಂದಾಶ್ರು ಹರಿದವು. ಅದರಲ್ಲಿನ ಒಂದು ಹಸು ಅಂಬಾ ಎಂದು ಕೂಗಿ ಅವರ ಚರಣಗಳಲ್ಲಿ ಕುಸಿತು ಬಿತ್ತು . ಶ್ರೀಮಹಾರಾಜರು ಬಹಳ ಪ್ರೇಮದಿಂದ ಆ ಹಸುವಿನ ತಲೆ ತಮ್ಮ ತೊಡೆಯಲ್ಲಿಟ್ಟುಕೊಂಡರು. ಅದರ ತಲೆಯನ್ನು ಸವರಿದರು, ಅದರ ಬಾಯಿಗೆ ರಾಮತೀರ್ಥ ಹಾಕಿದರು, ಈಗ ಅದರ ಆಯುಷ್ಯ ಮುಗಿಯುತ್ತಾ ಬಂದಿತ್ತು , ಆ ಹಸುವಿನ ಉತ್ತಮಗತಿಗಾಗಿ ಎಲ್ಲರೂ ಗಟ್ಟಿಯಾಗಿ ರಾಮನಾಮ ಹೇಳಲು ತೊಡಗಿದರು, ಗೋವು ಶ್ರೀಮಹಾರಾಜರ ತೊಡೆಯಲ್ಲೇ ಪ್ರಾಣ ಬಿಟ್ಟಿತು.

ಶ್ರೀಮಹಾರಾಜರು ಗೋಸೇವೆಯ ಮಹಾತ್ಮ್ಯೆಯನ್ನು ತಮ್ಮ ಭಕ್ತರಿಗೆ ತಿಳಿಸಿ ಕೊಡುತ್ತಿದ್ದರು. ಕೆಲವೊಮ್ಮೆ ಅವರು ಗೋಶಾಲೆಗೆ ಹೋಗಿ ಅವುಗಳ ಸೇವೆ ಮಾಡುತ್ತಿದ್ದರು. ಅಲ್ಲಿಯೇ ನಾಮಸ್ಮರಣೆ ಮಾಡುತ್ತಾ ಕುಳಿತುಬಿಡುತ್ತಿದ್ದರು. ಗೋವುಗಳಿಗೂ ಅವರ ಮೇಲೆ ಹೆಚ್ಚಿನ ಪ್ರಾಣವಿತ್ತು.

1905ರ ವರ್ಷ, ಶ್ರೀಮಹಾರಾಜರಿಗೆ ಕಾಶಿಗೆ ಹೋಗುವ ಇಚ್ಛೆ ಉಂಟಾಯಿತು. ಈ ಸಲ ಜೊತೆಗೆ ಹೆಚ್ಚಿನ ಜನರನ್ನು ಕರಕೊಳ್ಳದಿರುವಂತೆ ನಿಶ್ಚಯಿಸಿದರು, ಆದರೂ ಅವರ ಸಂಖ್ಯೆ ಇನ್ನೂರರಿಂದ ಹೆಚ್ಚಿಗೆ ಆಯಿತು. ಶ್ರಾವಣದಲ್ಲಿ ಮಹಾರಾಜರು ಪ್ರಯಾಗ ತಲುಪಿದರು. ಆಗ ಆಂಗ್ಲ ಆಗೋಸ್ತು ತಿಂಗಳಾಗಿತ್ತು . ನದಿಗಳಿಗೆ ನೀರು ತುಂಬಾ ಇತ್ತು . ನದಿಯ ಹತ್ತಿರದಲ್ಲೇ ಮಹಾರಾಜರು ಮತ್ತು ಜೊತೆಯ ಜನರ ನಿವಾಸಸ್ಥಾನವಿತ್ತು . ಜನರು ಅವರ ಇಚ್ಛೆಗನುಸಾರ ಧಾರ್ಮಿಕ ಕೃತ್ಯಗಳನ್ನು ಮಾಡಿದರು, ವೇಣೀದಾನ ಈ ವಿಧಿ ಉಳಿದಿತ್ತು . ವೇಣೀದಾನವು ಸಂಗಮದಲ್ಲೇ ಮಾಡುವುದಿರುತ್ತದೆ. ದಿನ ನಿಶ್ಚಯಿಸಲಾಯಿತು, ಹತ್ತು ಇಪ್ಪತ್ತು ದಂಪತಿಗಳ ವೇಣಿದಾನ ಮಾಡುವುದಿತ್ತು. ಒಂದು ದೊಡ್ಡ ದೋಣಿ ಗೊತ್ತು ಮಾಡಿದರು, ದೋಣಿಯು ಗಟ್ಟಿಮುಟ್ಟು ಮತ್ತು ಸುರಕ್ಷಿತ ಇರುವುದನ್ನು ದೃಢಪಡಿಸಿಕೊಂಡರು. ಎಲ್ಲ ಮಂಡಳಿಯನ್ನು ದೋಣಿಯಲ್ಲಿ ಕುಳ್ಳಿರಿಸಿ

ಶ್ರೀಮಹಾರಾಜರು ದೋಣಿಯಲ್ಲಿ ಕುಳಿತರು. ವೇಣೀದಾನ ಮಾಡದ ಜನರು ಸಂಗಮದ ತೀರದಲ್ಲೇ ಕುಳಿತಿದ್ದರು.

ದೋಣಿ ಹೊರಟಿತು, ಎಲ್ಲರೂ ಆನಂದದಲ್ಲೇ ಇದ್ದರು. ಅಷ್ಟರಲ್ಲಿ ಅದರ ಬುಡಕ್ಕೆ ತೂತು ಬಿದ್ದು ನೀರು ಒಳಬರ ತೊಡಗಿತು. ಅಂಬಿಗ ಬರುವ ನೀರನ್ನು ಪ್ರಯತ್ನ ಪೂರ್ವಕ ಹೊರ ಹಾಕುತ್ತಿದ್ದ. ಆದರೆ ಹೊರಗಿನಿಂದ ನೀರನ ರಭಸ ಹೆಚ್ಚಾಯಿತು. ಅಂಬಿಗರು ಕೈ ಚೆಲ್ಲಿದರು, ಮತ್ತೆ ಮಾತ್ರ ಮಂಡಳಿ ಪೂರ್ಣ ಗಾಬರಿಗೊಂಡರು. ಯಾರಿಗೆ ತ್ರಿವೇಣೀ ಸಂಗಮದಂತಹ ಅತ್ಯಂತ ಪವಿತ್ರ ಸ್ಥಳದಲ್ಲಿ ಮೃತ್ಯುಯೋಗ ಬರುತ್ತದೆ ಎಂದು ದೇವರಿಗೆ ಮತ್ತು ಶ್ರೀಮಹಾರಾಜರಿಗೆ ಮನಸಾರೆ ಧನ್ಯವಾದ ಅರ್ಪಿಸುವಂತಹ ಕೆಲವು ಅಪವಾದಾತ್ಮಕ ಜನರೂ ಇದ್ದರು. ಆದರೆ ಹೀಗೆ ವಿಚಾರ ಮಾಡುವವರು ತುಂಬಾ ಕಮ್ಮಿ ಇದ್ದರು. ಹೆಚ್ಚಿನವರು ಪೂರ್ಣ ಗಾಬರಿಗೊಂಡರು. ಅದರಲ್ಲಿ ಕೆಲವರು ಶ್ರೀಮಹಾರಾಜರ ಪಾದಗಳನ್ನು ಗಟ್ಟಿಯಾಗಿ ಹಿಡಿದರು. ತಮ್ಮ ಜೀವ ಉಳಿಸುವಂತೆ ಪದೇ-ಪದೇ ವಿನಂತಿಸ ತೊಡಗಿದರು.

ಶ್ರೀಮಹಾರಾಜರು ಗಟ್ಟಿಯಾಗಿ ಹೇಳಿದರು - 'ಶ್ರೀರಾಮ ನಮ್ಮ ಆಧಾರವಾಗಿದ್ದಾನೆ, ಅವನೇ ನಮ್ಮ ಜೀವ ಉಳಿಸಬಲ್ಲನು, ಗಾಬರಿಪಡಬೇಡಿ. ಮಹಾರಾಜರ ಮೈಮೇಲಿನ ಕಫನಿ ಕೆಗೆದು ದೋಣಿಯ ತೂತಿಗೆ ಇಟ್ಟು ತನ್ನ ಕಾಲಿನಿಂದ ಒತ್ತಿ ಹಿಡಿದರು ಮತ್ತು ಎಲ್ಲರಿಗೂ 'ಶ್ರೀರಾಮ ಜಯ ರಾಮ ಜಯ ಜಯ ರಾಮ' ಹೀಗೆ ಗಟ್ಟಿಯಾಗಿ ನಾಮಘೋಷ ಮಾಡಲು ಹೇಳಿದರು. ಸ್ವತಃ ಮಹಾರಾಜರು ಕೈಗಳನ್ನೆತ್ತಿ ಚಪ್ಪಾಳೆ ತಟ್ಟುತ್ತಾ ಉಚ್ಚಸ್ವರದಿಂದ ನಾಮಘೋಷ ಮಾಡ ತೊಡಗಿದರು. ಅಂಬಿಗರ ಸಹಿತ ದೋಣಿಯಲ್ಲಿದ್ದ ನಲವತ್ತು-ಐವತ್ತು ಜನರು ಚಪ್ಪಾಳೆ ತಟ್ಟುತ್ತಾ ನಾಮಘೋಷ ಮಾಡತೊಡಗಿದರು.

ಇಷ್ಟರಲ್ಲಿ ಈ ಸುದ್ದಿ ತೀರದಲ್ಲಿ ಹರಡಿತ್ತು , ಅದು ನೇರ ಕೋಟೆಯವರೆಗೆ ಮುಟ್ಟಿತು. ತೀರದಲ್ಲಿ ಸಾವಿರಾರು ಜನರು ಸೇರಿದರು. ಕೊಟೆಯಲ್ಲಿದ್ದ ಆಗ್ಲರೂ ತೀರದಲ್ಲಿ ಸೇರಿದರು. ಸರಕಾರೀ ಸುರಕ್ಷಾ ರಕ್ಷಕ ದೋಣಿಗಳು ಹೊರಟವು. ಒಂದು ದೊಡ್ಡ ದೋಣಿ ಮುಳುಗುತ್ತಿರುವ ದೋಣಿಯ ಬಳಿಗೆ ಬಂತು. ಶ್ರೀಮಹಾರಾಜರು ಒಂದು ಕಾಲನ್ನು ಮುಳುಗುವ ದೋಣಿಯಲ್ಲಿಟ್ಟರು. ಸಾವಕಾಶವಾಗಿ ಒಬ್ಬೊಬ್ಬರನ್ನು ಸುರಕ್ಷಿತ ದೋಣಿಗೆ ಬಿಟ್ಟರು. ಅಂಬಿಗರ ಸಹಿತ ಎಲ್ಲ ಮಂಡಳಿ ಸುರಕ್ಷಿತವಾಗಿ ಬಂದರು, 'ಎಲ್ಲರೂ ಬಂದರೋ' ಎಂದು ಮಹಾರಾಜರು ಮೂರು ಬಾರಿ ಕೇಳಿದರು. ಎಲ್ಲರೂ ಬಂದರು ಎಂದು ತಿಳಿದಾಗ ಮುಳುಗುವ ದೋಣಿಯಿಂದ ಕಾಲು ತೆಗೆದು ಸುರಕ್ಷಿತ ದೋಣಿಗೆ

ಬಂದರು. ಸುರಕ್ಷಾ ರಕ್ಷಕ ದೋಣಿ ಎಲ್ಲರನ್ನೂ ಎತ್ತಿಕೊಂಡು ತ್ರಿವೇಣೀ ಸಂಗಮದ ತೀರಕ್ಕೆ ಬಂದು ಮುಟ್ಟಿತು. ತೀರದಲ್ಲಿದ್ದ ಸಾವಿರಾರು ಜನರು 'ಬ್ರಹ್ಮಚೈತನ್ಯ ಗೊಂದವಲೇ ಮಹಾರಾಜ ಕೀ ಜಯ! ಪ್ರಭು ಶ್ರೀರಾಮಚಂದ್ರ ಕೀ ಜಯ'' ಎಂದು ಉದ್ಘೋಷ ಮಾಡಿದರು. ದಡದಲ್ಲಿದ್ದ ಸೇರಿದ್ದ ಆಂಗ್ಲ ಜನರು ಆನಂದದಿಂದ ಚಪ್ಪಾಳೆ ತಟ್ಟಿದರು.

ಶ್ರೀಮಹಾರಾಜರಿಂದಾಗಿ ದೋಣಿಯಲ್ಲಿದ್ದ ಎಲ್ಲರ ಪ್ರಾಣ ಉಳಿಯಿತು, ದಡಕ್ಕೆ ಇಳಿದ ಬಳಿಕ ಎಲ್ಲರೂ ಅವರ ಚರಣ ವಂದನೆ ಮಾಡತೊಡಗಿದರು. ಕೆಲವರು ಅವರ ಮೇಲೆ ಹೂವುಗಳನ್ನು ಎರಚಿದರು, ಕೆಲವರು ಅವರಿಗೆ ಹೂಹಾರ ಹಾಕಿದರು. ಯಾರೋ ಅವರಿಗೆ ವಸ್ತ್ರಗಳನ್ನು ಅರ್ಪಿಸಿದರು, ಯಾರೋ ತೆಂಗಿನ ಕಾಯನ್ನು ಅವರಿಗೆ ನಿವಾಳಿಸಿ ಗಂಗಾರ್ಪಣೆ ಮಾಡಿದರು. ಅನಂತರ ವೇಣೀದಾನದ ವಿಧಿಯು ಸಾಂಗವಾಗಿ ನಡೆಯಿತು. ಸಿಪಾಯಿಗಳು ಹಳೆಯ ದೋಣಿ ಗೊತ್ತುಪಡಿಸಿದ ಮಹಾರಾಜರ ಪುರೋಹಿತರನ್ನು ಹಿಡಿದುಕೊಂಡು ಹೋದರು. ಪುರೋಹಿತರ ಮಗ ಕಣ್ಣಲ್ಲಿ ನೀರು ತುಂಬಿ ಮಹಾರಾಜರ ಹತ್ತಿರ ಬಂದ, ಕೈಮುಗಿದುಕೊಂಡು ತಮ್ಮ ತೊಂದರೆಯನ್ನು ಹೇಳಿದನು. ಶ್ರೀಮಹಾರಾಜರು ಹೇಳಿದರು – ನಿನ್ನ ತಂದೆಯವರು ಬೇಗನೆ ಬಿಡುಗಡೆ ಹೊಂದುವರು, ಚಿಂತಿಸಬೇಡ, ಸರಕಾರಿ ಅಧಿಕಾರಿಯು ಅವರನ್ನು ಗದರಿಸಿ ಬಿಟ್ಟು ಬಿಟ್ಟರು. ಸಾಯಂಕಾಲ ಶ್ರೀಮಹಾರಾಜರು ಅಂಬಿಗ ಮತ್ತು ಅವನ ಮುಖಂಡರನ್ನು ಭಾರೀ ಸನ್ಮಾನ ಮಾಡಿದರು. ಪ್ರತಿಯೊಬ್ಬನಿಗೂ ಧನ, ವಸ್ತ್ರ ಮತ್ತು ತೆಂಗಿನಕಾಯಿ ಕೊಟ್ಟರು. ಒಂದು ದಿನ ಅವರು ಪ್ರಯಾಗದಲ್ಲಿದ್ದ ಎಲ್ಲ ಭಿಕ್ಷುಕರಿಗೆ ಪೂರಿ ಪಾಯಸ ಊಟ ಹಾಕಿದರು.

ಕಾಶಿಯಲ್ಲಿ ಶ್ರೀಮಹಾರಾಜರಿಗೆ ಓರ್ವ ವೇದಾಂತಿ ಪಂಡಿತರು ಭೆಟ್ಟಿಯಾದರು. ಅವರಿಗೆ ವಿವಿಧ ವಿಷಯಗಳ ಮೇಲೆ ವಾದವಾಡುವ ಭಾರೀ ಚಟ ಇತ್ತು . ಶ್ರೀಮಹಾರಾಜರು ಅವರ ವಾದದ ಚಟ ಚೆನ್ನಾಗಿ ತೀರಿಸಿದರು. ಅವನು ಬಂದನೆಂದರೆ ಯಾವುದಾದರೂ ವಿಷಯದಲ್ಲಿ ವಾದ ಪ್ರಾರಂಭಿಸುತ್ತಿದ್ದ. ಒಂದು ದಿನ ಅವರು ಬಂದರು, ಶ್ರೀಮಹಾರಾಜರು ವಾದವನ್ನು ಮುಂದುವರಿಸಿದರು. ಅದರಲ್ಲಿ ಬಹಳ ಸಮಯ ಹೋಯಿತು. ಸಮಯ ಆಗುತ್ತಿದ್ದಂತೆ ಪಂಡಿತ ಅಸ್ವಸ್ಥರಾಗ ತೊಡಗಿದರು, ಕೊನೆಗೆ ಶ್ರೀಮಹಾರಾಜರೇ ಅವರ ಅಸ್ವಸ್ಥತೆಯ ಕಾರಣ ಕೇಳಿದರು. ಪಂಡಿತರೆಂದರು – 'ನನ್ನ ತಮ್ಮನ ಮೂತ್ರ ನಿಂತು ಹೋಗಿದೆ, ನೋವಿನಿಂದ ಅವನು ನರಳುತ್ತಿದ್ದಾನೆ. ಶ್ರೀಮಹಾರಾಜರು ಹೇಳಿದರು – ವಾದದ ಮೋಹದಲ್ಲಿ ಇಬ್ಬರೂ ಸಿಕ್ಕಿಹಾಕಿಕೊಂಡೆವು,

ವಾದಕ್ಕಿಂತ ನಾವು ನಾಮಸ್ಮರಣ ಮಾಡಿದ್ದರೆ ಹೆಚ್ಚು ಚೆನ್ನಾಗಿತ್ತು. ಚಿಂತಿಸ ಬೇಡಿ, ನಿಮ್ಮ ತಮ್ಮ ಹುಷಾರಾದಾನು, ಈಗಲೇ ಮನೆಗೆ ಹೋಗಿ ರಾಮನಾಮ ಜಪಿಸುತ್ತಾ ಹೋಗಿ, ಪಂಡಿತರು ಶ್ರೀಮಹಾರಾಜರಿಗೆ ನಮಸ್ಕರಿಸಿ ಮನೆಗೆ ಹೋದರು. ತಮ್ಮನ ಮೂತ್ರ ಸರಾಗವಾಗಿತ್ತು. ಅವನಿಗೆ ಈಗ ಹಾಯೆನಿಸಿತ್ತು. ಅವನು ಪಂಡಿತ ಅಣ್ಣನಿಗೆ ಹೇಳಿದ – ಮೂತ್ರ ಕಟ್ಟಿಕೊಂಡು ವೇದನೆ ಉಂಟಾದಾಗ ನಾನು ಶ್ರೀಮಹಾರಾಜರನ್ನು ಸ್ಮರಿಸಿದೆ, ಅವರು ಸ್ವತಃ ಇಲ್ಲಿಗೆ ಬಂದು, 'ರಾಮನಾಮ ಜಪಿಸು' ಎಂದು ಹೇಳಿ ಹೊರಟು ಹೋದರು. ನಾನು ರಾಮನಾಮ ಜಪಿಸ ತೊಡಗಿದೆ ಹಾಗೂ ನನ್ನ ಮುಕ್ತತೆ ಆಯಿತು.

ಶ್ರೀಮಹಾರಾಜರು ಮನಸ್ಸಿಗೆ ಒಮ್ಮೆ ವಿಶ್ವೇಶ್ವರನಿಗೆ ಜಿಲೇಬಿಯ ನೈವೇದ್ಯ ಮಾಡಬೇಕೆಂದು ಅನಿಸಿತು. ಅವರು ಪ್ರಧಾನ ಅಡಿಗೆ ಗಂಗೂಬಾಯಿಗೆ ವಿಚಾರಿಸಿದರು – ಎಷ್ಟು ಹಿಟ್ಟು ನೆನೆಯಿಸ ಬೇಕಾದೀತು? ಗಂಗೂಬಾಯಿಗೆ ಮಹಾರಾಜರ ಸ್ವಭಾವ ಚೆನ್ನಾಗಿ ಗೊತ್ತಿತ್ತು, ಅವರೆಂದರು – ಹದಿನೈಯ್ದು ಇಪ್ಪತ್ತು ಪಾಯಲಿ (ಒಂದು ಅಳತೆ) ಹಿಟ್ಟು ನೆನೆಯಿಸ ಬೇಕಾದೀತು. ಆಗ ಮಹಾರಾಜರು ಹೇಳಿದರು – ಇಷ್ಟು ಹಿಟ್ಟು ನೆನೆಸಲು ನಾನೇನು ರಾಜನಲ್ಲ. ಕೇವಲ ಎರಡು ಪಾಯಲಿ ಹಿಟ್ಟು ನೆನೆಸಿರಿ. ಗಂಗೂಬಾಯಿಗೆ ಇದು ಒಪ್ಪಿಗೆ ಆಗಲಿಲ್ಲ. ಆದರೆ ಮಹಾರಾಜರು ಹಾಗೆ ಆಜ್ಞೆ ಮಾಡಿದರು. ಸರಿ, ಎಂದು ಹೇಳಿ ಅವರು ಹೊರಟು ಹೋದರು. ಎರಡು ಪಾಯಲಿ ಹಿಟ್ಟು ಕಲೆಸಲಾಯಿತು. ಬೆಳಿಗ್ಗೆ ಹನ್ನೆರಡಕ್ಕೆ ಪ್ರಾರಂಭವಾದ ಪಂಕ್ತಿಗಳು ರಾತ್ರೆ ಎಂಟರ ತನಕ ನಡೆದವು. ಎಲ್ಲರೂ ಜಿಲೇಬಿ ಊಟ ಮಾಡಿ ತೃಪ್ತರಾದರು, ರಾತ್ರೆ ಎಂಟು ಗಂಟೆಗೆ ಮಹಾರಾಜರು ಗಂಗೂಬಾಯಿಗೆ ಹೇಳಿದರು – ಜನರ ಪಂಕ್ತಿಗಳು ಮುಗಿದವು, ಇನ್ನೂ ಹಿಟ್ಟು ಎಷ್ಟು ಉಳಿದಿದೆ? ಗಂಗೂಬಾಯಿಯವರು ನೋಡುತ್ತಾರೆ ಎರಡು ಸೇರು ಹಿಟ್ಟು ಇನ್ನೂ ಹಾಗೇ ಉಳಿದಿದೆ. ಅವರಿಗೆ ಪರಮಾಶ್ಚರ್ಯವಾಯಿತು. ಕೊನೆಯ ಪಂಕ್ತಿ ಗಂಗೂಬಾಯಿ ಮತ್ತು ಬಡಿಸುವ ಮಹಿಳೆಯರದಾಗಿತ್ತು. ಶ್ರೀಮಹಾರಾಜರು ಅವರಿಗೆ ಆಗ್ರಹ ಮಾಡಿ ಬಡಿಸಿದರು, ಹೊಟ್ಟೆ ತುಂಬಾ ಊಟ ಮಾಡಿಸಿದರು.



-: ಇಪ್ಪತ್ತೊಂಭತ್ತು :-

# ಮಾತೃ ಹೃಯದೀ ಶ್ರೀಮಹಾರಾಜರು

ಶ್ರೀಮಹಾರಾಜರು ಕಾಶಿಯಲ್ಲಿ ಅನೇಕ ದಿನವಿದ್ದು ಅಯೋಧ್ಯೆಗೆ ಬಂದರು. ಅಯೋಧ್ಯೆಯಲ್ಲಿ ಇರುವಾಗಲೇ ಅವರು ನೈಮಿಷಾರಣ್ಯಕ್ಕೆ ಹೋಗಿ ಬಂದರು. ಅನಂತರ ಅವರು ಜೊತೆಯವರೊಂದಿಗೆ ಇಂದೋರಿಗೆ ಬಂದರು. ಇಂದೋರಿನ ಮಹಾದೇವ ಭಟ ಹರ್ದಾದ ರಾಮಮಂದಿರದ ಪೂಜಾರಿಗಳಾಗಿದ್ದರು. ಮಂದಿರ ಬಹಳ ಸುಂದರವಾಗಿತ್ತು, ಪೂಜೆ ನೈವೇದ್ಯ, ನಂದಾದೀಪ, ಉತ್ಸವ, ಅನ್ನದಾನ ಮುಂತಾದ ಖರ್ಚಿಗಾಗಿ ಮಂದಿರಕ್ಕೆ ಹೊಲ ಬಿಟ್ಟಿದ್ದರು. ಇಂದೋರಿನಿಂದ ಮಹಾರಾಜರು ಹರ್ದಾಗೆ ಬಂದರು. ಹರ್ದಾದಲ್ಲಿ ಅವರು ಎರಡು ವರ್ಷ ವಾಸಿಸಿದರು. ಈ ಅವಧಿಯಲ್ಲಿ ಹರ್ದಾದಲ್ಲಿ ದುರ್ದೈವದಿಂದ ಪ್ಲೇಗ್ ಮಹಾಮಾರಿ ಹಬ್ಬಿತು. ಕಾಶೀನಾಥ ಭೈಯ್ಯಾ ಎಂಬುವರು ರಾಮಮಂದಿರದ ಟ್ರಸ್ಟಿ ಆಗಿದ್ದರು. ಅವರಿಗೆ ಊರ ಹೊರಗೆ ಹಣ್ಣಿನ ತೋಟವಿತ್ತು, ಮಂದಿರದ ಎಲ್ಲಾ ಟ್ರಸ್ಟಿಗಳು ತೋಟದ ಮನೆಗೆ ಬಂದರು. ಶ್ರೀಮಹಾರಾಜರೂ ಅದೇ ತೋಟದಲ್ಲಿ ಇರಲು ಹೋದರು. ಒಂದು ದಿನ ರಾಮ ಭಾವು ಮೋನೆ ಆ ತೋಟಕ್ಕೆ ಬಂದರು. ಅವರೊಂದಿಗೆ ಜಯರಾಮ ಮತ್ತು ದಾಮು ಅಣ್ಣಾ ಎಂಬ ಇಬ್ಬರು ಗೃಹಸ್ಥರು ಇದ್ದರು. ಜಯರಾಮ ಮಾಲಿಯಾಗಿದ್ದರೆ ದಾಮು ಅಣ್ಣಾ ವೇದಾಂತಿಯಾಗಿದ್ದರು. ಮಂದಿರದ ಟ್ರಸ್ಟಿಗಳು ಆ ತೋಟದಲ್ಲಿ ಗುಡಿಸಲು ಕಟ್ಟಿಕೊಂಡು ಇದ್ದರು. ಶ್ರೀಮಹಾರಾಜರ ವಾಸ್ತವ್ಯವೂ ಜೋಪಡಿಯಲ್ಲೇ ಇತ್ತು. ಅಲ್ಲಿ ಇದ್ದಾಗಲೇ ಅವರು ಅಲ್ಲಿಯ ತರುಣ-ತರುಣಿಯರ ವಿವಾಹ ನಿಶ್ಚಯಿಸಿದರು. ಐದಾರು ವಿವಾಹ ನಿಶ್ಚಯವಾದುವು. ವಿವಾಹವೆಂದರೆ ಭೋಜನ ವ್ಯವಸ್ಥೆ ಆಗಲೇಬೇಕು, ಬೆಳಿಗ್ಗೆ ಅಡಿಗೆ ಮಾಡುವ ಮಹಿಳೆಯರು ಶ್ರೀಮಹಾರಾಜರ ಬಳಿಗೆ ಬಂದರು. ಅವರೆಂದರು - ಇಂದು ನೈವೇದ್ಯಕ್ಕೆ ತರಕಾರಿ

ಇಲ್ಲ. ಮತ್ತೆ ತೋಟದ ವ್ಯವಸ್ಥೆ ನೋಡಿಕೊಳ್ಳುವ ಮಾಲಿಗೆ ಅವರು ಕರೆದರು. ಅವನಲ್ಲಿ ತೋಟದಲ್ಲಿನ ತರಕಾರಿ ಬಗ್ಗೆ ವಿಚಾರಿಸಿದರು. ಅವನೆಂದ – ಸದ್ಯ ತೋಟದಲ್ಲಿ ಯಾವುದೇ ತರಕಾರಿ ಇಲ್ಲ, ಬದನೆ ನೆಟ್ಟಿದೆ ಆದರೆ ಗಿಡಗಳಿಗೆ ಹೂ ಬಿಟ್ಟಿದೆ ಕಾಯಿ ಆಗಲಿಲ್ಲ. ಮಹಾರಾಜರು ಹೇಳಿದರು – ಹೀಗೆ ಹೇಗಾಗುತ್ತದೆ? ಹೂವು ಇದ್ದಲ್ಲಿ ಫಲಗಳು ಇದ್ದೇ ಇರಬೇಕಲ್ಲ! ನಡೀ, ನಾವು ನೋಡುವಾ. ಇಬ್ಬರೂ ಕೂಡಲೇ ತೋಟಕ್ಕೆ ಹೋದರು. ಜಯರಾಮು ಮಾಲಿಯು ಜೊತೆಗೆ ಚೀಲ ತೆಗೆದುಕೊಂಡ. ಶ್ರೀಮಹಾರಾಜರು ಆ ಗಿಡಗಳ ನಡುವೆ ಹೋಗಿ ನಿಂತರು ಮತ್ತು ಹೇಳಿದರು – ಎಲೆಗಳ ಬುಡದಲ್ಲಿ ಬದನೇಕಾಯಿ ಇವೆಯೇ ಎಂದು ನೋಡುವಾ. ಜಯರಾಮು ನೋಡತೊಡಗಿದರೆ ನಿಜವಾಗಿ ಎಲೆಗಳ ಅಡಿಯಲ್ಲಿ ಬದನೆಕಾಯಿಗಳಿದ್ದವು. ಅರ್ಧ ಗಂಟೆಯಲ್ಲಿ ಅವನು ಜೊತೆಗೆ ತಂದ ಚೀಲದಲ್ಲಿ ಅದನ್ನು ತುಂಬಿಸಿದನು. ಅವನಿಗೆ ಆಶ್ಚರ್ಯವಾಯಿತು.

ಅನಂತರ ಒಂದು ವಾರದಲ್ಲಿ ರಾಮಭಾವು ಮೋನೆಯವರು ಶ್ರೀಮಹಾರಾಜರನ್ನು ಬೀಳ್ಕೊಂಡು, ತಮ್ಮ ಊರಿಗೆ ಹೋಗಲು ಸ್ಟೇಷನ್ನಿಗೆ ಬಂದರು. ಸಮಯಕ್ಕೆ ಸರಿಯಾಗಿ ರೈಲು ಬಂದಿಲ್ಲ. ರೈಲಿನ ಪ್ರೀತಿಕ್ಷೆಯ ಮಾಡುತ್ತಾ ಪ್ಲಾಟಫಾರಂನಲ್ಲಿ ನಿಂತಿದ್ದರು.

ಅಷ್ಟರಲ್ಲಿ ಶ್ರೀಮಹಾರಾಜರು ಸ್ಟೇಷನ್ನಿಗೆ ಬಂದರು. ಅವರು ರಾಮಭಾವುರವರಿಗೆ ಹೇಳಿದರು–ಊರಿಗೆ ಹೋಗಲು ನೀವು ಇಷ್ಟು ಅವಸರ ಏಕೆ ಮಾಡುತ್ತೀರಿ? ನಾನು ಅಯೋಧ್ಯೆಗೆ ಹೊರಟಿದ್ದೇನೆ, ನನ್ನೊಂದಿಗೆ ಅಯೋಧ್ಯೆಗೆ ಬನ್ನಿ. ರಾಮಭಾವು ಒಪ್ಪಿಕೊಂಡು, ಶ್ರೀಮಹಾರಾಜರೊಂದಿಗೆ ಅಯೋಧ್ಯೆಗೆ ಬಂದರು. ಅಯೋಧ್ಯೆಯಲ್ಲಿ ಅವರು ಮೂರು ದಿನವಿದ್ದರು. ಮಹಾರಾಜರು ಜೊತೆಗಿನ ಜನರನ್ನು ಹಿಂದಕ್ಕೆ ಕಳಿಸಿ, ಅವರೊಬ್ಬರೇ ನೈಮಿಷಾರಣ್ಯಕ್ಕೆ ಹೊರಟರು. ಆ ಜನರಲ್ಲಿ ನರಹರಪಂತ ಎಂಬ ಒಬ್ಬ ಗೃಹಸ್ಥರಿದ್ದರು. ಅವರು ಮಹಾರಾಜರಿಗಿಂತ ಮೊದಲೇ ಟಾಂಗಾದಲ್ಲಿ ಹೋಗಿ ಕುಳಿತರು. ಅವರು ಮಹಾರಾಜರೊಂದಿಗೆ ಬರಲು ಹಟ ಹಿಡಿದರು. ಕೊನೆಗೆ ನಿರೂಪಾಯದಿಂದ ಶ್ರೀಮಹಾರಾಜರು ಒಪ್ಪಿಗೆ ಕೊಟ್ಟರು. ಅವರು ರಾಮಭಾವುರವರಿಗೆ ಹೇಳಿದರು – ಪಂತರು ಕೇಳುವುದಿಲ್ಲ, ಮತ್ತೆ ನೀವೂ ನಡೆಯಿರಿ.

ಮೂವರು ನೈಮಿಷಾರಣ್ಯದ ಸ್ಟೇಷನ್ನಿಗೆ ಬಂದರು. ನರಹರ ಪಂತ ಮತ್ತು ರಾಮಭಾವು ಇಬ್ಬರಿಗೂ ಶ್ರೀಮಹಾರಾಜರು ಊರಿನಲ್ಲಿ ಭಿಕ್ಷೆ ಬೇಡಿ ತನ್ನಿರಿ ಎಂದು ಹೇಳಿದರು. ಆ ಭಿಕ್ಷೆಯಲ್ಲಿ ಹಿಟ್ಟು, ತರಕಾರಿ, ಎಣ್ಣೆ, ಖಾರ, ಉಪ್ಪು ಸ್ವಲ್ಪ ಉರುವಲು

ಮತ್ತು ಬೆಂಕಿಪಟ್ಟಣ ಹೀಗೆ ಸಾಹಿತ್ಯ ತಂದರು. ಶ್ರೀಮಹಾರಾಜರು ತಮ್ಮ ಕಫನಿ ತೆಗೆದಿಟ್ಟರು. ಸ್ವತಃ ಅಡಿಗೆಗೆ ಸಿದ್ಧರಾದರು, ರೊಟ್ಟಿ ಮತ್ತು ಪಲ್ಯ ತಯಾರಿಸಿದರು, ಅವರಿಬ್ಬರಿಗೂ ಊಟ ಹಾಕಿದರು, ಪಂತರೇ! ನೋಡಿದಿರಲ್ಲ? ಅರಣ್ಯಕ್ಕೆ ಹೋದ ಪಂತರು ಹದ್ರ್ಯಾಗೆ ಹಿಂತಿರುಗಿದರು, ನೈಮಿಷಾರಣ್ಯದಲ್ಲಿ ಹೋಗಿ ಹತ್ತು ದಿನಗಳಲ್ಲಿ ಶ್ರೀಮಹಾರಾಜರು ಹದ್ರ್ಯಾಗೆ ಹಿಂತಿರುಗಿದರು.

ಶ್ರೀಮಹಾರಾಜರೊಂದಿಗೆ ಬಂದಿದ್ದ ಮಂಡಳಿ ಹದ್ರ್ಯಾದಲ್ಲೇ ಇದ್ದರು. ಅವರಲ್ಲಿ ಒಬ್ಬ ಭಟಜೀ ಇದ್ದರು. ಅವರ ನಿತ್ಯನೇಮ ಎಂದೂ ತಪ್ಪಿಲ್ಲ, ನಿಜವಾದ ಭಕ್ತರಾಗಿದ್ದರು. ವೃತ್ತಿಯಲ್ಲಿ ಅತಿಶಯ ಸಾತ್ವಿಕರಾಗಿದ್ದರು. ಒಮ್ಮೆ ಶ್ರೀಮಹಾರಾಜರು ಮಾತನಾಡುವಾಗ ಹೇಳಿದರು - ಯಾವ ಮನುಷ್ಯನು ರಾಮನಾಮದ ಮೂರುವರೆ ಕೋಟಿ ಜಪವನ್ನು ಭಕ್ತಿಭಾವದಿಂದ ಮಾಡಿದರೆ ಅವನಿಗೆ ಭಗವಂತನ ಅನುಭೂತಿ ಉಂಟಾದೀತು. ಶ್ರೀಮಹಾರಾಜರ ಈ ಮಾತು ಕೇಳಿ ಆ ಭಟಜೀಯವರು ಮನಃಪೂರ್ವಕ ಭಕ್ತಿಭಾವದಿಂದ ನಾಮಸ್ಮರಣೆ ಪ್ರಾರಂಭಿಸಿದರು. ಮೂರೂವರೆ ಕೋಟಿಯ ಧ್ಯೇಯವಿತ್ತು . ಜಪ ನಡೆಯುತ್ತಿದ್ದಾಗ ಅವರಿಗೆ ಸ್ವಪ್ನಗಳು ಕಾಣಿಸ ತೊಡಗಿದವು. ಸ್ವಪ್ನದಲ್ಲಿ ಶ್ರೀಮಹಾರಾಜರ ದರ್ಶನ ಆಗ ತೊಡಗಿತು. ಸ್ವಲ್ಪ ಸಮಯ ಸರಿದಾಗ ಸ್ವಪ್ನದಲ್ಲಿ ದೇವಮೂರ್ತಿಗಳು ಕಾಣಿಸ ತೊಡಗಿದವು. ಮಾಡುತ್ತಾ - ಮಾಡುತ್ತಾ ಅವರ 'ಶ್ರೀರಾಮ ಜಯ ರಾಮ ಜಯ ಜಯ ರಾಮ' ಈ ತ್ರಯೋದಶಾಕ್ಷರೀ ಮಂತ್ರದ ಮೂರೂವರೆ ಕೋಟಿ ಜಪಸಂಖ್ಯೆ ಪೂರ್ಣವಾಯಿತು. ಈಗ ದೇವರು ದರ್ಶನ ಕೊಡಲೇಬೇಕು ಎಂಬ ಆಗ್ರಹೀ ಇಚ್ಛೆ ಅವರ ಮನಸ್ಸಿನಲ್ಲಿ ನಿರ್ಮಾಣವಾಯಿತು. ವಸ್ತುತಃ ಶ್ರೀಮಹಾರಾಜರು ಆಗಾಗ, ದೇವದರ್ಶನ ಹೇಗಾಗುತ್ತದೆ, ಈಶ ಪ್ರೇಮದ ಅನುಭೂತಿ ಹೇಗೆ ಗುರುತಿಸಬೇಕು, ಈ ವಿಷಯಗಳನ್ನು ತಮ್ಮ ಪ್ರವಚನದಲ್ಲಿ, ಕೀರ್ತನದಲ್ಲಿ ಸುಲಭ ಭಾಷೆಯಲ್ಲಿ, ದೃಷ್ಟಾಂತ ಸಹಿತ ಹೇಳುತ್ತಿದ್ದರು. ಈ ಭಟಜೀಯವರು ಮಾತ್ರ ದೇವದರ್ಶನ ಕಲ್ಪನೆ ತನ್ನ ಮನಸ್ಸಿನಲ್ಲೇ ನಿಶ್ಚಯಿಸಿ ಕೊಂಡಿದ್ದರು. ಹಾಗೆಯೇ ದೇವರ ದರ್ಶನ ಆಗಬೇಕೆಂದು ಅವರಿಗೆ ಹಟವಿತ್ತು . ಈ ಹಟದಿಂದ ಅವರ ನಿದ್ದೆ ಹಾರಿ ಹೋಯಿತು.

ಒಂದು ದಿನ ಮಾತ್ರ ಈ ಭಟಜೀಯವರ ಹಟವು ಮೇರೆ ಮೀರಿತು. ಮಧ್ಯಾಹ್ನ ಒಂದು ಗಂಟೆಯಾಗಿತ್ತು , ಎಲ್ಲರ ಭೋಜನ ಸಮಯ, ಭೋಜನಕ್ಕಾಗಿ ಜನರು ಎಲೆಯ ಮೇಲೆ ಕುಳಿತರು. ಅದರಲ್ಲಿ ಆ ಭಟಜೀ ಅವರಿಗೆ ಕಾಣಿಸಲಿಲ್ಲ. ಭಟಜೀಯವರನ್ನು ಊಟಕ್ಕಾಗಿ ಕರೆಯಲು ಒಬ್ಬ ಗೃಹಸ್ಥರನ್ನು ಕಳಿಸಿದರು, ಭಟಜೀ ಬಾವಿ ಕಟ್ಟೆಯಲ್ಲಿ

ಕುಳಿತ್ತಿದ್ದರು. ಗೃಹಸ್ಥನು ಅವರನ್ನು ಹುಡುಕುತ್ತಾ ಬಾವಿಯ ಬಳಿಗೆ ಬಂದರು. ಅವರು ಅವರಿಗೆ ಶ್ರೀಮಹಾರಾಜರ ಹೆಸರು ಹೇಳಿ ಭೋಜನಕ್ಕಾಗಿ ಆಮಂತ್ರಿಸಿದರು. ಭಟಜೀ ಹೇಳಿದರು - ನನಗೆ ಇಂದು ದೇವರ ದರ್ಶನವಾದರೇನೇ ನಾನು ಬಾಯಲ್ಲಿ ಅನ್ನದ ತುತ್ತು ತಿನ್ನುವೆನು, ಇಲ್ಲದಿದ್ದರೆ ನಾನು ನನ್ನ ಜೀವ ಕಳೆದುಕೊಳ್ಳುವೆನು. ಆ ಗೃಹಸ್ಥರ ಮಾತು ಅವರು ಕೇಳಲೊಲ್ಲರು. ಕೊನೆಗೆ ಉಪಾಯವಿಲ್ಲದೆ ಆ ಗೃಹಸ್ಥ ಶ್ರೀಮಹಾರಾಜರ ಬಳಿಗೆ ಬಂದರು. ನಡೆದ ವೃತ್ತಾಂತ ತಿಳಿಸಿದರು. ಶ್ರೀಮಹಾರಾಜರು ಬಾವಿಯ ಬಳಿಗೆ ಭಟಜೀಯವರನ್ನು ಸಮಜಾಯಿಸ ತೊಡಗಿದರು. ಅವರು ಕೇಳಲೊಲ್ಲರು, ಕೊನೆಗೆ ಶ್ರೀಮಹಾರಾಜರು ಕ್ರೋಧ ಧಾರಣೆ ಮಾಡಿದರು. ತಮ್ಮ ಕಾಲಿನ ಪಾದುಕೆ ತೆಗೆದು, ಅವರು ಅವನ ಮಸ್ತಕದ ಮೇಲೆ ಪ್ರಹರಿಸ ತೊಡಗಿದರು, ಕತ್ತೆ ! ನನ್ನ ರಾಮನ ನಾಮಸ್ಮರಣ ಮಾಡುತ್ತೀಯಾ ಮತ್ತು ಹೀಗೆ ಹಟ ಮಾಡುತ್ತಿರುವೆ! ಎಂದು ಹೊಡೆಯುತ್ತಾ-ಹೊಡೆಯುತ್ತಾ ಹೇಳಿದರು. ಕೊನೆಗೆ ಭಟಜೀಯವರ ಕಣ್ಣುಗಳಿಂದ ಅಶ್ರು ಹರಿಯ ತೊಡಗಿತು ಮತ್ತು ಶ್ರೀ ಮಹಾರಾಜರು ಕೈಯಿಂದ ಪಾದುಕೆ-ಕೆಳಗೆ ಹಾಕಿದರು. ಭಟಜೀಯವರನ್ನು ಅವರು ಹತ್ತಿರ ಕರೆದರು ಮತ್ತು ಪರಮ ಪ್ರೇಮದಿಂದ ಅವರ ತಲೆಯ ಮೇಲೆ ಕೈಯ್ಯಾಡಿಸ ತೊಡಗಿದರು. ಮಗು ಯಾವುದಾದರೂ ತಪ್ಪು ಮಾಡಿದರೆ ಅಥವಾ ವಿಪರೀತ ಹಟ ಹಿಡಿದರೆ ತಾಯಿಯು ಅವನನ್ನು ನಿರುಪಾಯದಿಂದ ಹೊಡೆಯುತ್ತಾಳೆ. ತಾನು ತನ್ನ ಕಂದನನ್ನು ಹೊಡೆದೆ ಇದರ ದುಃಖ ಆಕೆಗೇ, ಮತ್ತೆ ಅವಳು ಅಷ್ಟೇ ಮಮತೆಯಿಂದ ಮಗುವನ್ನು ಅಪ್ಪಿಕೊಳ್ಳುವಳು. ಶ್ರೀಮಹಾರಾಜರಿಗೆ ಇದೇ ಭಾವನೆ ಇತ್ತು . ಅವರೆಂದರು - ಇದರ ದುಃಖ ಅಶ್ರುರೂಪರೂಪದಿಂದ ವ್ಯಕ್ತವಾದುದು ಒಳ್ಳೆಯದಾಯಿತು. ಇಲ್ಲದಿದ್ದರೆ ಇವರಿಗೆ ಉನ್ಮಾದವಾಯು ಆಗುತ್ತಿತ್ತು . ಈಶ್ವರನು ಈ ಹಟದಿಂದ ಅಥವಾ ಕಷ್ಟದಿಂದ ಸಾಧ್ಯವಾಗುವುದಿಲ್ಲ. ಅವನು ಭಕ್ತಿಯಿಂದ, ಪ್ರೇಮದಿಂದಲೇ ನಮ್ಮವನಾಗಿಸಿಕೊಳ್ಳಬಹುದು.

ಒಮ್ಮೆ ರಾಮನಿಗೆ ಬಾಸುಂದಿಯ ನೈವೇದ್ಯ ಮಾಡಬೇಕೆಂದು ಅನಿಸಿತು. ಗಂಗೂಬಾಯಿ ಮತ್ತು ಅವರ ಜೊತೆಯ ಭಗಿನಿಯರು ಉತ್ಸಾಹದಿಂದ ಅಡಿಗೆ ಮಾಡಲು ತೊಡಗಿದರು. ಒಂದು ದೊಡ್ಡ ಡಬರಿಯಲ್ಲಿ ಹಾಲುಕಾಯಲು ಇಟ್ಟರು. ಬಹಳ ಜನರು ಇಂದು ಭೋಜನ ಪ್ರಸಾದ ಸ್ವೀಕರಿಸುವವರಿದ್ದರು. ಹಾಲು ಕುದಿಯುವಾಗ ಅದರಲ್ಲಿ ಕೇಸರೀ ಯಾಲಕ್ಕಿ ಹಾಕಬೇಕೆಂದು ಅವರು ತಪ್ಪಿ ಇಂಗಿನ ಡಬ್ಬಿಯನ್ನು ಹಾಲಿಗೆ ಹಾಕಿದರು. ಇಂಗಿನ ಡಬ್ಬಿ ಮತ್ತು ಕೇಸರಿ ಯಾಲಕ್ಕಿ ಪುಡಿಯ ಡಬ್ಬಿ ಹತ್ತಿರ-ಹತ್ತಿರ ಇದ್ದವು, ತಪ್ಪಾಗಿತ್ತು. ಇದನ್ನು ಅವರು ಒಪ್ಪಿದರು, ಈಗ ಹಾಲು ಒಡೆದು ಹೋದೀತು,

ಬಾಸುಂದಿಯ ನೈವೇದ್ಯ ಮಾಡಲು ಬರುವುದಿಲ್ಲ ಎಂದು ಅವರು ಶ್ರೀಮಹಾರಾಜರಿಗೆ ತಿಳಿಸಿದರು. ಮಹಾರಾಜರು ಹೇಳಿದರು - ನೀವು ಗಾಬರಿ ಪಡಬೇಡಿ, ನಮ್ಮ ರಾಮನು ಎಲ್ಲವನ್ನು ವ್ಯವಸ್ಥಿತ ಮಾಡುವನು. ಅಡಿಗೆ ಸಿದ್ಧವಾಯಿತು, ಶ್ರೀರಾಮನಿಗೆ ನೈವೇದ್ಯ ಮಾಡಲಾಯಿತು, ಹಾಲು ಒಡೆಯಲಿಲ್ಲ. ಬಾಸುಂದಿ ಉತ್ತಮವಾಗಿತ್ತು . ಅದಕ್ಕೆ ಇಂಗಿನ ವಾಸನೆ ಬರದೆ ಕೇಸರಿ-ಯಾಲಕ್ಕಿಯ ಪರಿಮಳ ಬಂತು, ಪಂಕ್ತಿಗಳು ಮುಗಿದವು, ಎಲ್ಲರೂ ಭೋಜನ ಮಾಡಿದರು. ಕೊನೆಗೆ ಬಾಸುಂದಿಯ ಡಬರಿ ನೋಡಿದರೆ ಅದರ ಬುಡದಲ್ಲಿ ದೊಡ್ಡ ಬೋರೆ ಹಣ್ಣಿನಷ್ಟು ಉಂಡೆ ಇತ್ತು , ಅದನ್ನು ನೋಡಿ ಮಹಾರಾಜರು ಉದ್ಗರಿಸಿದರು - ನಮ್ಮ ಕೈಯಿಂದ ತಿಳಿಯದೆ ಆದ ತಪ್ಪನ್ನು ಶ್ರೀರಾಮನು ಸರಿಪಡಿಸುತ್ತಾನೆ. ಜನರು ಇದನ್ನು ಚಮತ್ಕಾರ ವೆಂದು ಹೇಳುತ್ತಾರೆ. ಆದರೆ ಇದು ಚಮತ್ಕಾರವಲ್ಲ. ಅದರಲ್ಲಿ ರಾಮ ಪ್ರೇಮವಿರುತ್ತದೆ, ನಿಜ ಭಕ್ತಿಯಿಂದ ಅದು ಲಭಿಸುತ್ತದೆ.

ಶ್ರೀಮಹಾರಾಜರು ಹದ್ರ್ಯಾದಲ್ಲಿರುವಾಗ ಅವರ ಪಿತೃಗಳ ಶ್ರಾದ್ಧತಿಥಿ ಬಂತು. ಶ್ರೀ ಮಹಾರಾಜರು ಅಲ್ಲೇ ತಂದೆಯ ಶ್ರಾದ್ಧ ಮಾಡಿದರು. ಶ್ರಾದ್ಧ ತಿಥಿಯ ಪಂಕ್ತಿಗಳಾದುವು. ಅದೇ ಸಮಯಕ್ಕೆ ಓರ್ವ ಬೈರಾಗಿ ಬಂದರು ಮತ್ತು ಭಿಕ್ಷೆ ಬೇಡ ತೊಡಗಿದ. ಶ್ರೀಮಹಾರಾಜರು ಹೊಟ್ಟೆ ತುಂಬಾ ಊಟ ಹಾಕಿದರು, ದಕ್ಷಿಣೆ ಎಂದು ಅವರು ಹಣ ಅಥವಾ ವಸ್ತ್ರಯಾವುದನ್ನೂ ಸ್ವೀಕರಿಸಲಿಲ್ಲ. ಶ್ರೀಮಹಾರಾಜರಿಗೆ ಒಬ್ಬನು ಬೆಳ್ಳಿಯ ಚೆಂಬು ಪಾತ್ರೆ ಕೊಟ್ಟಿದ್ದನು, ಅದರಲ್ಲಿನ ಚೆಂಬನ್ನು ಅವರು ಬೈರಾಗಿಗೆ ಕೊಟ್ಟರು. ಅದನ್ನು ಅವರು ಸ್ವೀಕರಿಸಿ, ಜೋಳಿಗೆಯಲ್ಲಿ ಹಾಕಿದರು. ಅವನನ್ನು ಬೀಳ್ಕೊಟ್ಟರು. ಬೈರಾಗಿ ಮರೆಯಾಗುವವರೆಗೆ ಅವರು ಅವರ ಕಡೆಗೇ ನೋಡುತ್ತಾ ನಿಂತರು.

□□

-: ಮೂವತ್ತು :-

# ಶ್ರೀ ಮಹಾರಾಜರ ಗೋಸೇವೆ

ಶ್ರೀ ಮಹಾರಾಜರು ಹರ್ದಾ ಬಿಟ್ಟು, ಮೊದಲಿಗೆ ಅವರು ಲಖನೌಗೆ ಹೋದರು. ಲಖ್ನೋದಿಂದ ಅವರು ನೈಮಿಷಾರಣ್ಯಕ್ಕೆ ಹೋದರು. ಈ ಸಲ ಅವರು ಶ್ರೀಮಂತ ನಾನಾಸಾಹೇಬ ಪೇಶವೆ ಅವರಿಗೆ ಕೊಟ್ಟ ಮಾತಿನ ಪೂರ್ಣತೆಗಾಗಿ ನೈಮಿಷಾರಣ್ಯಕ್ಕೆ ಬಂದಿದ್ದರು. 'ನಿಮ್ಮ ಅಂತ್ಯಕಾಲದಲ್ಲಿ ನಾನು ಉಪಸ್ಥಿತನಾಗಿರುವೆ' ಎಂಬ ಮಾತನ್ನು ಮಾಹಾರಾಜರು ಅವರಿಗೆ ಕೊಟ್ಟಿದ್ದರು. ನಾನಾ ಸಾಹೇಬರಿಗೆ ಎಂಭತ್ತು ದಾಟಿತ್ತು, ಅವರಿಗೆ ಅಲ್ಲಿಯ ಚಳಿ ಸಹಿಸಲಾಗುತ್ತಿರಲಿಲ್ಲ. ಚಳಿಯಿಂದ ಶೀತ ಮತ್ತು ಕಫ ಉಂಟಾಯಿತು. ಅದರಿಂದ ಅವರಿಗೆ ಜ್ವರ ಬಂದು ಅದು ಇಳಿಯುತ್ತಿರಲಿಲ್ಲ. ಅವರಿಗೆ ಮಹಾರಾಜರ ನೆನಪಾಯಿತು. ಅವರು ಮಹಾರಾಜರ ಭೆಟ್ಟಿಯ ಆಸೆ ಇಟ್ಟುಕೊಂಡು ಅವರ ಪ್ರತೀಕ್ಷೆಯಲ್ಲಿ ಇದ್ದರು. ಹೀಗೆಯೇ ಐದು-ಹತ್ತು ದಿನ ಕಳೆದವು, ಆದರೆ ಅದೇ ಹೊತ್ತಿಗೆ ಅಂದರೆ ಏಳನೆಯ ದಿನ ಬೆಳಿಗ್ಗೆ ಶ್ರೀಮಹಾರಾಜರು ಅವರ ಮುಂದೆ ನಿಂತರು. ಇಬ್ಬರ ಕಣ್ಣುಗಳಿಂದಲೂ ಆನಂದಾಶ್ರು ಹರಿದವು. ಶ್ರೀಮಹಾರಾಜರು ನಾನಾ ಸಾಹೇಬರಿಗೆ ಧೈರ್ಯ ತುಂಬಿದರು - ನಾನಾ ಸಾಹೇಬರೇ! ನಿಮ್ಮ ಗೆಲುವಾಯಿತು, ಯಾವುದೇ ಚಿಂತೆ ಬೇಡ, ಶ್ರೀರಾಮ ನಿಮ್ಮ ಬಳಿಯಲ್ಲೇ ಇದ್ದಾನೆ. ಎರಡು ದಿನಗಳಲ್ಲಿ ಅವರು ಅಸ್ವಸ್ಥರಾದರು. ಮಧ್ಯಾಹ್ನದ ಸಮಯ, ಶ್ರೀಮಹಾರಾಜರು ಅವರ ಮಸ್ತಕ ತಮ್ಮ ತೊಡೆಯಲ್ಲಿಟ್ಟುಕೊಂಡರು, ನಾನಾ ಸಾಹೇಬರು ಕೈಮುಗಿದು, ಉದ್ಗರಿಸಿದರು - ಮಹಾರಾಜರೇ! ಬರುತ್ತೇನೆ, ರಾಮಾ! ನಡೆ, ನನ್ನನ್ನು ಜೊತೆಗೆ ಕರೆದುಕೊಂಡು ಹೋಗು, ಮಹಾರಾಜರು ಅವರ ಬಾಯಲ್ಲಿ ಗಂಗಾಜಲ ಹಾಕಿದರು. ನಾನಾ ಸಾಹೇಬರು ಇಹಲೋಕದ ಯಾತ್ರೆ ಮುಗಿಸಿದರು. ಶ್ರೀಮಹಾರಾಜರು ಸ್ವತಃ ಅವರ ಅಗ್ನಿಸಂಸ್ಕಾರ ಮಾಡಿದರು, ಅವರ ಅಸ್ಥಿ ಪ್ರಯಾಗದಲ್ಲಿ ಗಂಗೆಯಲ್ಲಿ ವಿಸರ್ಜಿಸಿದರು. ಉತ್ತರಕಾರ್ಯ ನೆರವೇರಿಸಿ ಅವರು ಹರ್ದ್ಯಾಗೆ ಹಿಂತಿರುಗಿದರು.

ಕೆಲದಿನಗಳಲ್ಲಿ ಹದ್ರ್ಯಾದಿಂದ ಗೊಂದವಲೆಗೆ ಮರಳಿದರು. ಹೆಚ್ಚುಕಮ್ಮಿ ಒಂದೂವರೆ ವರ್ಷದ ಬಳಿಕ ಅವರು ಗೊಂದವಲೆಗೆ ಮರಳಿದ್ದರು. ಗೊಂದವಲೆಯ ಎಲ್ಲರಿಗೂ ಆನಂದದ ಪಾರವೇ ಇರಲಿಲ್ಲ. ಯಾತ್ರೆಯ ಉದ್ಯಾಪನೆ ಭಾರೀ ಉತ್ಸಾಹದಿಂದ ನೆರವೇರಿತು. ಎಲ್ಲೆಲ್ಲಿ ಯಾರು ಯಾರು ಶ್ರೀಮಹಾರಾಜರಿಗೆ ಭೆಟ್ಟಿಯಾಗಿದ್ದರೋ ಅವರಿಗೆಲ್ಲನಾಮಸ್ಮರಣೆಯ ಮಹಾತ್ಮ್ಯ ಹೇಳಿದರು. ಯಾವುದೇ ಭೇದ ಭಾವವಿಲ್ಲದೆ ಅವರು ಬಂದವರಿಗೆ ಊಟ ಹಾಕಿದರು. ಅವರ ಗುಣದೋಷ ಸಹಿತ ಸ್ವೀಕರಿಸಿ ಅವರಿಗೆ ರಾಮನಾಮ ಜಪಿಸಲು ಉದ್ಯುಕ್ತಗೊಳಿಸಿದರು. ಬಂದವರಿಗೆಲ್ಲಾ ಯಾವುದೇ ಭೇದಭಾವ ವಿರಿಸದೆ ಸನ್ಮಾನದಿಂದ ಭೋಜನ ಪ್ರಸಾದ ಕೊಡಲಾಗುತ್ತಿತ್ತು. ಶ್ರೇಷ್ಠವಾದ ಅನ್ನದಾನ ಅಪಾರವಾಗುತ್ತಿತ್ತು. ಈಗ ಅಲ್ಲಿ ಬಯಕೆ-ಹರಕೆ ಇರುವುದು ಸ್ವಾಭಾವಿಕವಾಗಿದೆ. ಕೆಲವು ಜನರು ಬೇರೆ ವಿಕೃತ ಇಚ್ಛೆಯಿಂದ ಬರುತ್ತಿದ್ದರು. ಮಂದಿರದಲ್ಲಿ ಕೆಲವೊಮ್ಮೆ ಕಳ್ಳತನವಾಗುತ್ತಿತ್ತು. ಯಾರು ಆ ವಸ್ತುವನ್ನು ಕದ್ದರೋ ಅವರಲ್ಲಿಗೆ ಶ್ರೀಮಹಾರಾಜರು ನೇರವಾಗಿ ಹೋಗುತ್ತಿದ್ದರು. ಅವರಿಗೆ ಸಮಜಾಯಿಸಿ ಯಾರೂ ನೋಡುವುದಿಲ್ಲ ಎಂದು ತಿಳಿದು ನೀವು ಬೇರೆಯವರ ವಸ್ತು ಕದಿಯುತ್ತೀರಿ, ಆದರೆ ಎಲ್ಲೆಡೆ ರಾಮನ ಗಮನ ಇರುತ್ತದೆ. ಕಳ್ಳತನ ಮಾಡಿದರೆ ನಿಮಗೆ ಶಿಕ್ಷೆಯಾದೀತು, ಜೈಲೂ ಆಗಬಹುದು. ಆ ವಸ್ತು ನನಗೆ ಕೊಡಿರಿ, ಯಾವುದು ಯಾರದು ಕೊಡುವ ಕೆಲಸ ನಾನು ಮಾಡುವೆನು. ನಿಮ್ಮ ಹೆಸರು ಯಾರಿಗೂ ತಿಳಿಯದು, ಪುನಃ ಇಂತಹ ಪಾಪಮಾತ್ರ ಮಾಡಬೇಡಿ, ರಾಮನಾಮ ಕೊಂಡಾಡಿ, ರಾಮನು ನಿಮ್ಮ ಉದ್ಧಾರ ಮಾಡುವನು. ಕದ್ದಿರುವ ವಸ್ತುವನ್ನು ಸ್ವತಃ ಮಹಾರಾಜ ಅವರಿಂದ ಪಡೆದು ಹಾಗೂ ಯಾರದೋ ಅವರಿಗೆ ಕೊಡುತ್ತಿದ್ದರು. ಕೇಳಿದರೆ ಹೇಳುತ್ತಿದ್ದರು, ಅದು ನನಗೆ ಸಿಕ್ಕಿತು, ನಿಮ್ಮ ವಸ್ತು ಕಳೆದು ಹೋಗಿತ್ತಲ್ಲ, ನೀವು ವಿಚಾರಿಸುತ್ತಾ, ಹುಡುಕುತಿದ್ದೀರಿ ಅದರಿಂದ ನಿಮ್ಮಲ್ಲಿಗೆ ಬಂದೆ, ಆ ಕಳ್ಳನಿಗೆ ಹೊಟ್ಟೆ ತುಂಬಾ ಊಟ ಹಾಕಿ ಕಳಿಸುತ್ತಿದ್ದರು.

ಒಮ್ಮೆ ಶ್ರೀಬ್ರಹ್ಮಾನಂದ ಸ್ವಾಮಿ ಗೊಂದವಲೆಯಲ್ಲಿದ್ದಾಗ ಶ್ರೀಮಹಾರಾಜರ ಹುಟ್ಟುಹಬ್ಬ ಬಂತು, ಬ್ರಹ್ಮಾನಂದ ಸ್ವಾಮಿಗಳು ಶ್ರೀರಾಮನ ಮತ್ತು ಶ್ರೀಮಹಾರಾಜರ ಪರಮ ಭಕ್ತರಾಗಿದ್ದರು. ಅವರ ಆಧ್ಯಾತ್ಮದಲ್ಲಿ ಅಧಿಕಾರ ದೊಡ್ಡದಿತ್ತು. ಶ್ರೀಮಹಾರಾಜರ ಹುಟ್ಟುಹಬ್ಬಕ್ಕೆ ಶ್ರೀಖಂಡ ಮಾಡಬೇಕೆಂದು ಅವರ ಮನಸ್ಸಿಗೆ ಬಂತು. ಅದರಂತೆ ಆಗುವ ಖರ್ಚಿಗಾಗಿ ಜನರಿಂದ ಸ್ವಲ್ಪ-ಸ್ವಲ್ಪ ಚಂದಾಹಣ ಸೇರಿಸಿದರು, ಶ್ರೀಮಹಾರಾಜರಿಗೆ ಇದು ತಿಳಿದಾಗ ಅವರಿಗೆ ಸಿಟ್ಟು ಬಂತು. ಅವರು ಆ ಹಣವನ್ನು

ಅವರವರಿಗೆ ಹಿಂದಕ್ಕೆ ಕೊಡಲು ಹೇಳಿದರು. ಅವರು ಹೇಳುವಂತೆ ಬೇಡುವುದಿದ್ದರೆ ಶ್ರೀರಾಮನಲ್ಲೇ.

ಶ್ರೀಮಹಾರಾಜರು ಸ್ವತಃ ರಾಮನಾಮವನ್ನು ಶ್ರದ್ಧೆಯಿಂದ ಮತ್ತು ನಿಷ್ಠೆಯಿಂದ ಜಪಿಸುತ್ತಿದ್ದರು. ಶ್ರೀರಾಮನನ್ನು ನಿಜವಾಗಿ ಸರ್ವಸ್ವವೆಂದು ತಿಳಿಯುತ್ತಿದ್ದರು. ಗೊಂದವಲೆಗೆ ರಾಮನ ಸೆಳೆತದಿಂದ ಮತ್ತು ಶ್ರೀಮಹಾರಾಜರನ್ನು ನೋಡಲು, ಅವರ ದರ್ಶನ ಪಡೆಯಲು ಅಕ್ಷರಶಃ ಸಾವಿರಾರು ಜನರು ಬರುತ್ತಿದ್ದರು. ಎಲ್ಲರಿಗೂ ರೊಟ್ಟಿ, ಸಾರು ಅನ್ನ ಸಿಗುತ್ತಿತ್ತು. ಪಂಕ್ತಿಗಳ ಮೇಲೆ ಪಂಕ್ತಿಗಳು ಏಳುತ್ತಿದ್ದವು. ದೊನ್ನೆ, ಊಟದೆಲೆ ಹಚ್ಚುವುದು, ಅಡಿಗೆ ಮಾಡುವುದು, ಬಡಿಸುವುದು, ಎಂಜಲೆಲೆ ತೆಗೆದು ಗೋಮ ಹಚ್ಚುವುದು, ಹೀಗೆ ಎಲ್ಲ ಕೆಲಸ ಮಾಡುವಾಗಲೂ 'ಜಯ ಜಯ ಶ್ರೀರಾಮ, ಜಯ ಜಯ ಶ್ರೀರಾಮ' ಹೀಗೆ ಉದ್ಘೋಷ ಆಗುತ್ತಿತ್ತು, ಶ್ರೀಮಹಾರಾಜರು ಈ ಕ್ರಮ ಪ್ರಾರಂಭಿಸಿದರು. ಕೆಲವೊಮ್ಮೆ ಹಬ್ಬ-ಹರಿದಿನಗಳಲ್ಲಿ ಯಾವುದಾದರೂ ಸಿಹಿ ಭಕ್ಷ್ಯವೂ ಭೋಜನ ಪ್ರಸಾದದಲ್ಲಿ ಇರುತ್ತಿತ್ತು. ಮಹಾರಾಜರು ಎಲ್ಲ ಪಂಕ್ತಿಗಳು ಆಗಿ, ಎಲ್ಲರೂ ಊಟಮಾಡಿ ಎದ್ದಮೇಲೆಯೇ ಅವರು ಪಕ್ವಾನ್ನ ತಿನ್ನುತ್ತಿದ್ದರು.

ಶ್ರೀರಾಮ ಭಕ್ತಿ , ಭಕ್ತಸೇವಾ ಮತ್ತು ಗೋಸೇವೆ ಇವು ಶ್ರೀಮಹಾರಾಜರ ಜೀವನದ ತ್ರಿಸೂತ್ರಿ ಇತ್ತು . ಗೋವನ್ನು ನಾವು ತಾಯಿ ಎಂದು ತಿಳಿಯುತ್ತೇವೆ. ಅದರ ಹಾಲು ಅತ್ಯಂತ ಗುಣಕಾರೀ ಆಗಿದೆ. ತಾಯಿಯ ಹಾಲಿಗೆ ಪರ್ಯಾಯವೆಂದು ಹಸುವಿನ ಹಾಲು ಇರುತ್ತದೆ. ಕೇವಲ ಹಾಲೇ ಅಲ್ಲ, ಗೋಮೂತ್ರ , ಗೋಮಯ ಎಲ್ಲವೂ ಉಪಯುಕ್ತವಾಗಿದೆ, ಅದರಿಂದಲೇ ಪ್ರಾಚೀನ ಭಾರತೀಯ ಸಂಸ್ಕೃತಿಯು ಆಕೆಯನ್ನು 'ಗೋಮಾತೆ' ಎಂದು ಗೌರವದಿಂದ ಸಂಬೋಧಿಸಿದೆ. ಇಂತಹ ಗೋಮಾತೆಯ ಮಾಂಸ ತಿನ್ನುವುದು, ಆಕೆಯನ್ನು ಕೊಲ್ಲುವುದು ಇದು ಶ್ರೀ ಮಹಾರಾಜರಿಗೆ ವಿಲಕ್ಷಣ ವೇದನೆ ಕೊಡುತ್ತಿತ್ತು. ಅವರು ಗೊಂದವಲೆಯಲ್ಲಿ ದೊಡ್ಡ ಗೋಶಾಲೆ ಕಟ್ಟಿಸಿದರು. ಕೊಲ್ಲಲು ಕೊಂಡು ಹೋಗುವ ದನಗಳನ್ನು ಆ ವ್ಯಕ್ತಿಯಿಂದ ಹೇಳಿದಷ್ಟು ಹಣ ಕೊಟ್ಟು ಖರೀದಿಸುತ್ತಿದ್ದರು, ತಮ್ಮ ಗೋಶಾಲೆಗೆ ತಂದು ಅವುಗಳನ್ನು ವಿಲಕ್ಷಣ ಪ್ರೇಮದಿಂದ ಸಾಕುತ್ತಿದ್ದರು, ಗೊಂದವಲೆಯಿಂದ ಎಂಟು ಗಾವುದ ದೂರದಲ್ಲಿ ಮ್ಹಸವಡ ಎಂಬ ಊರು ಇದೆ. ಅಲ್ಲಿ ಪ್ರತಿವರ್ಷ ಜಾನುವಾರು ಸಂತೆ ನಡೆಯುತ್ತಿತ್ತು. ಅದರಲ್ಲಿ ಗೋವುಗಳನ್ನು ಮಾರಲಿಕ್ಕಾಗಿ ತರುತ್ತಿದ್ದರು. ದನಗಳನ್ನು ಖರೀದಿಸಿ, ಅವನ್ನು ಕತ್ತರಿಸಿ, ಅವುಗಳ ಮಾಂಸಮಾರಿ ಹಣಗಳಿಸುವ ಉದ್ಯೋಗವಾಗಿತ್ತು . ಆ ಸಂತೆಗೆ ಹೋದಾಗ ಕೊಲ್ಲಲು ಮಾರಲು ತಂದ ಹಸುಗಳನ್ನು ನೋಡಿ ಶ್ರೀಮಹಾರಾಜರ ಕಣ್ಣುಗಳಿಂದ

ನೀರು ಹರಿಯತೊಡಗಿದಾಗ, ಅವರು ಆ ಎಲ್ಲ ಹಸುಗಳನ್ನು ಮಾರುವವನು ಹೇಳಿದಷ್ಟು ಹಣಕೊಟ್ಟು, ತಮ್ಮ ಗೋಶಾಲೆಗೆ ತಂದರು. ಎಲ್ಲೆಲ್ಲಿ ಗೋವುಗಳ ಮಾರಾಟವಾಗುತ್ತಿತ್ತೋ ಅಲ್ಲಲ್ಲಿಗೆ ಶ್ರೀಮಹಾರಾಜರು ಹೋಗಿ ಆ ಗೋವುಗಳನ್ನು ಖರೀದಿಸಿ ಅವುಗಳ ಸೇವೆ ಮಾಡುತ್ತಿದ್ದರು. ಗೋಶಾಲೆಯು ದೊಡ್ಡದಾಗಿ ಕಟ್ಟಿತ್ತು , ಅದೂ ತುಂಬಿ ಹೋಯಿತು. ಶ್ರೀಮಹಾರಾಜರು ಸ್ವತಃ ಗೋಶಾಲೆಯನ್ನು ಸ್ವಚ್ಛಗೊಳಿಸುತ್ತಿದ್ದರು. ಗೋಶಾಲೆಗೆ ಹೋಗಿ ಕುಳಿತುಕೊಳ್ಳುತ್ತಿದ್ದರು ಮುಂದೆ ಅವರು ಅಭ್ಯಂಕರ ಎಂಬ ಗೃಹಸ್ಥರನ್ನು ಗೋಶಾಲೆಯ ವ್ಯವಸ್ಥೆ ಮಾಡಲು ನೇಮಿಸಿದರು. ಇದರಲ್ಲಿ ಖರ್ಚು ಎಷ್ಟಾಗುತ್ತದೆ ಎಂಬುದನ್ನು ಮಹಾರಾಜರು ಎಂದೂ ನೋಡಲಿಲ್ಲ. ಗೋಮಾತೆಯನ್ನು ಜೀವಕ್ಕಿಂತ ಹೆಚ್ಚು ಪ್ರೀತಿಸಿದರು. ಯಾರಾದರೂ ರೈತ ಬಂದರೆ ಅವನಿಗೆ ಗೋವಿನ ಮಹತ್ವವನ್ನು ತಿಳಿಸಿಕೊಡುತ್ತಿದ್ದರು. ಮಹಾರಾಜರು ದೊಡ್ಡ ಪ್ರಮಾಣದಲ್ಲಿ ಗೋದಾನವನ್ನೂ ಮಾಡಿದರು. ಕೆಲವರು ಮಾತ್ರ ಇದರ ಅಪವ್ಯಯ ಮಾಡಿದರು. ಆಕಳು ಹಾಲು ಕೊಡುತ್ತಿರುವಾಗ ಅವರು ಕೊಂಡು ಹೋಗುತ್ತಿದ್ದರು ಹಾಗೂ ಆ ಆಕಳು ಹಾಲು ಕೊಡದಿದ್ದಾಗ ಗೊಂದವಲೆಗೆ ಶ್ರೀಮಹಾರಾಜರ ಬಳಿ ತಂದು ಬಿಡುತ್ತಿದ್ದರು. ಶ್ರೀಮಹಾರಾಜರು ಶಾಂತವಾಗಿ ಅದನ್ನು ಸ್ವೀಕರಿಸುತ್ತಿದ್ದರು. ಒಮ್ಮೆ ಶ್ರೀಮಹಾರಾಜರ ಬಳಿಗೆ ಒಬ್ಬ ಕುಷ್ಠರೋಗೀ ಬಂದನು. ತನಗಾದ ರೋಗದಿಂದ ಅವನು ತ್ರಸ್ತನಾಗಿದ್ದನು. ಶ್ರೀಮಹಾರಾಜರು ಅವನಿಗೆ ಗೋಶಾಲೆಯಲ್ಲಿ ಗೋಸೇವೆ ಮಾಡಲು ಹೇಳಿದರು. ಅವನೂ ಮನಸ್ಸಿಟ್ಟು ಗೋಸೇವೆ ಮಾಡಿದನು. ಅವನ ಕುಷ್ಠರೋಗವೂ ನಿಯಂತ್ರಣಕ್ಕೆ ಬಂತು. ಒಮ್ಮೆ ಗೋಮಾಂಸ ಮಾರುವವರು ಹಸುಗಳನ್ನು ಅಟ್ಟಿಕೊಂಡು ಹೋಗುತ್ತಿದ್ದರು, ಮಹಾರಾಜರಿಗೆ ಅದು ತಿಳಿಯಿತು. ಅವರು ಆ ಕಟುಕರನ್ನು ಕರೆಸಿಕೊಂಡು ನಾನು ಈ ಗೋವುಗಳನ್ನು ಖರೀದಿಸುತ್ತೇನೆ. ಗೋವು ಮಾತೆಯಾಗಿದೆ, ಆಕೆಯನ್ನು ಕೊಲ್ಲುವುದು, ಅದರ ಮಾಂಸ ಮಾರುವುದು, ಅದನ್ನು ತಿನ್ನುವುದು ಪಾಪವಾಗಿದೆ. ನಾನು ನಿಮಗೆ ನಷ್ಟ ಮಾಡುವುದಿಲ್ಲ, ನನಗೆ ಈ ಗೋವುಗಳನ್ನು ಮಾರಿ ಬಿಡಿ, ನೀವು ಹೇಳಿದಷ್ಟು ಹಣ ಕೊಡೆವನು. ಆ ಜನರು ತಯಾರಾಗಿಲ್ಲ. ಅವರಲ್ಲಿ ಒಬ್ಬ ಹೇಳಿದ – ಗೋವನ್ನು ಕತ್ತರಿಸಲಾಗುತ್ತದೆ ಎಂದು ಮನುಷ್ಯರಾದ ನಿಮಗೆ ಕಳಕಳಿ, ಅವರಿಗೇನು ಇದೆ ಅದರದ್ದು! ಶ್ರೀಮಹಾರಾಜರು ಹೇಳಿದರು – ಇವು ಮೂಕ ಜೀವಿಗಳು, ಇವಕ್ಕೆ ನಮ್ಮ ಭಾಷೆಯಲ್ಲಿ ಮಾತನಾಡಲು ಬರುವುದಿಲ್ಲ ನಿಜ, ಆದರೆ ಅವುಗಳ ಭಾವನೆ ಅತಿಶಯ ಸೂಕ್ಷ್ಮವಾಗಿರುತ್ತವೆ. ನಾವು ಇವುಗಳೊಂದಿಗೆ ಪ್ರೇಮದಿಂದ ವರ್ತಿಸಿದರೆ ಈ ಪ್ರಣಿಗಳು ಅದಕ್ಕಿಂತ ಎಷ್ಟೋ ಪಟ್ಟು ಹೆಚ್ಚು ನಮ್ಮ ಮೇಲೆ ಪ್ರೇಮ

ಮಾಡುತ್ತವೆ. ಈ ಜನರಿಗೆ ಅದು ಅರ್ಥವಾಗಲಿಲ್ಲ. ಕೊನೆಗೆ ಮಹಾರಾಜರು ಹೇಳಿದರು– ನಾನು ದೂರ ನಿಂತು ಈ ಗೋವುಗಳನ್ನು ಕರೆಯುತ್ತೇನೆ, ಇವು ನನ್ನ ಹತ್ತಿರ ಬರುವವು. ಅವರಲ್ಲಿ ಒಬ್ಬ ಹೇಳಿದ – ನಾವು ಅವುಗಳ ಹಗ್ಗ ಬಿಚ್ಚುತ್ತೇವೆ, ನೀವು ದೂರದಿಂದ ಕರೆಯಿರಿ, ಅವು ನಿಮ್ಮ ಬಳಿಗೆ ಬಂದರೆ ಸರಿ, ಇಲ್ಲವಾದರೆ ನಾವು ಇವನ್ನು ಕತ್ತರಿಸಲು ಕೊಂಡು ಹೋಗುವೆವನು. ಶ್ರೀಮಹಾರಾಜರು ಇದನ್ನು ಒಪ್ಪಿಕೊಂಡರು. ಆ ಜನರು ಹಸುಗಳ ಹಗ್ಗ ಬಿಚ್ಚಿದರು, ಶ್ರೀಮಹಾರಾಜರು ಇನ್ನೂರು ಹೆಜ್ಜೆ ದೂರ ಹೋದರು, ಅನಂತರ ಅವರು ಆ ಹಸುಗಳನ್ನು ಅತೀವ ಪ್ರೇಮದಿಂದ ಕರೆದರು – ಗಂಗೆ, ಯಮುನೆ, ಸರಸ್ವತೀ, ಕೃಷ್ಣೇ , ಗೋದಾವರೀ, ತುಂಗಾ, ಕಪಿಲಾ ಬನ್ನಿ! ಕ್ಷಣಾರ್ಧದಲ್ಲಿ ಆ ಗೋವುಗಳು ಓಡುತ್ತಾ ಶ್ರೀಮಹಾರಾಜರ ಹತ್ತಿರ ಬಂದು ಅಂಬಾ! ಅಂಬಾ ಎಂದು ಕೂಗುತ್ತಾ ಬಂದವು. ಕಟಕರು ಆಶ್ಚರ್ಯ ಚಕಿತರಾದರು. ಶ್ರೀಮಹಾರಾಜರು ಅವರಿಗೆ ಆ ಹಸುಗಳ ಯೋಗ್ಯ ಬೆಲೆ ಕೊಟ್ಟರು ಮತ್ತು ಆ ಗೋವುಗಳನ್ನು ಗೋಶಾಲೆಗೆ ತಂದರು. ಹೀಗೆ ಅನೇಕ ಗೋವುಗಳನ್ನು ಅವರು ತಮ್ಮ ಗೋಶಾಲೆಗೆ ತಂದರು ಮತ್ತು ಅವುಗಳನ್ನು ಪ್ರೇಮದಿಂದ ಸಾಕಿದರು.

ಮನುಷ್ಯನು ಮನುಷ್ಯರೊಂದಿಗೆ ಮನುಷ್ಯರಂತೆಯೇ ವರ್ತಿಸಬೇಕು, ಆದರೆ ಪ್ರಾಣಿಗಳೊಂದಿಗೂ ಕ್ರೂರವಾಗಿ ನಡೆದುಕೊಳ್ಳಬಾರದು. ಮೂಕ ಪ್ರಾಣಿಗಳ ಮೇಲೆ ನಾವು ಪ್ರೇಮ ಮಾಡಿದರೆ ಆ ಪ್ರಾಣಿಗಳು ನಮ್ಮ ಮೇಲೆ ಅತೀವ ಪ್ರೇಮ ಮಾಡುತ್ತವೆ. ಶ್ರೀ ಮಹಾರಾಜರ ಗಂಗಾ ಎಂಬ ಹಸು, ಬತಾಶಾ ಎಂಬ ಕುದುರೆ, ಅವರೊಂದಿಗೆ ಇರುವ ನಾಯಿ, ಇವೆಲ್ಲ ಪ್ರಾಣಿಗಳಲ್ಲಿ ಶ್ರೀಮಹಾರಾಜರು ವಿಲಕ್ಷಣ ಪ್ರೇಮವಿಟ್ಟಿದ್ದರು. ಈ ಪ್ರಾಣಿಗಳೂ ಕೂಡ ಮಹಾರಾಜರಲ್ಲಿ ಜೀವಕ್ಕಿಂತ ಹೆಚ್ಚಾದ ಪ್ರೀತಿ ಇಟ್ಟಿದ್ದವು. ಗೊಂದವಲೆಯಲ್ಲಿದಾಗ ಶ್ರೀ ಮಹಾರಾಜರು ಗೋಶಾಲೆಗೆ ನಿತ್ಯ ಹೋಗುತ್ತಿದ್ದರು. ಪ್ರತಿಯೊಂದು ಹಸುವಿನ ಬಳಿಗೆ ಹೋಗಿ ಪ್ರೇಮದಿಂದ ಮಾತನಾಡುತ್ತಿದ್ದರು. ಅವುಗಳ ಬೆನ್ನು ಸವರುತ್ತಿದ್ದರು. ಗೋವುಗಳಿಗೂ ಪ್ರೇಮಮಯ ಹಸ್ತಸ್ಪರ್ಶದಿಂದ ಶಾಂತಿ ಮತ್ತು ಸಮಾಧಾನ ಸಿಗುತ್ತಿತ್ತು.

□□

-: ಮೂವತ್ತೊಂದು :-

# ರಾಮನಾಮ ಸಾಮರ್ಥ್ಯದಿಂದ ಹಾಲಾಹಲ ಶಾಂತವಾಯಿತು

1876 ರಲ್ಲಿ ಭಾರೀದೊಡ್ಡ ಕ್ಷಾಮವನ್ನು ಮಹಾರಾಷ್ಟ್ರ ಪ್ರಾಂತವೇ ಇದಿರಿಸಬೇಕಾಯಿತು. ಆಗ ಶ್ರೀಮಹಾರಾಜರು ಬಹಳ ದೊಡ್ಡ ಕಾರ್ಯ ಮಾಡಿದರು. ಬಡಬಗ್ಗರಿಗೆ ಅನ್ನಛತ್ರ ತೆರೆದರು. ಇದೆಲ್ಲವನ್ನು ಆಗಿನ ಔಂಧದ ರಾಜನು ನೋಡಿದನು. ಔಂಧದ ರಾಜನು ಪ್ರಜಾದಕ್ಷನಾಗಿದ್ದನು. ಮಹಾರಾಜರ ಕಾರ್ಯ ಅವರಿಗೆ ವಿಲಕ್ಷಣ ಮೆಚ್ಚಿಗೆಯಾಯಿತು. ಅವರಿಗೆ ಮಹಾರಾಜರ ಮೇಲೆ ಭಕ್ತಿ ಉಂಟಾಯಿತು. ರಾಜ ಮತ್ತು ಅವರ ಪತ್ನೀ ಇಬ್ಬರೂ ಆಗಾಗ ಶ್ರೀಮಹಾರಾಜರ ದರ್ಶನಕ್ಕಾಗಿ ಬರತೊಡಗಿದರು. ಮುಂದೆ ರಾಜನ ದೇಹಾವಸಾನವಾಯಿತು, ಔಂಧ ಸಂಸ್ಥಾನದ ಮನೆತನದಲ್ಲಿ ಮತಭೇದ ಪ್ರಾರಂಭವಾಯಿತು. ಅದರಿಂದ ಬೇಡದ ಸಂಗತಿಗಳು ನಡೆಯ ತೊಡಗಿದವು. ಪ್ರತಿಯೊಬ್ಬ ವ್ಯಕ್ತಿ ಮತ್ತು ಸಮೂಹ ಪರಸ್ಪರರನ್ನು ಅವಮಾನಿಸ ತೊಡಗಿತು. ಈ ಸಂಗತಿ ಸರಕಾರದ ದರಬಾರಿಗೂ ಮುಟ್ಟಿತು.

ಅದು ಬ್ರಿಟೀಶ ಆಳ್ವಿಕೆಯ ಕಾಲ, ಔಂಧ ಸಂಸ್ಥಾನದ ಜಗಳಗಳನ್ನು ನೋಡಿ ಮುಂಬಯಿ ಸರಕಾರವು ಅಲ್ಲಿ ಒಬ್ಬ ಪ್ರಶಾಸಕನನ್ನು ನೇಮಿಸಿತು. ಅವನ ಹೆಸರು ಜೇಕಬ ಎಂದಿತ್ತು . ಅವನು ಕಲೆಕ್ಟರ್ ಆಗಿದ್ದ. ನೇಮಕಗೊಂಡ ಪ್ರಾರಂಭದಲ್ಲಿ ಜೇಕಬನು ನಿಯಮಾನುಸಾರ ಕೆಲಸ ಮಾಡುತ್ತಿದ್ದ. ಆ ರಾಜಮನೆತನದಲ್ಲಿ ಓರ್ವ ಕುಂಟ, ಹೆಳವ ಸ್ತ್ರೀ ಇದ್ದಳು, ಅವಳು ಶ್ರೀಮಹಾರಾಜರ ಪರಮ ಭಕ್ತಳಾಗಿದ್ದಳು. ಅವರ ಕೃಪೆಯಿಂದಲೇ ಆಕೆಯ ಪಾಪಗಳು ನಷ್ಟವಾಗಿದ್ದವು. ಈ ಜೆಕಬನಿಗೆ ಆಕೆಯಿಂದ ಮಾತ್ರ ಯಾವುದೇ ಲಾಭವಾಗುತ್ತಿರಲಿಲ್ಲ. ಔಂಧ ಸಂಸ್ಥಾನದಲ್ಲಿ ಎರಡು ಗುಂಪುಗಳಾಗಿದ್ದವು. ಎರಡರಲ್ಲಿಯೂ ವಾದ-ವಿವಾದ, ಜಗಳ ಶುರು ಆಗಿತ್ತು. ಜೇಕಬ ಕೆಲವೊಮ್ಮೆ ಆ ಪಕ್ಷದ

ಪರವಾಗಿದ್ದರೆ, ಮತ್ತೊಮ್ಮೆ ಈ ಪಕ್ಷದ್ದು ಹೀಗೆ ಎರಡೂ ಪಕ್ಷದ ಪರವಾಗಿದ್ದರು. ಎರಡೂ ಕಡೆಯಿಂದ ಹಣ ನುಂಗಲು ತೊಡಗಿದ. ಈ ಹೆಳವ ಸ್ತ್ರೀ ಮಹಾರಾಜರ ಭಕ್ತಳಾಗಿದ್ದಳು ಆದ್ದರಿಂದ ಈಕೆ ತನಗೆ ಏನೂ ಕೊಡುವ ಪಾಪ ಮಾಡುವುದಿಲ್ಲ ಎಂದು ಜೇಕಬನಿಗೆ ತಿಳಿಯಿತು. ಅವನು ಹೊಸತೊಂದು ಪಟ್ಟು ಹೂಡಿದ 'ಶ್ರೀಮಹಾರಾಜರು ನನ್ನ ಮೇಲೆ ವಿಷ ಪ್ರಯೋಗ ಮಾಡಿದ್ದಾರೆ ಎಂದು ಗುಲ್ಲು ಎಬ್ಬಿಸಿದ. ಸುಮ್ಮನೆ ಸುಳ್ಳು ವಂದತಿ ಹರಡಿ ಅವನು ಸುಮ್ಮನಾಗಲಿಲ್ಲ, ಅವನು ಹಾಗೇ ಮಹಾರಾಜರ ಮೇಲೆ ನ್ಯಾಯಾಲಯದಲ್ಲಿ ದಾವೆಯೂ ಹೂಡಿದ. ಸಾತಾರೆಯ ದಾದಾಸಾಹೇಬ ಕರಂದೀಕರ್ ಇವರು ಶ್ರೀಮಹಾರಾಜರ ವಕೀಲರಾಗಿದ್ದರು.

ಸುದ್ದಿ ಹಬ್ಬಿಸುವುದು ಸುಲಭ. ಅದನ್ನು ಸಿದ್ಧ ಮಾಡಲು ಕಠಿಣವಿರುತ್ತದೆ. ಜೇಜಬನು ತನ್ನ ಅಧಿಕಾರದ ಎಲ್ಲ ಶಕ್ತಿ ಪಣಕ್ಕೆ ಹಚ್ಚಿದನು. ಆದರೂ ಉಪಯೋಗವಾಗಲಿಲ್ಲ. ಶ್ರೀಮಹಾರಾಜರು ನಿರ್ದೋಷಿಯಾಗಿದ್ದರು ಮತ್ತು ನಿರ್ದೋಷಿಯೆಂದೇ ಬಿಡುಗಡೆ ಹೊಂದಿದರು. ದಾದಾ ಸಾಹೇಬರು ನ್ಯಾಯಮೂರ್ತಿಯ ತೀರ್ಮಾನ ಶ್ರೀಮಹಾರಾಜರಿಗೆ ಹೇಳಲು ಬಂದಾಗ ಶ್ರೀಮಹಾರಾಜರು ಊಟದ ಪಂಕ್ತಿಯಲ್ಲಿ ಜನರಿಗೆ ಬಡಿಸುತ್ತಿದ್ದರು. ದಾದಾ ಸಾಹೇಬರು ಆಶ್ಚರ್ಯಚಕಿತರಾದರು. ಅವರು ಹಾಗೇ ಆಡಿಯೂ ತೋರಿದರು. ಶ್ರೀಮಹಾರಾಜರು ಅವರಿಗೆ ಹೇಳಿದರು – ದಾದಾಸಾಹೇಬ! ನೀವು ನನ್ನ ಬಹಳ ದೊಡ್ಡ ಕೆಲಸ ಮಾಡಿದಿರಿ ಎಂದು ಹೇಳಿದರೆ, ನಮ್ಮ ಪ್ರಾರಬ್ಧದಲ್ಲಿರುವಂತೆ ಆಗುತ್ತಾ ಇರುತ್ತದೆ, ಸುಖ-ದುಃಖ, ಸಂಕಟಗಳನ್ನು ಎದುರಿಸಬೇಕಾಗುತ್ತದೆ, ಆದರೆ ಆಗಲೂ ಭಗವಂತನ ಅನುಸಂಧಾನ ಮಾತ್ರ ಸತತ ಇರಿಸಬೇಕು. ಅನುಸಂಧಾನ ಇದ್ದಾಗ ಇದೆಲ್ಲ ಆಟ ನಡೆಯುತ್ತದೆ ಮತ್ತು ಆಟದಲ್ಲಿಯ ಸೋಲು-ಗೆಲುವು ಸಮಾನವಾಗಿರುತ್ತದೆ. ಆದ್ದರಿಂದ ಸತತ ಶ್ರೀರಾಮನಾಮ ಜಪಿಸಬೇಕು.

ಜೇಕಬನಿಗೆ ಈ ದಾವೆಯಲ್ಲಿ ಯಶ ಸಿಗಲಿಲ್ಲ, ಅವನು ಹೆಚ್ಚಾಗಿಯೇ ಕೆರಳಿದ, ಮತ್ತೆ ಅವನು ಬೇರೆಯೇ ವಿಚಾರ ಮಾಡಿದ. ಅವನು ಶ್ರೀಮಹಾರಾಜರ ಮೇಲೆಯೇ ವಿಷ ಪ್ರಯೋಗ ಮಾಡಲು ನಿಶ್ಚಯಿಸಿದನು. ಒಬ್ಬ ವ್ಯಕ್ತಿಗೆ ಹಣದ ಆಮಿಷ ತೋರಿ ಅವನನ್ನು ಮಹಾರಾಜರ ಕಡೆಗೆ ಕಳಿಸಿದನು. ವಾಸ್ತವಿಕವಾಗಿ ಶ್ರೀಮಹಾರಾಜರನ್ನು ಕೊಲ್ಲಲು ಬಂದ ವ್ಯಕ್ತಿಯನ್ನು ಶ್ರೀಮಹಾರಾಜರು ತತ್‌ಕ್ಷಣ ಗುರುತಿಸಿದರು. ಆದರೆ ಸಂತ ಪ್ರವೃತ್ತಿ ಅಲೌಕಿಕವಾಗಿರುತ್ತದೆ. ಅವರು ಆ ವ್ಯಕ್ತಿಯನ್ನು ಪ್ರೇಮದಿಂದ ಮತ್ತು ಆತ್ಮೀಯವಾಗಿ ಸ್ವಾಗತಿಸಿದರು. ಅವನು ಮಹಾರಾಜರ ಚರಣಗಳಲ್ಲಿ ಶಿರವನ್ನಿಟ್ಟನು

ಮತ್ತು ಅವನು ಭಕ್ತನೇ ಆದನು. ಅವನು ಜೇಕಬನ ಕಾರಸ್ಥಾನ ತಿಳಿಸಿ ಕ್ಷಣೆ ಬೇಡಿದನು. ಶ್ರೀಮಹಾರಾಜರಿಗೆ ವಿಷ ಕುಡಿಸಲು ಬಂದ ವ್ಯಕ್ತಿ ಅವರ ಕ್ಷಮೆ ಯಾಚಿಸಿ ರಾಮನಾಮದ ಉಪದೇಶ ಪಡೆದು ಹೊರಟು ಹೋದನು.

ಇಷ್ಟರಲ್ಲೇ ಬುದ್ಧಿ ಬಂದರೆ ಆ ಜೇಕಬ ಎಂಹವನು! ಅವನು ಇಬ್ಬರನ್ನು ಇದೇ ಉದ್ದೇಶದಿಂದ ಕಳಿಸಿದನು. ಅವರಿಬ್ಬರ ಪರಿಸ್ಥಿತಿಯು ಮೊದಲಿನವನಂತೆ ಆಯಿತು. ಎರಡನೆಯ ಮತ್ತು ಮೂರನೆಯ ಶ್ರೀಮಹಾರಾಜರಿಂದ ಅನುಗ್ರಹಿತರಾಗಿ ಹಿಂತಿರುಗಿದರು. ಜೇಕಬ ಸೋಲೊಪ್ಪಲು ತಯಾರು ಇರಲಿಲ್ಲ. ಅವನು ನಾಲ್ಕನೆಯ ವನಿಗೆ ಚನ್ನಾಗಿ ತಯಾರು ಮಾಡಿದ, 'ಗೊಂದವಲೆಗೆ ಹೋಗುವುದು, ಮಹಾರಾಜರ ವಿಶ್ವಾಸ ಸಂಪಾದಿಸುವುದು, ಅವರ ಆತಿಥ್ಯಕ್ಕೆ, ಆತ್ಮೀಯತೆಗೆ ಮರುಳಾಗದಿರುವುದು, ಅವರಿಗೆ ವಿಷ ಹಾಕಿ ಬಂದರೆ ನಿನಗೆ ಹಣದ ಸ್ನಾನವನ್ನೇ ಹಾಕುವೆನು.

ಶ್ರೀಮಹಾರಾಜರು ನಾಲ್ಕನೆಯವನ ಸ್ವಾಗತ ಅಷ್ಟೇ ಪ್ರೇಮದಿಂದ ಮತ್ತು ಆತ್ಮೀಯತೆಯಿಂದ ಮಾಡಿದರು, ಅವನು ಮಾತ್ರ ಎಚ್ಚರನಾಗಿದ್ದ. ಅವನು ಮಹಾರಾಜರನ್ನು ಭೆಟ್ಟಿಯಾದನು. ಎರಡುದಿನ ಅವರ ದರ್ಶನಕ್ಕೆ ಹೋದನು, ಅವನ ದೃಷ್ಟಿಯಲ್ಲಿ ಅವನು ಅವರ ವಿಶ್ವಾಸ ಸಂಪಾದಿಸಿದ. ಮರುದಿನ ಅವನು ಶ್ರೀಮಹಾರಾಜರನ್ನು ಭೋಜನಕ್ಕಾಗಿ ಆಮಂತ್ರಿಸಿದನು. ಅವನೆಂದ–ಮಹಾರಾಜ! ನಾಳೆ ನೀವು ನಮ್ಮ ಮನೆಗೆ ಭೋಜನಕ್ಕಾಗಿ ಬರಬೇಕು, ಎಂದು ನನ್ನ ವಿನಮ್ರ ಪ್ರಾರ್ಥನೆ ಇದೆ. ಅವನು ಶ್ರೀಮಹಾರಾಜರೊಂದಿಗೆ ಭಾವು ಸಾಹೇಬ ಕೇತಕರ ಮತ್ತು ಅಪ್ಪಾಸಾಹೇಬ ಭಡಗಾವಕರ್ ಇವರಿಬ್ಬರನ್ನೂ ಊಟಕ್ಕೆ ಕರೆದನು. ಸ್ವತಃ ಶ್ರೀಮಹಾರಾಜರು ಮತ್ತು ಅವರ ಹತ್ತಿರದ ಭಕ್ತರು. ಈ ಗೃಹಸ್ಥನ ದುಷ್ಟ ಉದ್ದೇಶದ ಕಲ್ಪನೆ ಅವರಿಗಿತ್ತು. ಯಾವ ದಿನ ಮಧ್ಯಾಹ್ನ ಈ ಗೃಹಸ್ಥನ ಕಡೆಗೆ ಊಟಕ್ಕೆ ಹೋಗಬೇಕಿತ್ತೋ ಅಂದು ಬೆಳಗ್ಗಿನಿಂದ ಮಹಾರಾಜರ ದಿನಚರ್ಯೆ ಎಂದಿನಂತೇ ಇತ್ತು. ಮಧ್ಯಾಹ್ನ ಹನ್ನೆರಡು ಗಂಟೆಗೆ ಅವರು ಶ್ರೀರಾಮನಿಗೆ ನೈವೇದ್ಯ ಮಾಡಿ ಬರಲು ಕಳುಹಿಸಿ, ನೈವೇದ್ಯ ಮಾಡಿ ಆ ತಾಟನ್ನು ಹೂತು ಬಿಡಿ ಎಂದು ಹೇಳಿದರು. ಯಾರನ್ನೂ ಜೊತೆಕರೆದುಕೊಳ್ಳದೆ ಶ್ರೀಮಹಾರಾಜರು ಒಬ್ಬರೇ ಆ ಗೃಹಸ್ಥನಲ್ಲಿಗೆ ಊಟಕ್ಕೆ ಹೊರಟರು. ಭಾವುಸಾಹೇಬ ಕೇತಕರ್ ಅವರಿಗೆ ಹೇಳಿದರು – ಆ ಮನುಷ್ಯನ ಉದ್ದೇಶ ಚೆನ್ನಾಗಿಲ್ಲ, ನೀವೂ ಹೋಗಬೇಡಿ. ಸಂತರ ಪ್ರವೃತ್ತಿ ಬೇರೆಯೇ ಆಗಿರುತ್ತದೆ, ಮಹಾರಾಜರು ಹೇಳಿದರು – ನಾನು ಊಟಕ್ಕೆ ಹೋಗದಿದ್ದರೆ ಅವನಿಗೆ ಕೆಟ್ಟದೆನಿಸೀತು,

ನಾನು ಹೋಗಲೇಬೇಕು. ನಮ್ಮನ್ನು ಕಾಪಾಡುವ ಶ್ರೀರಾಮನಿದ್ದಾನೆ, ನೀವು ನಿಶ್ಚಿಂತರಾಗಿರಿ.

ಶ್ರೀಮಹಾರಾಜರು ಒಬ್ಬರೇ ಆ ಗೃಹಸ್ಥನಲ್ಲಿಗೆ ಊಟಕ್ಕೆ ಹೋದರು. ಆ ಗೃಹಸ್ಥನು ಮಹಾರಾಜರಿಗೆ ಆಗ್ರಹ ಪೂರ್ವಕ ಬಡಿಸಿದನು. ಶ್ರೀಮಹಾರಾಜರೂ ಎಲ್ಲ ಅನ್ನ ಗ್ರಹಣ ಮಾಡಿದರು. ಅದರಲ್ಲಿ ಅವನು ಸೋಮಲ ಎಂಬ ವಿಷವನ್ನು ಬೆರೆಸಿಟ್ಟಿದ್ದನು. ಭೋಜನ ಮಾಡಿ ಮಹಾರಾಜರು ಅವನನ್ನು ಬೀಳ್ಕೊಂಡು ಮಂದಿರಕ್ಕೆ ಬಂದರು. ಸ್ವಲ್ಪ ಹೊತ್ತು ಕಳೆದಾಗ ಅವರ ಗಂಟಲು ಒಣಗಿತು, ಆಗಾಗ ನೀರು ಕುಡಿದರೂ ಶಮನವಾಗಲಿಲ್ಲ. ಹೊಟ್ಟೆಯಲ್ಲಿ ಉರಿ ಕಾಣಿಸಿಕೊಂಡಿತು, ಇಡೀ ಶರೀರ ಅಸ್ವಸ್ಥಗೊಂಡಿತು, ಶ್ರೀಮಹಾರಾಜರು ತಳಮಳಿಸಿದರು, ಅವರು ಒಂದು ಬೊಗಸೆ ಯಾಲಕ್ಕಿ ತಿಂದರು, ದಾಹ ನಿಂತಿಲ್ಲ, ಶರೀರಕ್ಕೆ ಬೆಂಕಿತಾಗಿದಂತೆ ವೇದನೆ ಆಗುತ್ತಿತ್ತು, ಅವರ ಬಾಯಿಂದ ವೇದನೆಯ ಹೂಂಕಾರ ಹೊರಡ ತೊಡಗಿತು, ಆದರೆ ಆ ಅವಸ್ಥೆಯಲ್ಲಿಯೂ ಅವರ ರಾಮನಾಮ ನಡೆದೇ ಇತ್ತು . ಆಗ ಅವರ ಹತ್ತಿರದ ಜನರು ಸುತ್ತಲೂ ಸೇರಿದರು, ಭಾವು ಸಾಹೇಬ ಕೇತಕರ್, ಅಪ್ಪಾಸಾಹೇಬ ಭಡಗಾವಕರ್, ನೀಲಕಂಠ ಭವಾನರಾವ್, ಗಂಗೂಬಾಯಿ, ಕಾಶಿ ತಾಯಿ, ಚಿಕ್ಕಮ್ಮ ಹೀಗೆ ಎಲ್ಲರೂ ಇದ್ದರು. ಎಲ್ಲರಿಗೂ ಚಿಂತೆ ಆವರಿಸಿತು. ಏನು ಮಾಡಬೇಕೆಂದು ಯಾರಿಗೂ ತೋಚುತ್ತಿರಲಿಲ್ಲ. ಎಲ್ಲರ ಕಣ್ಣುಗಳಲ್ಲಿ ನೀರು ಒಸರುತ್ತಿತ್ತು . ಆಗಾಗ ಸ್ವತಃ ಮಹಾರಾಜರಿಗೆ ಧೈರ್ಯ ಕೊಡುತ್ತಿದ್ದರು. ಅವರು ಹೇಳುತ್ತಿದ್ದರು – ನೀವು ಗಾಬರಿ ಪಡಬೇಡಿ ನನ್ನ ರಾಮ ನನ್ನ ಬೆನ್ನಿಗೆ ಇದ್ದಾನೆ.

ಕೊನೆಗೆ ಸಂಜೆಗೆ ಶ್ರೀಮಹಾರಾಜರ ದಾಹ ನಿಂತಿತು. ಕಂಠಶೋಷ ಶಮನಗೊಂಡು ಶರೀರದ ತಳಮಳ ಹೊರಟು ಹೋಯಿತು. ರಾತ್ರೆ ಒಂಭತ್ತು ಗಂಟೆಗೆ ಎಲ್ಲರೂ ಫರಾಳ ಮಾಡಲು ಸಿದ್ಧರಾದರು. ಶ್ರೀಮಹಾರಾಜರು ಆ ಗೃಹಸ್ಥನನ್ನು ಫರಾಳಕ್ಕೆ ಬರಲು ಆಮಂತ್ರಸಿದರು. ತನ್ನ ದುಷ್ಟ ಉದ್ದೇಶ ಪೂರ್ಣವಾಯಿತೆಂದು ಆ ಗೃಹಸ್ಥನು ಮಧ್ಯಾಹ್ನವೇ ಔಂಧಕ್ಕೆ ಮರಳಿದನು. ರಾತ್ರೆ ಹತ್ತು ಗಂಟೆಗೆ ಶ್ರೀಮಹಾರಾಜರು ಭಜನೆಗಾಗಿ ಶ್ರೀರಾಮನ ಮುಂದೆ ನಿಂತುಕೊಂಡರು. ಅವರ ಬಾಯಿಂದ ಒಂದು ರಚನೆ ಪ್ರಕಟಗೊಂಡಿತು.

**ಕಾಯಪಾಹತಾ ಶ್ರೇಷ್ಠ ಜನ । ಕಾಳ ಆಲಾ ಹೋ ಕಠಿಣ ॥**
**ನಕಾಭುಲು ಭಲತ್ಯಾಭ್ರಮಿ । ನಾಮ ಜಪಾ ಅಂತರ್ಯಾಮಿ ॥**
**ಭೂಲ ಪಡಲಿ ಕಲಿ ಮಾಜೀ । ಅಸತ್ಯಾಲಾ ಜನ ರಾಜೀ ॥**

**ಕರಾ ಅಸತ್ಯಾಚಾ ಕಂಟಾಳಾ । ನಾಮಜಪಾವೆ ವೇಳೋವೇಳಾ ॥**
**ಜೆಥೆ ತೇಥೆ ಬುದ್ಧಿ ಭೇದ । ಮಿಥ್ಯಾ ಮ್ಹಣತಿ ಶಾಸ್ತ್ರವೇದ ॥**
**ನಾಮ ಸಾಂಗತಾ ಜನಾಂಸೀ । ವಿಷದೇವೂಯೇತಿ ತ್ಯಾಸೀ ॥**
**ದಾಸಮ್ಹಣೆ ಕಾಳಗತೀ । ಪಹಾಯುಗಾಚೀ ಪ್ರತೀತಿ ॥**

ಶ್ರೀಮಹಾರಾಜರ ವಯದ 65ನೇ ವರ್ಷದಲ್ಲಿ ವಿಷ ಪ್ರಯೋಗ ಆಯಿತು. ಪ್ರಾಚೀನ ಕಾಲದಲ್ಲಿ ಸಮುದ್ರಮಂಥನ ಸಮಯ ಮೊದಲಿಗೆ ವಿಷ ಬಂತು. ಭೂಲೋಕವನ್ನು ಕಾಪಾಡಲು ಆ ಹಾಲಾಹಲವನ್ನು ಸ್ವಯಂ ಶಿವನು ಪ್ರಾಶನ ಮಾಡಿದನು. ಅವನ ಶರೀರದಲ್ಲಿ ಪ್ರಂಚಡ ದಾಹವಾಗ ತೊಡಗಿತು, ಆ ದಾಹವು ಶ್ರೀರಾಮನಾಮದಿಂದ ಶಮನಗೊಂಡಿತು. ಅದೇ ಪ್ರಚೀತೀ ಶ್ರೀಮಹಾರಾಜರಿಗೆ ಬಂತು. ವಿಶ ಶಮನಗೊಂಡಿತು, ಆದರೆ ಅನಂತರ ಶ್ರೀಮಹಾರಾಜರಿಗೆ ದಮ್ಮಿನ ವಿಕಾರ ಉಂಟಾಯಿತು. ಅದು ಕೊನೆತನಕ ಇತ್ತು . ಶ್ರೀಮಹಾರಾಜರು ಶ್ರೀರಾಮನಾಮದ ದೃಢ ಭಕ್ತಿಯಿಂದ ಎಲ್ಲವನ್ನು ಆನಂದದಿಂದ ಸಹಿಸಿದರು.



## - ಮೂವತ್ತೆರಡು :-

# ನಿಂದಕನು ಭಕ್ತನಾಗಿ ಪರಿವರ್ತನೆ

ಒಮ್ಮೆ ಶ್ರೀಮಹಾರಾಜರು ಭಕ್ತ ಮಂಡಳಿ ಜೊತೆಗೆ ಹರಟೆ ಹೊಡೆಯುತ್ತಾ ಕುಳಿತಿದ್ದರು. ಸಹಜವಾಗಿ 'ಚಿಂತೆ' ಎಂಬ ವಿಷಯ ಬಂತು. ಚಿಂತೆ ಎಂಬುದು ಪ್ರತಿಯೊಬ್ಬ ವ್ಯಕ್ತಿಗೂ, ಅವನು ಸಣ್ಣವನಿರಲಿ, ದೊಡ್ಡವನಿರಲಿ, ಶ್ರೀಮಂತನಿರಲಿ, ಬಡವನಾಗಿರಲಿ, ಅವನ ಹೃದಯದಲ್ಲಿ ಇದ್ದೇ ಇರುತ್ತದೆ. ಹಣವಿದ್ದರೂ ಅದನ್ನು ಕಾಪಾಡಿಕೊಳ್ಳವ ಚಿಂತೆ, ಇಲ್ಲದಿದ್ದರೆ ಗಳಿಸುವ ಚಿಂತೆ, ಹೆಂಡತಿ- ಮಕ್ಕಳು ಸಂಸಾರವಿದ್ದರೂ ಅದನ್ನು ಸಾಕುವ ಚಿಂತೆ, ಇಲ್ಲದಿದ್ದರೆ ಒಂಟಿತನದ ಚಿಂತೆ, ಹೆಂಡತಿಗೆ ಗಂಡನು ತನ್ನ ಇಚ್ಛೆಯಂತೆ ಹೇಗೆ ಯಾವಾಗ ನಡೆದಾನು ಎಂಬ ಚಿಂತೆ, ಗಂಡನಿಗೆ ಹೆಂಡತಿಯ ಚಿಂತೆ, ಮಕ್ಕಳಿದ್ದರೆ ಮುಂದೆ ಇವರದು ಹೇಗಾಗುವುದು ಎಂಬ ಚಿಂತೆ ಹಾಗೂ ಇಲ್ಲದಿದ್ದರೆ ಎಂದಿಗೆ ಆಗುವರು ಎಂಬ ಚಿಂತೆ, ತನ್ನದು ಚೆನ್ನಾಗಿ ನಡೆಯುತ್ತಿದ್ದರೆ, ತನ್ನಿಚ್ಛೆಯಂತೆ ಎಲ್ಲವೂ ನಡೆಯುತ್ತಿದ್ದರೆ ಇದು ಯಾವಾಗಲೂ ಇದ್ದೀತೇ ಎಂಬ ಚಿಂತೆ ಮತ್ತು ಹಾಗೆ ನಡೆಯದಿದ್ದರೆ ಚಿಂತೆಯೇ ಚಿಂತೆ, ಮಾತಿನ ಓಘದಲ್ಲಿ ಮಹಾರಾಜರು ಹೇಳಿದರು - ನಿಜ ನೋಡಿದರೆ ಯಾವಾಗ ಏನಾದೀತು ಎಂಬುದು ಮನುಷ್ಯನ ಕೈಯಲ್ಲಿಲ್ಲ. ಮಾಡುವವನು ಮಾಡಿಸುವವನು ಆ ವಿಧಾತನು. ನಾವು ಬೇಡಿದ ಕಲ್ಪನೆ ಮನಸ್ಸಿನಲ್ಲಿ ಮಾಡುತ್ತಾ ಇರುತ್ತೇವೆ ಮತ್ತು ಚಿಂತೆಯನ್ನು ಅಪ್ಪಿಕೊಳ್ಳುತ್ತೇವೆ. ಆಗ ಕಾಕಾಫಡಕೆ ಹೇಳಿದರು - ಮಹಾರಾಜ! ನೀವು ಇಂದಿನವರೆಗೆ ವಿಪುಲ ಅನ್ನದಾನ ಮಾಡಿದಿರಿ, ಇಂದು ನಾವು ಸ್ಟೋರರೂಮಿಗೆ ಹೋಗಿ ನೋಡಿದರೆ ಬರಿದಾಗಿದೆ. ಸ್ವಲ್ಪ ಉಪ್ಪು-ಖಾರ ಇದೆ. ನೀವೇನಾದರೂ ನೂರು ದಂಪತಿಗಳಿಗೆ ಭೋಜನ ಹಾಕಲು ಸಂಕಲ್ಪ ಮಾಡಿದರೆ ಚಿಂತೆಯಾಗಲಿಕ್ಕಿಲ್ಲವೇ? ಆಗ ಮಹಾರಾಜರು ಹೇಳಿದರು - ಕಾಕಾ! ಸರಿಯಾಗಿಯೇ ಹೇಳಿದಿರಿ. ಇಂದು ಈಗ ನಾನು ನೂರು ದಂಪತಿಗಳಿಗೆ ಭೋಜನ ಮಾಡಿಸುವ ಸಂಕಲ್ಪ ಮಾಡುತ್ತೇನೆ, ನಾಳೆ ಊಟ

ಕೊಡಲಾಗುವುದು, ನಾವು ನಿಮಂತ್ರಣ ಕಳಿಸುವಾ, ಎಲ್ಲರಿಗೆ ಒಂದು ಸೂಚನೆಯನ್ನು ಅನುಮತಿ ಇಲ್ಲದೆ ಪೇಟೆಯಿಂದ ಯಾರೂ, ಏನನ್ನೂ ತರಲಿಕ್ಕಿಲ್ಲ, ನೂರು ದಂಪತಿಗಳಿಗೆ ಮಾತ್ರ ಆಮಂತ್ರಣ ಕಳಿಸುವಾ.

ಮರುದಿನ ಬೆಳಗಾಯಿತು, ರಾಮಮಂದಿರದಲ್ಲಿ ಅಡಿಗೆ ಇಲ್ಲ. ಎಲ್ಲ ನೂರಾರು ಜನರು ಭೋಜನ-ಪ್ರಸಾದ ಪಡೆಯುತ್ತಿದ್ದರೋ, ಅಲ್ಲಿ ಒಲೆಯೇ ಹಚ್ಚಲಿಲ್ಲ. ಬೆಳಿಗ್ಗೆ ಹತ್ತರ ಸುಮಾರಿಗೆ ಶ್ರೀಮಹಾರಾಜರು ಶ್ರೀರಾಮನ ಎದುರಿಗೆ ನಿಂತು, ಸಮರ್ಥ ರಾಮದಾಸರು – ''ಆಮ್ಹಿಕಾಯ ಕುಣಾಚೆ ಖಾತೋರೇ । ಶ್ರೀರಾಮ ಅಮ್ಹಾಲಾದೇತೋರೇ'' ಈ ಅಭಂಗ ನಿರೂಪಣೆಗೆ ತೆಗೆದುಕೊಂಡರು. ನಿರೂಪಣ ನಡೆಯಿತು, ಹನ್ನೆರಡು – ಒಂದೂವರೆ ಗಂಟೆ ಆಯಿತು. ಊಟದ ಸುಳಿವೇ ಇಲ್ಲ. ದಂಪತಿಗಳು ಊಟಕ್ಕೆ ಬಂದಿದ್ದರು. ಹಿರಿಯರು ಏನೂ ಮಾತನಾಡದೆ ಸುಮ್ಮನಿದ್ದರು, ಆದರೆ ಅವರೊಂದಿಗೆ ಬಂದಿದ್ದ ಮಕ್ಕಳು ಸುಮ್ಮನಿರುತ್ತಾರೋ! ಅವುಗಳಿಗೆ ಹಸಿವೆ ಆಗಿ ಅಳತೊಡಗಿದರು. ಒಬ್ಬ ಹುಡುಗನಾದರೋ ಮಹಾರಾಜರ ಬಳಿಗೆ ಬಂದು, ಅವರ ಕಾಲುಗಳನ್ನು ಗಟ್ಟಿಯಾಗಿ ಹಿಡಿದು ಹೇಳಿದ – ನನಗೆ ಹಸಿವೆ ಆಗಿದೆ. ಶ್ರೀಮಹಾರಾಜರು ಅವನ ತಲೆ ಸವರಿ ಹೇಳಿದರು – ಮಗು! ನೀನು ಆ ಶ್ರೀರಾಮನ ಮುಂದೆ ಕೈಮುಗಿದು ಊಟ ಹಾಕುವಂತೆ ಅವನಿಗೇ ಹೇಳು.

ಈ ಪ್ರಸಂಗ ನಡೆಯುತ್ತಿರುವಾಗಲೇ ಒಂದು ಎತ್ತಿನ ಬಂಡಿ ಬಂದು ಮಂದಿರದ ಎದುರಿಗೆ ನಿಂತಿತು. ಆ ಬಂಡಿ ತುಂಬಿತ್ತು. ಓರ್ವ ಗೃಹಸ್ಥರು ಆ ಗಾಡಿಯಿಂದ ಇಳಿದರು. ಅವರು ಶ್ರೀಮಹಾರಾಜರ ಚರಣಗಳಲ್ಲಿ ಮಸ್ತಕವನ್ನಿಟ್ಟು ಹೇಳಿದರು – ಮಹಾರಾಜ! ನಾನು ನಿಮ್ಮಲ್ಲಿ ಹರಕೆ ಹೊತ್ತಿದ್ದೆ, ನನಗೆ ಗಂಡು ಮಗು ಆದರೆ, ನಾನು ಗೊಂದವಲೆಗೆ ಬಂದು ನೈವೇದ್ಯ ಮಾಡುವೆನು ಮತ್ತು ಇನ್ನೂರು ಜನಕ್ಕೆ ಬೋಜನ ಪ್ರಸಾದ ಕೊಡುವೆನು. ನಿಮ್ಮ ಕೃಪೆಯಿಂದ ನನಗೆ ಗಂಡು ಮಗು ಆಯಿತು. ಹರಕೆ ತೀರಿಸಲು ಮರೆತಿದ್ದೆ, ಇಂದು ಎರಡು ತಿಂಗಳು ಪೂರ್ಣ ವಾದವು. ನನ್ನ ಪತ್ನಿಯು ನನಗೆ ಹರಕೆ ತೀರಿಸಲು ಜ್ಞಾಪಿಸಿದಳು. ಭೋಜನ ಸಾಮಗ್ರಿ ಹಿಟ್ಟು, ಉಪ್ಪು, ತರಕಾರಿ, ಬೇಳೆ, ಎಣ್ಣೆ, ತುಪ್ಪ, ಬೆಲ್ಲ ಎಲ್ಲ ತಯಾರಿ ತಂದಿದ್ದೇನೆ. ಅವನು ಶ್ರೀರಾಮನಿಗೆ ಮತ್ತು ಶ್ರೀಮಹಾರಾಜರಿಗೆ ಪುನಃ ನಮಸ್ಕಾರ ಮಾಡಿದರು. ಒಲೆ ಉರಿಯಿತು, ಅಡಿಗೆ ಆಯಿತು, ನೂರು ದಂಪತಿಗಳು ಉಂಡು ತೃಪ್ತರಾದರು. ಕಾಕಾ ಫಡಕೆಯವರಿಗೆ ಶ್ರೀಮಹಾರಾಜರ ಸಾಮರ್ಥ್ಯ ತಿಳಿಯಿತು.

ಅನೇಕರಿಗೆ ಶ್ರೀಮಹಾರಾಜರ ಮಹಾತ್ಮ್ಯ ಚುಚ್ಚುತ್ತಿತ್ತು. ಶ್ರೀಮಹಾರಾಜರನ್ನು ಅಪಮಾನ ಮಾಡಲು ಅನೇಕ ಪ್ರಯತ್ನ ನಡೆಯುತ್ತಿದ್ದವು. ಒಮ್ಮೆ ಇಂತಹ ವಾಯಿಯ ಮಂಡಳಿಯು ಒಬ್ಬ ಹರಿದಾಸರನ್ನು ಗೊಂದವಲೆಗೆ ಕಳಿಸಿದರು. ಅವನಿಗೆ ಚೆನ್ನಾಗಿ ತಯಾರು ಮಾಡಿ ಕಳಿಸಿದ್ದರು. ಅವರು ತನ್ನ ಪತ್ನಿಯೊಂದಿಗೆ ಗೊಂದವಲೆಗೆ ಬಂದರು. ಬಂದ ಮೇಲೆ ಶ್ರೀರಾಮ ಅಥವಾ ಶ್ರೀಮಹಾರಾಜರಿಗೆ ಯಾರಿಗೂ ನಮಸ್ಕಾರ ಮಾಡದೆ ಹೇಳಿದನು - ನಾನು ವಾಯಿಯಿಂದ ಪತ್ನೀ ಸಹಿತ ಬಂದಿರುವೆನು, ನಾನು ಹರಿದಾಸನಾಗಿದ್ದೇನೆ. ಅವರ ಉದ್ಧಟ ಸ್ವರ ಕೇಳಿಯೂ ಶ್ರೀಮಹಾರಾಜರು ವಿಚಲಿತರಾಗಲಿಲ್ಲ. ಅವರು ಅವರಿಬ್ಬರ ಸ್ವಾಗತ ಅತಿಶಯ ಪ್ರೇಮದಿಂದ ಮಾಡಿದರು. ಆ ಹರಿದಾಸರು ಮರುದಿನ ಬೆಳಿಗ್ಗೆ ಶ್ರೀರಾಮ ಮಂದಿರದಲ್ಲಿ ಕೀರ್ತನೆ ಮಾಡುವವನಾಗಿದ್ದ. ಅವರ ಕೀರ್ತನೆಗೆ ಬಹಳ ಜನರು ಸೇರಿದ್ದರು. ಅವರು ಪೂರ್ವರಂಗಕ್ಕೆ ''ಐಸೆ ಸಂತ ಝಾಲೆ ಕುಳೀ । ತೊಂಡೀ ತಂಬಾಖೂಚೀ ಮಳೀ ॥'' ಈ ಅಭಂಗ ನಿರೂಪಣೆಗಾಗಿ ಎತ್ತಿಕೊಂಡಿದ್ದ. ಶ್ರೀಮಹಾರಾಜರು ಎದುರಿಗೇ ಮಣೆಯಲ್ಲಿ ಕುಳಿತಿದ್ದರು. ನೋಡು-ನೋಡುತ್ತಾ ಅವರು ಶ್ರೀಮಹಾರಾಜರ ನಿಂದೆಯನ್ನು ಅವರ ಎದುರಿಗೆ ಮಾಡಲು ಶುರು ಮಾಡಿದರು. ಮಹಾರಾಜರ ಭಕ್ತರು ಅಸ್ವಸ್ಥರಾದರು. ಶ್ರೀಮಹಾರಾಜರು ಅವರಿಗೆ ಸನ್ನೆಯಿಂದಲೇ ಶಾಂತರಾಗಿರುವಂತೆ ಹೇಳಿದರು. ಸ್ವತಃ ಕಣ್ಣು ಮುಚ್ಚಿ, ರಾಮನಾಮದ ಜಪ ಪ್ರಾರಂಭಿಸಿದರು. ಹರದಾಸರು ಒಂದೂವರೆ ಗಂಟೆ ಶ್ರೀಮಹಾರಾಜರ ಬಹಳ ನಿಂದೆ ಮಾಡಿದರು, ಕೀರ್ತನೆ ಮುಗಿಯಿತು, ಆರತಿ, ಪ್ರಸಾದವಾಯಿತು, ಶ್ರೀಮಹಾರಾಜರು ಹರದಾಸರಿಗೆ 'ವ್ಹಾ! ಕೀರ್ತನೆ ಚೆನ್ನಾಯಿತು' ಎಂದು ಹೇಳಿದರು. ಹರದಾಸ ಕೆರಳಿದ, ಅವರೆಂದರು - ನಿಮಗೇನು ಗೊತ್ತು? ನೀವಾದರೋ ಕಣ್ಣು ಮುಚ್ಚಿ ಮಲಗಿದ್ದೀರಿ, ಆಗ ಶ್ರೀಮಹಾರಾಜರು ಮಣೆಯ ಅಡಿಯಿಂದ ಎರಡು ಕಾಗದ ತೆಗೆದು ಆ ಹರದಾಸರಿಗೆ ಕೊಟ್ಟರು. ಅದರಲ್ಲಿ ಕೀರ್ತನದ ಪೂರ್ವಾಪರ ವರ್ಣನೆ ಬರೆದಿತ್ತು. ಇದರಿಂದ ಅವರು ಅವಾಕ್ಕಾದರು. ಆದರೂ ಕೃತಕ ರೀತಿಯಿಂದ ಹೇಳಿದ - ''ಬರೀ ಬರೆದರೆ ಏನು ಉಪಯೋಗ? ಕೃತಿಯಲ್ಲಿ ತರಬೇಡವೇ? ನಿಮ್ಮ ಡೊಂಗಿತನ ಮೊದಲು ನಿಲ್ಲಿಸಿರಿ'' ಆಗ ಮಹಾರಾಜರು ಸಟ್ಟನೆ ಎದ್ದರು, ಅವರು ತಮ್ಮ ಕಫನಿ ತೆಗೆದು ಬಿಸುಟರು. ಹರಿದಾಸಬುವಾ! ನಿಮ್ಮ ಕೀರ್ತನೆಯಿಂದ ನನ್ನಲ್ಲಿ ವಿರಕ್ತಿ ಉಂಟಾಗಿದೆ, ನಾನು ಸರ್ವಸಂಗ ಪರಿತ್ಯಾಗ ಮಾಡಿ ಹಿಮಾಲಯಕ್ಕೆ ಹೊರಟಿದ್ದೇನೆ, ನೀವೂ ನನ್ನೊಂದಿಗೆ ಬನ್ನಿ; ಎಂದು ಹೇಳಿ ಶ್ರೀಮಹಾರಾಜರು ಅವರ ಕೈ ಗಟ್ಟಿಯಾಗಿ ಹಿಡಿದು ದರದರನೆ

ಎಳೆದುಕೊಂಡು ಹೊರಗೆ ಹೊರಟರು. ಕೀರ್ತನೆಗೆ ಸೇರಿದ್ದ ಬಂಧು-ಭಗಿನಿಯರು ಈ ದೃಶ್ಯ ನೋಡುತ್ತಿದ್ದರು. ಬೇಸಗೆಯ ಕಾಲ, ಸಮಯ ನಡು ಮಧ್ಯಾಹ್ನ, ಭೂಮಿ ಕಾದಿದೆ, ಇಬ್ಬರೂ ಬರಿಕಾಲಿನವರು, ಹರಿದಾಸರ ಕಾಲುಗಳು ಸುಟ್ಟು ಹೋದವು, 'ನನ್ನನ್ನು ಬಿಡಿ, ನನ್ನನ್ನು ಬಿಡಿ' ಎಂದು ಬೊಬ್ಬೆಯಿಟ್ಟ. ಕೈ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರು, ಶ್ರೀಮಹಾರಾಜರ ಹಿಡಿತ ಬಿಗಿಯಾಗಿತ್ತು, ಅದು ಸಡಿಲಾಗಲಿಲ್ಲ. ಅಷ್ಟರಲ್ಲಿ ಭಾವು ಸಾಹೇಬರು ಹತ್ತಿರ ಬಂದು ಮೆಲ್ಲನೆ ಹೇಳಿದರು - ಭೋಜನ ಸಿದ್ಧತೆ ಆಗಿದೆ, ಮಹಾರಾಜರು ಹೇಳಿದರು - ನೀವು ಪಂಕ್ತಿಯ ತಯಾರಿ ಮಾಡಿ, ನಾನು ಇವರನ್ನು ಕರೆದುಕೊಂಡು ಬರುತ್ತೇನೆ, ಮತ್ತೆ ಪುನಃ ಆ ಹರಿದಾಸರನ್ನು ಎಳೆಯ ತೊಡಗಿದರು. ಇತ್ತ ಆ ಹರಿದಾಸರ ಪತ್ನೀ ಪೂರ್ಣ ಗಾಬರಿಗೊಂಡಳು. ಆದರೆ ಗಂಗೂಬಾಯಿಯವರು ಧೈರ್ಯ ಹೇಳಿ ತಿಳಿಸಿದರು - ಶ್ರೀ ಮಹಾರಾಜರಿಗೆ ಶರಣು ಹೋಗಿ, ಪತ್ನಿಯು ಓಡಿ ಬಂದು ಶ್ರೀಮಹಾರಾಜರ ಚರಣದಲ್ಲಿ ಲೀನಳಾದಳು. ತನ್ನ ಪತಿಯನ್ನು ಬಿಡಲು ವಿನಂತಿಸ ತೊಡಗಿದಳು. ಹರಿದಾಸರಿಗೆ ಒಳ್ಳೆಯ ಪಾಠ ಸಿಕ್ಕಿತು. ಅವನೂ ಮಹಾರಾಜರ ಚರಣದಲ್ಲಿ ಕುಸಿದು ಬಿದ್ದನು, ಕ್ಷಮೆ ಯಾಚಿಸಿದನು, ಮಹಾರಾಜರು ಅವನನ್ನು ಎಬ್ಬಿಸಿಕೊಂಡರು, ಊಟಕ್ಕೆ ತಮ್ಮ ಪಕ್ಕದಲ್ಲೇ ಕುಳ್ಳಿರಿಸಿಕೊಂಡು ಪ್ರೇಮದಿಂದ ಮತ್ತು ಆಗ್ರಹಪೂರ್ವಕ ಬಡಿಸಿದರು. ಅವರು ಬಳಿಕದ ದಿನಗಳಲ್ಲಿ ನಿಜವಾಗಿಯೂ ಸುಂದರ ಮತ್ತು ಭಕ್ತಿರಸಪೂರ್ಣ ಕೀರ್ತನೆ ಮಾಡಿದರು. ಬಳಿಕ ಮಹಾರಾಜರ ಉಪದೇಶ ಪಡೆದು ವಾಯಿಗೆ ಹಿಂದಿರುಗಿದರು.

ಶ್ರೀಮಹಾರಾಜರು ಸ್ವತಃ ಯಜುರ್ವೇದೀಯಾಗಿದ್ದರು, ಅವರ ಯಜುರ್ವೇದೀ ಭಕ್ತರಿಗೆ ಅನಿಸುತ್ತಿತ್ತು, ಯಜುರ್ವೇದಕ್ಕೆ ಶ್ರೀರಾಮಮಂದಿರದಲ್ಲಿ ಪ್ರಥಮ ಸ್ಥಾನ ಇರಬೇಕು. ಋಗ್ವೇದೀ ಭಕ್ತರು ಋಗ್ವೇದದ ಆಗ್ರಹ ಹಿಡಿದಿದ್ದರು. ಒಮ್ಮೆ ಅವರಲ್ಲಿ ವಾದ ನಿರ್ಮಾಣವಾಯಿತು. ಶ್ರೀಮಹಾರಾಜರು ಹೇಳಿದರು - 'ಎಲ್ಲ ವೇದಗಳಲ್ಲಿ ಋಗ್ವೇದ ಮಹಾನ್ ಆಗಿದೆ. ಅದನ್ನು ಮೊದಲಿಗೆ ಹೇಳಬೇಕು ಮತ್ತು ಬಳಿಕ ಇತರ ವೇದಗಳ ಪಠಣ ಮಾಡಬೇಕು. ಇದರಲ್ಲಿ ವಾದ ಮಾತ್ರ ಮಾಡಬಾರದು. ಶಾಸ್ತ್ರಾನುಸಾರ ವರ್ತಿಸಬೇಕು ಮತ್ತು ನಮ್ಮ ಲಕ್ಷ್ಯ ದೇವರಲ್ಲಿ ಕೇಂದ್ರೀಕೃತವಾಗಿಸಬೇಕು.

ಗಿರವೀ ಎಂಬಲ್ಲಿ ಶ್ರೀಮಹಾರಾಜರ ವಾಸ್ತವ್ಯವಿತ್ತು. ಆಗ ಸರದಾರ ಪೋತನೀಸ ಅವರ ದರ್ಶನಕ್ಕೆ ಬಂದರು. ಅವರೊಂದಿಗೆ ಅವರ ತರುಣ ಅಳಿಯ ಅಣ್ಣಾಸಾಹೇಬರಿದ್ದರು. ಅವರು ಉಚ್ಚ ಶಿಕ್ಷಿತರಾಗಿದ್ದರು. ದೇವರನ್ನು ನಂಬುವುದು, ಆದರೆ ಸಾಧು-ಸಂತರು ಅವರಿಗೆ ಮಾನ್ಯರಾಗಿರಲಿಲ್ಲ. ಅವರು ಸೂಕ್ಷ್ಮವಾಗಿ

ಮಹಾರಾಜರನ್ನು ನಿರೀಕ್ಷಿಸುತ್ತಿದ್ದರು. ಅವರ ಕಣ್ಣುಗಳಿಂದ ಮನದೊಳಗಿನ ಸಂಶಯ ಪ್ರಕಟವಾಗುತಿತ್ತು . ಭೋಜನದ ಸಮಯವಾಯಿತು, ಶ್ರೀಮಹಾರಾಜರು ಸ್ವತಃ ಎಲೆ ಹಾಕ ತೊಡಗಿದರು. ಅಣ್ಣಾಸಾಹೇಬರು ವ್ಯಕ್ತವಾಗಿ ಏನೂ ಹೇಳದಿದ್ದರೂ ಮನಸ್ಸಿನಲ್ಲೇ ಅಂದುಕೊಂಡರು - ಇವರು ಇಷ್ಟು ದೊಡ್ಡ ಮಹಾರಜರು, ಇವರ ಶಿಷ್ಯ ಪರಿವಾರ ದೊಡ್ಡದಿದೆ, ಮತ್ತೆ ಇಂತಹ ಸಾಮಾನ್ಯ ಕೆಲಸ ಸ್ವತಃ ಏಕೆ ಮಾಡುತ್ತಾರೆ? ಅವನ್ನು ಇತರರಿಗೆ ಏಕೆ ಒಪ್ಪಿಸುವುದಿಲ್ಲ? ಪಂಕ್ತಿಯಲ್ಲಿ ಮಹಾರಾಜರು ಅಣ್ಣಾಸಾಹೇಬರ ಪಕ್ಕದಲ್ಲಿ ಕುಳಿತರು. ಅವರು ಮೆಲ್ಲನೆ ಅವರ ಕಿವಿಯಲ್ಲಿ ಹೇಳಿದರು - ನಾನು ತಟ್ಟೆ-ನೀರು ಇಡುವುದು, ಎಂಜಲು ಗೋಮ ಮಾಡುವುದು, ಗುಡಿಸಿ-ಸಾರಿಸುವುದು ಇಂತಹ ಸಾಮಾನ್ಯ ಕೆಲಸಗಳನ್ನೇ ಮಾಡುತ್ತೇನೆ. ಅಣ್ಣಾಸಾಹೇಬರು ವಿಸ್ಮಿತ ಚಕಿತರಾದರು. ನನ್ನ ಮನಸ್ಸಿನ ಸಂವಾದ ಇವರು ಹೇಗೆ ತಿಳಿದರು? ಅವರಿಗೆ ಮಹಾರಾಜರ ಮೇಲೆ ಶ್ರದ್ಧೆ ಉಂಟಾಯಿತು.



## -: ಮೂವತ್ತಮೂರು :-

# ಬ್ರಹ್ಮ ಸತ್ಯಂ ಜಗನ್ಮಿಥ್ಯಾ

ಭಾವುಸಾಹೇಬ ಫಾರೆಸ್ಟ ಎಂಬ ಒಬ್ಬರು ಶ್ರೀಮಹಾರಾಜರ ಭಕ್ತರಾಗಿದ್ದರು. ಅವರು ಶ್ರದ್ಧೆಯುಳ್ಳ, ಸಾತ್ವಿಕ ಮತ್ತು ಸರಳ ಮಾರ್ಗಿಗಳಾಗಿದ್ದರು. ಹಾಗಂತ ಅವರು ಯಾರಿಗೂ ಕಷ್ಟ ಕೊಡುತ್ತಿರಲಿಲ್ಲ. ಅವರು ಶ್ರೀಮಹಾರಾಜರೊಂದಿಗೆ ಮನ ಬಿಚ್ಚಿ ಮಾತನಾಡುತ್ತಿದ್ದರು. ಒಮ್ಮೆ ಶ್ರೀಮಹಾರಾಜರು ಯಾರಿಗೋ ಹೇಳುತ್ತಿದ್ದರು - ಮನಸ್ಸು ದೊಡ್ಡದಿದ್ದರೇನೇ ಪರಮಾರ್ಥ ಸಾಧ್ಯವಾಗುತ್ತದೆ. ಷಡ್‌ರಿಪು ಮತ್ತು ಷಡ್‌ವಿಕಾರಗಳ ಮೇಲೆ ನಮ್ಮ ನಿಯಂತ್ರಣ ಇರಬೇಕು. ಕ್ರೋಧ ಮತ್ತು ಅಹಂಕಾರಕ್ಕೆ ಪರಮಾರ್ಥದಲ್ಲಿ ಜಾಗವಿಲ್ಲ, ಭಾವು ಸಾಹೇಬರು ಅಂಗಡಿಯಿಂದ ರವೆ, ಸಕ್ಕರೆ ಮುಂತಾದವುಗಳನ್ನು ಕೊಂಡು ಬಂದಿದ್ದರು. ಅವರು ಶ್ರೀಮಹಾರಾಜರ ಮಾತು ಕೇಳಿದರು. ಅವರು ಅವರಿಗೆ ಹೇಳಿದರು - ನಾನು ನನ್ನ ಮನಸ್ಸು ವಿಶಾಲಗೊಳಿಸಿದ್ದೇನೆ. ಈಗಲೇ ನಾನು ಅಂಗಡಿಯಿಂದ ರವೆ, ಸಕ್ಕರೆ ತಂದಿರುವೆನು, ಇದನ್ನು ನಾನು ಕೊಡಲು ತಯಾರಿದ್ದೇನೆ. ಕೇಳಿದವರಿಗೆ ಕೊಡುವೆನು ಮತ್ತು ಸದ್ಯನಾನು ಕ್ರೋಧವನ್ನು ಪೂರ್ಣ ತ್ಯಾಗ ಮಾಡಿರುವೆನು. ನಾನು ಯಾರ ಮೇಲೂ ಸಿಟ್ಟಾಗುವುದಿಲ್ಲ. ಶ್ರೀಮಹಾರಾಜರು ಹೇಳಿದರು - ವ್ಹಾ! ಇದು ಉತ್ತಮವಾಗಿದೆ, ಭಾವುಸಾಹೇಬರು ತಮ್ಮ ಕೋಣೆಗೆ ಹೋದರು.

ರೂಪಲಖ ಎಂಬ ಒಬ್ಬ ಶ್ರೀಮಹಾರಾಜರ ಭಕ್ತನಿದ್ದನು. ಅವನು ಚುರುಕಾಗಿದ್ದನು, ಮೂಲದ ಪಂಢರಪುರದವನಾಗಿದ್ದ, ಜಾಣ ಮತ್ತು ಕಷ್ಟ ಸಹಿಷ್ಣು ಆಗಿದ್ದ. ಅವನನ್ನು ಮಹಾರಾಜರು ಕರೆದು ಹೇಳಿದರು. ರೂಪಲಖ! ನಮ್ಮ ಭಾವುಸಾಹೇಬರು ಕ್ರೋಧದ ಮೇಲೆ ವಿಜಯ ಸಾಧಿಸಿದ್ದಾರೆ, ನೀನು ನನ್ನ ಕೆಲಸವೆಂದು ಅವರಿಗೆ ಸಿಟ್ಟು ಬರುವಂತೆ ಏನಾದರೂ ಮಾಡು. ರೂಪಲಖನು ಒಪ್ಪಿಕೊಂಡನು.

ರೂಪಲಖನು ಭಾವುಸಾಹೇಬರ ಬಳಿಗೆ ಬಂದನು, ಅವರು ತುಕಾರಾಮರ ಅಭಂಗಗಳನ್ನು ಬರೆಯುತ್ತಿದ್ದರು.

ರೂಪಲಖ – ಏನು ಬರೆಯುತ್ತಿದೀರಿ?

ಭಾವುಸಾಹೇಬ – ಜಗದ್ಗುರು ತುಕಾರಾಮರ ಅಭಂಗ ಬರೆಯುತ್ತಿದ್ದೇನೆ.

ರೂಪಲಖ – ಬೇಡದ ಉಪದ್ವ್ಯಾಪ್ಯ ಮಾಡಲು ನಿಮಗೆ ಯಾರು ಹೇಳಿದರು?

ಭಾವು – ನಾನು ಅಭಂಗ ವಾಣಿ ಬರೆಯುತ್ತೇನೆ ಅದರಲ್ಲಿ ನಿಂದೇನು ಹೋಯಿತು. ಸ್ವರ ಸ್ವಲ್ಪ ಹೆಚ್ಚಾಯಿತು.

ರೂಪಲಖ – ನಿಮಗೆ ಯಾವ ಗಂಧ ಗಾಳಿಯೂ ಇಲ್ಲ. ಅಭಂಗ ಬರೆಯುತ್ತೀರಿ. ಬೇರೆ.

ಭಾವು – ಏ! ಹೆಚ್ಚು ಮಾತಾಡಬೇಡ, ನಾನು ಏನು ಮಾಡಬೇಕೆಂದು ನನ್ನ ಪ್ರಶ್ನೆಯಾಗಿದೆ, ಇದರಲ್ಲಿ ನಿನಗೇನೂ ಸಂಬಂಧವಿಲ್ಲ.

ಆಗ ರೂಪಲಖನು ಅವರಿಗೆ ಬೈದು ಬಿಟ್ಟನು. ತನ್ನನ್ನು ಬೈದುದನ್ನು ಕೇಳಿ ಭಾವು ಸಾಹೇಬರು ರೇಗಿದರು, ಕೈಯಲ್ಲಿ ರೂಲ್‌ದೊಣ್ಣೆ ಹಿಡಿದು ರೂಪಲಖನಿಗೆ ಹೊಡೆಯಲು ಎದ್ದರು. ರೂಪಲಖನು ಓಡಿ ಹೋದನು. ನೇರ ಶ್ರೀಮಹಾರಾಜರ ಬಳಿಗೆ ಬಂದನು. ಹಿಂದೆಯೇ ಕೈಯಲ್ಲಿ ರೂಲ್ ದೊಣ್ಣೆ ಹಿಡಿದು ಬೊಬ್ಬಿಡುತ್ತಾ ಭಾವುಸಾಹೇಬರು ಬಂದರು. ನನಗೆ ಬೈಯ್ಯುತ್ತೀಯಾ! ನನ್ನ ಸಿಟ್ಟು ಭಯಂಕರವಾಗಿದೆ. ಶ್ರೀಮಹಾರಾಜರನ್ನು ನೋಡಿ ಅವರು ಸುಮ್ಮನಾದರು. ಮಹಾರಾಜರು ಕೇಳಿದರು – ಭಾವುಸಾಹೇಬರೇ! ನೀವು ಕ್ರೋಧವನ್ನು ತ್ಯಾಗ ಮಾಡಿದ್ದೀರಲ್ಲ? ಇದೇನಿದು, ನೀವು ಸಿಟ್ಟಾಗಿದ್ದೀರಲ್ಲ! ಆಗ ಭಾವುಸಾಹೇಬರು ನಾಚಿಕೆ ಪಟ್ಟರು. ಶ್ರೀಮಹಾರಾಜರು ಮುಂದೆ ಹೇಳಿದರು – ಕ್ರೋಧದ ಮತ್ತು ಸ್ವಾರ್ಥದ ತ್ಯಾಗ ಮಾಡುವುದು ಅಷ್ಟು ಸುಲಭವಲ್ಲ. ಅದಕ್ಕಾಗಿ ಸಾಧಕನು ಅಖಂಡ ಎಚ್ಚರವಾಗಿರಬೇಕಾಗುತ್ತದೆ ಮತ್ತು ಆ ಎಚ್ಚರ ಸತತ ನಾಮಸ್ಮರಣೆಯಿಂದಲೇ ಪ್ರಾಪ್ತವಾಗುತ್ತದೆ.

ಒಂದು ದಿನ ಶ್ರೀಮಹಾರಾಜರು ಧರ್ಮಶಾಲೆ ಕಡೆಗೆ ಹೊರಟಿದ್ದರು, ಕೆಲವು ತರುಣ ಮಂಡಳಿ ಅಲ್ಲಿ ಕೂತಿತ್ತು . ಶ್ರೀಮಹಾರಾಜರಿಗೆ ಆಲಸ್ಯದಲ್ಲಿ ಸಮಯ ಕಳೆಯುವುದು ಮೆಚ್ಚುತ್ತಿರಲಿಲ್ಲ. ಅವರು ಆ ತರುಣರಿಗೆ ಹೇಳಿದರು – ''ನಾವು ಒಂದು

ಬಾವಿ ಅಗೆಯೋಣ'' ಹುಡುಗರು ತಯಾರಾದರು. ಬೆಳಿಗ್ಗೆ ಬೇಗ ಬರುವುದು, ಸ್ವಲ್ಪ ಉಪಹಾರ ಮಾಡುವುದು, ಮಧ್ಯಾಹ್ನದವರೆಗೆ ಅಗೆಯುವುದು, ಅಂದಿನ ಕೆಲಸ ಮುಗಿಸಿ ಮಧ್ಯಾಹ್ನ ಎರಡರ ಸುಮಾರಿಗೆ ಸ್ನಾನ ಮಾಡಿ ಭೋಜನ ಮಾಡುವುದು, ಹೀಗೆ ದಿನಚರಿ ಪ್ರಾರಂಭವಾಯಿತು. ಒಂದು ವಾರದ ಬಳಿಕ ಬೆಳಿಗ್ಗೆ ಹನ್ನೊಂದು ಗಂಟೆಗೆ ಶ್ರೀಮಹಾರಾಜರು ಅಲ್ಲಿಗೆ ಬಂದರು, ಅವರು ಜೊತೆಗೆ ಎಲ್ಲರಿಗೆ ಲಡ್ಡು ಮತ್ತು ಚುಡುವಾ ತಂದಿದ್ದರು. ಆ ತರುಣರಲ್ಲಿ ಒಬ್ಬ ಮಹಾರಾಜರಿಗೆ ಹೇಳಿದ- ಮಹಾರಾಜ! ನೀವು 'ನೀರು ಬಂದೀತು' ಇಷ್ಟು ಹೇಳಿ, ನೀರು ಬಂದೇ ಬರುವುದು. ಅವನ ಹೆಸರು ಗೋಪೀನಾಥ ಎಂದಿತ್ತು ಮಹಾರಾಜರು 'ಸರಿಯಾಗಿದೆ' ಎಂದು ಹೇಳಿದರು. ಜಾನಕೀ ಜೀವನ ಸ್ಮರಣ ಜಯ ಜಯ ರಾಮ! ನೀರು ಬಂದೀತು, ಹೊಡಿ ಪಿಕ್ಕಾಸು, ಗೋಪೀನಾಥನು ಪಿಕ್ಕಾಸು ಹೊಡೆದ ಮತ್ತು ನೀರು ಮೇಲೆ ಚಿಮ್ಮಿತು.

'ಬ್ರಹ್ಮ ಸತ್ಯಂ ಜಗನ್ಮಿಥ್ಯಾ' ಈ ಶಂಕರಾಚಾರ್ಯರ ಉಕ್ತಿಯಮೇಲೆ ಅನೇಕ ಪ್ರವಚನಕಾರರು ಪ್ರವಚನ ಮಾಡಿಯಾರು, ಅನೇಕ ಕೀರ್ತನಕಾರರು ಕೀರ್ತನೆ ಮಾಡಿಯಾರು, ಲೇಖಕರು ಲೇಖನ ಬರೆದಾರು, ಕವಿಗಳು ಕಾವ್ಯ ಮಾಡಿಯಾರು, ಶ್ರೀಮಹಾರಾಜರು ಮಾತ್ರ ಈ ವಚನದಂತೆ ಬದುಕುತ್ತಿದ್ದರು. ಡಾ॥ ಕುರ್ತಕೋಟಿ ಯವರೇ ಈ ಪ್ರಸಂಗ ಹೇಳಿದರು – ಗೊಂದವಲೆಯ ಶ್ರೀರಾಮಮಂದಿರದಲ್ಲಿ ವಿಪುಲ ಅನ್ನದಾನ ಆಗುತ್ತಿತ್ತು . ಬಂದವರಿಗೆಲ್ಲ ಭೋಜನ ಪ್ರಸಾದ ಸಿಗುತ್ತಿತ್ತು . ಅನ್ನ ಬೇಯಿಸಲು ಉರುವಲು ಬೇಕು. ಕಟ್ಟಿಗೆ ಒಡೆದು ಕೊಡುವ ಕೆಲಸ ಭವಾನರಾವರ ಕಡೆಗೆ ಇತ್ತು . ಒಮ್ಮೆ ಮಾತ್ರ ಯಾರಿಗೆ ಗೊತ್ತು ಸೌದೆಪೂರಾ ಮುಗಿದು ಹೋಗಿತ್ತು . ರಾತ್ರಿಯ ಹೊತ್ತು . ಸೌದೆ ಇಲ್ಲದೆ ಅಡಿಗೆ ಹೇಗಾಗುವುದು? ಮೊದಲೇ ವ್ಯವಸ್ಥೆ ಮಾಡಿ ಇಡಬೇಕಾಗಿತ್ತು .ಆ ವ್ಯವಸ್ಥೆ ಏಕೆ ಮಾಡಲಿಲ್ಲ? ಎಂದು ಮಹಾರಾಜರು ಕೇಳಿದರು. ಕೊನೆಗೆ ಅವರೇ ಉಪಾಯ ಸೂಚಿಸಿದರು – ಅವರೆಂದರು – ನಮ್ಮಲ್ಲಿ ಹೆಚ್ಚಿನ ಚಪಾತಿ ಮಣೆ, ಕುಳಿತುಕೊಳ್ಳುವ ಮಣೆಗಳು ಹೆಚ್ಚಿನ ಮರದ ಸಾಮಾನು ತೆಗೆದುಕೊಂಡು ಒಲೆ ಉರಿಸಿರಿ, ಅವರೇ ಸ್ವತಃ ಹೋಗಿ ಆ ವಸ್ತುಗಳನ್ನು ತಂದುಕೊಟ್ಟರು. ವಸ್ತುಗಳು ಅವಶ್ಯಕತೆಗಾಗಿ ಇರುತ್ತವೆ. ಅದಕ್ಕೆ ಅಂಟಿಕೊಂಡಿರ ಬಾರದು.

ಸಂಸಾರ ದೇಹದ್ದು, ಮತ್ತು ನಾಮಜಪ ಆತ್ಮನದು. ಸಂಸಾರದಲ್ಲಿ ಲಿಪ್ತವಾಗಿರಬಾರದು. ಇದು ಸತ್ಯ, ಆದರೆ ಸಂಸಾರದ ಕರ್ತವ್ಯ ಕರ್ಮಗಳನ್ನು ತಪ್ಪದೆ ಮತ್ತು ಪ್ರಾಮಾಣಿಕವಾಗಿ ಮಾಡಲೇಬೇಕು, ಎಂಬ ಒತ್ತಾಯ ಮಹಾರಜರದ್ದು ಇತ್ತು . ಕೊಟ್ಟ ಮಾತು ಅಥವಾ ನಿಶ್ಚಯಿಸಿದ ವ್ಯವಹಾರ ಸರಿಯಾಗಿ ಪೂರ್ಣವಾಗಿಸಬೇಕು

ಎಂಬುದು ಅವರ ಆಗ್ರಹವಿತ್ತು . ಒಮ್ಮೆ ಒಬ್ಬನು ತನ್ನ ಕಬ್ಬಿನ ಆಲೆಮನೆ ಪ್ರಾರಂಭಿಸಿದ. ಆ ಜಾಗ ಗೊಂದವಲೆಯಿಂದ ಎರಡು ಮೈಲಿನಲ್ಲಿತ್ತು. ಒಂದು ದಿನ ಆ ಆಲೆಮನೆಯ ಯಜಮಾನನು ಶ್ರೀಮಹಾರಾಜರ ಭಕ್ತರನ್ನು ತಮ್ಮ ಕಬ್ಬಿನ ಗಾಣಕ್ಕೆ ಕಬ್ಬಿನ ಹಾಲು ಕುಡಿಯಲು ಆಗ್ರಹದ ನಿಮಂತ್ರಣ ನೀಡಿದನು. ನಿಶ್ಚಯಿಸಿದ ಸಮಯದಲ್ಲಿ ಭಕ್ತಮಂಡಳಿಯು ಆ ಆಲೆಮನೆಗೆ ಹೋಗಿ ನೋಡಿದರೆ ಅದು ಬಂದಾಗಿತ್ತು . ಅವನು ಈ ಮಂಡಳಿಗೆ ತೊಂದರೆ ಕೊಡಲೆಂದೇ ಹೀಗೆ ಮಾಡಿದ್ದನು. ಮಂಡಳಿ ನಿರಾಶರಾಗಿ ಹಿಂದಿರುಗಿದರು. ನಡೆದ ಘಟನೆ ಶ್ರೀಮಹಾರಾಜರ ಕಿವಿಗೆ ಬಿತ್ತು ಅವರಿಗೆ ಅದು ಸರಿಬೀಳಲಿಲ್ಲ. ಅವರು ತತ್‌ಕ್ಷಣ ಬಾಳಾ ಪಾಟೀಲರನ್ನು ಕರೆಸಿ, ಇನ್ನೂರೈವತ್ತು ರೂಪಾಯಿ ಖರ್ಚು ಮಾಡಿ ಒಂದು ಆಲೆಮನೆಯನ್ನು ಖರೀದಿಸಿದರು. ರಾತ್ರೆ ಹನ್ನೊಂದು ಗಂಟೆಯವರೆಗೆ ಕಬ್ಬಿನಹಾಲು ತೆಗೆದರು. ಭಕ್ತಿಮಂಡಳಿಯವರಿಗೆ ಕಬ್ಬಿನಹಾಲು ಕುಡಿಸಿದರು ಮತ್ತು ಗೋಶಾಲೆಗೆ ಹೋಗಿ ಗೋವುಗಳಿಗೆ ಸಾಕಷ್ಟು ಕಬ್ಬು ತಿನ್ನಿಸಿದರು.

ಈಗ ಶ್ರೀಮಹಾರಾಜರ ಭಕ್ತರು ಊರೂರುಗಳಲ್ಲಿ ಇದ್ದರು. ಭಕ್ತರ ಸಂಖ್ಯೆ ದೊಡ್ಡದಾಗಿತ್ತು. ಸಾಂಗಲಿಯಲ್ಲಿ ಅವರ ಭಕ್ತೆಯೋರ್ವಳು ಇದ್ದಳು. ಆಕೆಗೆ ಮಹಾರಾಜರ ಮೇಲೆ ಅಪಾರ ಶ್ರದ್ಧೆ ಇತ್ತು . ಆಕೆಗೆ ಒಬ್ಬ ಮಗನಿದ್ದ. ಅವನು ಸಾಂಗಲೀ ಸಂಸ್ಥಾನದಲ್ಲಿ ನೌಕರಿಗೆ ಇದ್ದ. ಜಿಲ್ಲೆಯ ಒಂದು ಊರಿನಲ್ಲಿ ಏನೋ ಕಾರಣದಿಂದ ಹೊಡೆದಾಟ ನಡೆಯಿತು. ಈ ಹೊಡೆದಾಟಕ್ಕೆ ಈ ಹುಡುಗನೇ ಕಾರಣವೆಂದು ಸರಕಾರೀ ಅಧಿಕಾರಿಗಳಿಗೆ ಸಂಶಯ ಬಂತು. ಅದರಿಂದ ಅವನನ್ನು ಬಂಧಿಸಿ ಜೈಲಿನಲ್ಲಿಟ್ಟರು. ಅವನ ತಾಯಿಗೆ ಬಹಳ ದುಃಖವಾಯಿತು. ತನ್ನ ಮಗನು ನಿರ್ದೋಷಿಯಾಗಿದ್ದರೂ ಅವನಿಗೆ ಕಾರಾಗೃಹ ವಾಸ ಅನುಭವಿಸಬೇಕಾಯಿತಲ್ಲ. ಅವಳು ಶ್ರೀಮಹಾರಾಜರಿಗೆ ಮೊರೆಯಿಟ್ಟಳು, ಅವಳ ಪೂಜೆಯಲ್ಲಿ ಶ್ರೀಮಹಾರಾಜರ ಪಾದುಕೆಗಳಿದ್ದವು. ಅವನ್ನು ಆಕೆ ನೀರಿನಲ್ಲಿಟ್ಟು, ಒಂದೇ ಸಮನೆ ಮಗನ ಬಿಡುಗಡೆಗಾಗಿ ಪ್ರಾರ್ಥನೆ ಮಾಡತೊಡಗಿದಳು. ಇತ್ತ ಗೊಂದವಲೆಯಲ್ಲಿ ಮಹಾರಾಜರ ಎರಡೂ ಕಾಲು ಬಾತುಕೊಂಡಿತು. ಭಕ್ತ ಮಂಡಳಿಗೆ ಚಿಂತೆ ಉಂಟಾಯಿತು. ಅವರು ಔಷಧೋಪಚಾರ ಪ್ರಾರಂಭಿಸಿದರು, ಅವರಿಗೆ ಶ್ರೀಮಹಾರಾಜರು ಹೇಳಿದರು – ನನ್ನ ಕಾಲು ತನ್ನಿಂದತಾನೇ ಸರಿಯಾಗುವವು, ನೀವು ಚಿಂತಿಸಬೇಡಿ. ಆಗಲೇ ಔಂಧದ ಡಾ|| ಸರ ಭಾಲಚಂದ್ರ ಭಾಟವಡೇಕರ್ ಗೊಂದವಲೆಗೆ ಶ್ರೀಮಹಾರಾಜರ ದರ್ಶನಕ್ಕಾಗಿ ಬಂದರು. ನೋಡುತ್ತಾರೆ ಮಹಾರಾಜರ ಕಾಲುಗಳು ಬಾತುಕೊಂಡಿವೆ. ಅವರು ಕಾಲು

ಪರೀಕ್ಷಿಸಿದರು ಮತ್ತು ತನ್ನ ಬಳಿ ಇದ್ದ ಔಷಧದ ನಾಲ್ಕು ಬಾಟಲುಗಳನ್ನು ಕೊಟ್ಟು ಶ್ರೀಮಹಾರಾಜರು ಅದನ್ನು ಸ್ವೀಕರಿಸಿದರು. ಔಷಧಿಗಳನ್ನು ನಿಯಮಿತವಾಗಿ ತೆಗೆದುಕೊಳ್ಳಿ, ಕಾಲಿನ ಕಡೆ ಗಮನವಿರಲಿ. ಎಂದು ಹೇಳಿ ಅವರು ಹೊರಟರು, ಅವರಿಗೆ ಮಹಾರಾಜರು ಒಪ್ಪಿಗೆ ಇತ್ತರು. ಡಾಕ್ಟರ್ ಹೊರಟು ಹೋದರು. ಶ್ರೀಮಹಾರಾಜರು ಹರಿಪಂತರಿಗೆ ಹೇಳಿದರು – ಕೆಲವು ಸಂಗತಿಗಳಿಗೆ ಕಾರ್ಯಕಾರಣ ಭಾವ ಇರುವುದಿಲ್ಲ. ನಾವು ಜಡದ ವಿಚಾರ ಮಾಡಿ ಅರ್ಥ ಹಚ್ಚುತ್ತೇವೆ. ಅದು ಪರಿಪೂರ್ಣವಾಗಿಯೇ ಇರುತ್ತದೆ ಎಂದಿಲ್ಲ. ಶ್ರೀಮಹಾರಾಜರು ಯಾವುದೇ ಉಪಚಾರ ಮಾಡದೆ ರಾಮನಾಮ ಜಪಿಸುತ್ತಿದ್ದರು. ಎರಡೂವರೆ ತಿಂಗಳಲ್ಲಿ ಅವರ ಕಾಲಿನ ಬಾತು ಇಳಿಯಿತು. ಸರಕಾರೀ ಅಧಿಕಾರಿಗಳು ಆ ಸ್ತ್ರೀಯ ಮಗನ ಮೇಲೆ ಖಟ್ಲೆ ದಾಖಲಿಸಿದ್ದರು. ಆ ಖಟ್ಲೆ ಎರಡೂವರೆ ತಿಂಗಳು ನಡೆಯಿತು. ಅದರಿಂದ ಆ ಮಗು ನಿರ್ದೋಷಿ ಎಂದು ಬಿಡುಗಡೆ ಹೊಂದಿದ. ಬಳಿಕ ಆ ತಾಯಿಯು ಶ್ರೀಮಹಾರಾಜರ ಪಾದುಕೆಗಳನ್ನು ನೀರಿನಿಂದ ತೆಗೆದಳು ಮತ್ತು ಕೃತಜ್ಞತಾಭಾವದಿಂದ ಅವುಗಳ ಪೂಜೆ ಮಾಡಿದಳು. ಅನಂತರ ಆ ತಾಯಿಯು ಶ್ರೀಮಹಾರಾಜರ ದರ್ಶನಕ್ಕಾಗಿ ಗೊಂದವಲೆಗೆ ಬಂದರು. ಅವರೇ ನಡೆದ ಎಲ್ಲ ವೃತ್ತಾಂತ ತಿಳಿಸಿದರು.

□□

## -: ಮೂವತ್ತನಾಲ್ಕು :-

# ಶ್ರೀರಾಮ ಮೂರ್ತಿಯ ಕಣ್ಣುಗಳಲ್ಲಿ ಅಶ್ರು

ಶ್ರೀಮಹಾರಾಜರು ತಮ್ಮ ಸಂಪೂರ್ಣ ಜೀವನದಲ್ಲಿ ರಾಮನಾಮವನ್ನು ಜಪಿಸಿದರು. ಬರುವ ಶ್ರದ್ಧಾವಂತ ಭಾವುಕ ಭಕ್ತರಿಗೆ ಅವರು ರಾಮನಾಮ ಜಪಿಸಲು ತೊಡಗಿಸಿದರು. ಮನುಷ್ಯನೆಂದಾಗ ಸಂಸಾರ ಬಂದೇ ಬಿಟ್ಟಿತು, ಸಂಕಟಗಳು ಬಂದವು, ದೇಹಕ್ಕೆ ವ್ಯಾಧಿಗಳೂ ಬಂದುವು. ಈ ಎಲ್ಲ ಕ್ಲೇಶಗಳನ್ನು ರಾಮನಾಮ ದಾಟಿಸುತ್ತದೆ, ಎಂಬ ನಿಷ್ಠೆ ಮಹಾರಾಜರಿಗೆ ದೃಢವಾಗಿ ಇತ್ತು . ಅವರಿಗೆ ಅದರ ಅನುಭವ ಉಂಟಾಗಿತ್ತು. ಅವರ ನಿಷ್ಠಾವಂತ ಭಕ್ತರೂ ಕೂಡ ಅನುಭೂತಿ ಪಡೆದಿದ್ದರು. ಪೂಣೆಯ ಬಾಪೂಸಾಹೇಬ ಪೋತನೀಸ ಎಂಬ ಭಕ್ತರು ಇದ್ದರು. ಅವರಿಗೆ ಅರ್ಧಾಂಗ ವಾಯಿ ಆಯಿತು. ಅವರು ಆಪ್ತರ ಸಹಾಯದಿಂದ ಗೊಂದವಲೆಗೆ ಬಂದರು. ಶ್ರೀಮಹಾರಾಜರು ಅವರನ್ನು ತುಂಬು ಪ್ರೇಮದಿಂದ ಇರಿಸಿಕೊಂಡರು. ಏಳೆಂಟು ದಿನಗಳಲ್ಲಿ ಅವರನ್ನು ಮಹಾರಾಜರು ಶ್ರೀರಾಮಪ್ರಭುವಿನ ಎದುರಿಗೆ ತಂದು ಮಲಗಿಸಿದರು ಮತ್ತು ಕೇಳಿದರು - 'ಹಾಯೆನಿಸುತ್ತೀದೆಯಾ?' ಅವರು ಕತ್ತಿನಿಂದಲೇ ಹೌದೆಂದರು. ಶ್ರೀಮಹಾರಾಜರು ಅವರಿಗೆ ಹೇಳಿದರು - ರಾಮರಾಯನು ನಿಮ್ಮ ಕಲ್ಯಾಣಕರ್ತಾ ಇದ್ದಾನೆ. ಮನಸ್ಸಿನಲ್ಲೇ ರಾಮನಾಮ ಜಪಿಸಿರಿ. ಭಾಪೂಸಾಹೇಬರು ಶ್ರೀಮಹಾರಾಜರ ಚರಣಗಳನ್ನು ಸ್ಪರ್ಶಿಸಿ ಮನಸ್ಸಿನಲ್ಲೇ ನಮಸ್ಕಾರ ಮಾಡಿದರು. ಶ್ರೀಮಹಾರಾಜರು ಅಲ್ಲಿಯ ಇತರ ಭಕ್ತ ಮಂಡಳಿಗೆ ಹೇಳಿದರು - ನಿಮ್ಮಲ್ಲಿ ಇಬ್ಬರು ಸರದಿಯಂತೆ ಇವರ ಬಳಿ ಕುಳಿತುಕೊಳ್ಳಿ, ರಾತ್ರೆ ಅವರ ಕಿರುನಾಲಿಗೆ ಊದಿಕೊಂಡೀತು, ಆಗ ನನ್ನನ್ನು ಕರೆಯಿರಿ. ಮಹಾರಾಜರು ಹೇಳಿದಂತೆ ಭಕ್ತರು ಬಾಪೂಸಾಹೇಬರ ಹತ್ತಿರ ರಾಮನಾಮ ಜಪಿಸುತ್ತಾ ಕುಳಿತರು. ರಾತ್ರೆಯ ಹನ್ನೆರಡೂವರೆ ದಾಟಿತ್ತು , ಅವರ ಕಿರುನಾಲಿಗೆ ಊದಿಕೊಳ್ಳಲು ತೊಡಗಿತು. ಶ್ರೀದಾಮಲೆಯವರು ಶ್ರೀಮಹಾರಾಜರನ್ನು

ಕರೆದುಕೊಂಡು ಬಂದರು - ಮಹಾರಾಜರು ಬಾಪೂಸಾಹೇಬರ ತಲೆ ತಮ್ಮ ತೊಡೆಯಲ್ಲಿ ಇಟ್ಟುಕೊಂಡರು, ಬಾಪೂಸಾಹೇಬರು ಕಣ್ಣು ತೆರೆದು ಶ್ರೀಮಹಾರಾಜರ ದರ್ಶನ ಪಡೆದರು. ಸ್ವಲ್ಪ ಹೊತ್ತಿನಲ್ಲಿ ಬಾಪೂಸಾಹೇಬರ ಊದಿಕೊಂಡ ಕಿರುನಾಲಗೆಗೆ ಒಂದು ಸಣ್ಣ ತೂತು ಮಾಡಿದರು ಹಾಗೂ ಅವರ ಪ್ರಾಣ ಪಂಚತ್ವದಲ್ಲಿ ವಿಲೀನವಾಯಿತು, ಅವರು ಜನ್ಮ-ಮರಣದ ಅಲೆದಾಟದಿಂದ ಮುಕ್ತರಾದರು.

1909ರಲ್ಲಿ ಪ್ಲೇಗ ಮಹಾಮಾರಿಯು ಗೊಂದವಲೆಗೂ ವ್ಯಾಪಿಸಿತ್ತು . ಒಂದು ದಿನ ಸಂಜೆ ಶ್ರೀಮಹಾರಾಜರಿಗೆ ಜ್ವರ ಕಾಣಿಸಿಕೊಂಡು ಏರುತ್ತಲೇ ಹೋಯಿತು. ಅಂದು ರಾತ್ರೆ ಶ್ರೀಮಹಾರಾಜರ ಗಂಟಲಿನ ಇಕ್ಕೆಲಗಳಲ್ಲಿ ಗಂಟುಗಳು ಕಾಣಿಸಿಕೊಂಡವು. ಆ ದಿನ ಮಂದಿರದಲ್ಲಿ ಭಜನ ಸಪ್ತಾಹ ನಡೆಯುತ್ತಿತ್ತು . ಶ್ರೀಮಹಾರಾಜರು ಕತ್ತಿನ ಸುತ್ತ ಪಟ್ಟಿಸುತ್ತಿಕೊಂಡು, ಕೌದಿಯನ್ನು ಹೊದ್ದುಕೊಂಡು ತಮ್ಮ ಕೋಣೆಯಲ್ಲಿ ಮಲಗಿದ್ದರು. ಭಜನ ಸಪ್ತಾಹ ಮಾತ್ರ ನಿಯಮಾನುಸಾರ ನಡೆಯುತ್ತಲೇ ಇತ್ತು. ಭಜನ, ನಾಮಸ್ಮರಣ, ಪ್ರಸಾದಭಕ್ಷಣ ಎಲ್ಲವೂ ಸಂಪ್ರದಾಯದಂತೆ ನಡೆದೇ ಇತ್ತು . ಶ್ರೀಮಹಾರಾಜರಿಗೆ ಪ್ಲೇಗ ಆಗಿದೆ ಎಂಬ ವಾರ್ತೆ ದಹೀವಡಿಯ ಮಾಮಲೇದಾರರ ಕಿವಿಗೆ ಬಿತ್ತು . ಅವರು ಮಹಾರಾಜರ ಹತ್ತಿರ ಹೋಗಲು ನಿಶ್ಚಯಿಸಿದರು. ಮಾಮಲೇದಾರರ ಆಗಮನದ ಸುದ್ದಿ ಶ್ರೀಮಹಾರಾಜರಿಗೆ ತಿಳಿಯಿತು. ಅವರ ಸ್ವಾಗತಕ್ಕಾಗಿ ಸಿದ್ಧರಾದರು. ಅವರಿಗೆ ಕುಳಿತುಕೊಳ್ಳಲು ಆಸನ ವ್ಯವಸ್ಥೆಯಾಯಿತು. ನಿಶ್ಚಯಿಸಿದಂತೆ ಮಾಮಲೇದಾರರು ಬಂದರು. ಶ್ರೀಮಹಾರಾಜರು ಅವರ ಸ್ವಾಗತ ಮಾಡಿದರು. ಅವರನ್ನು ಆದರಿಂದ ಕುಳ್ಳಿರಿಸಿದರು. ಮಾಮಲೇದಾರರು ಹೇಳಿದರು - ಮಹಾರಾಜ! ನಿಮಗೆ ಪ್ಲೇಗ ಆದುದು ನನ್ನ ಕಿವಿಗೆ ಬಿತ್ತು , ಅದಕ್ಕಾಗಿ ನಾನು ಬಂದೆ, ಹಾಗಿದ್ದರೆ ನಿಯಮಾನುಸಾರ ಊರು ಬಿಟ್ಟು ಕಾಡಿಗೆ ಹೋಗಬೇಕಾದೀತು, ಕಾರಣ ಈ ರೋಗವು ಸಂಸರ್ಗ ಜನ್ಯವಾಗಿದೆ. ಆಗ ಮಹಾರಾಜರು ಕಫನಿ ಹಾಕಿದ್ದರು. ಅವರು ಭುಜುಗಳನ್ನೆತ್ತಿ ಹೇಳಿದರು - ಸ್ವಲ್ಪ ಬಿದ್ದುಕೊಂಡಿದ್ದೆ, ಜನರು ಬೇಡದ ತರ್ಕ-ವಿತರ್ಕ ಮಾಡುತ್ತಾರೆ, ಊರಿನಲ್ಲಿ ಜೊತೆಗಿದ್ದಾರಲ್ಲ! ನನಗೆ ಜ್ವರವಿದೆಯೇ ನೀವೇ ನೋಡಿ. ಮಾಮಲೆದಾರರು ಶ್ರೀಮಹಾರಾಜರ ಎರಡೂ ಕೈಗಳನ್ನು ಕೈಯಲ್ಲಿ ಹಿಡಿದರು, ಅವು ತಣ್ಣಗೆ ಇದ್ದವು. ಕತ್ತಿಗೆ ಸುತ್ತಿದ ಬಟ್ಟೆಯನ್ನು ತೆಗೆದರು ಗಂಟಲಿನ ಸುತ್ತಲೂ ಗಂಟುಗಳು ಇರಲಿಲ್ಲ. ಮಾಮಲೆದಾರರಿಗೆ ಸಮಾಧಾನವಾಗಿ, ರಾಮಪ್ರಸಾದ ಪಡೆದು ಅವರು ಹೊರಟು ಹೋದರು.

ಶ್ರೀಮಹಾರಾಜರನ್ನು ಜ್ವರವು ಪುನಃ ಆವರಿಸಿತು. ಪುನಃ ಅವರ ಕೊರಳು ಬಾತುಕೊಂಡಿತು. ಕತ್ತಿನ ಎರಡೂ ಕಡೆಗಳಲ್ಲಿ ಗಂಟಲುಗಳು ಊತ ಉಂಟಾದವು. ಅವರು ಕತ್ತಿಗೆ ಸುತ್ತಲೂ ಬಟ್ಟೆ ಸುತ್ತಿದರು. ಗೋದೋಡಿ ಹೊದ್ದು ಮಲಗಿ ಬಿಟ್ಟರು. ವೇದನೆಯಿಂದ ನರಳತೊಡಗಿದರು. ರಾಮಮಂದಿರದಲ್ಲಿ 'ರಘುಪತಿ ರಾಘವ ರಾಜಾರಾಮ, ಪತಿತಪಾವನ ಸೀತಾರಾಮ' ಎಂಬ ಭಜನೆ ತಾಲ-ಮೃದಂಗದೊಂದಿಗೆ ನಡೆಯುತ್ತಿತ್ತು . ಭಜನೆ ಹೇಳುತ್ತಾ-ಹೇಳುತ್ತಾ ಗಣಪತಿರಾವ ದಾಮಲೆಯವರ ಲಕ್ಷ್ಯ ರಾಮಮೂರ್ತಿ ಕಡೆಗೆ ಹೋಯಿತು. ನೋಡಿದರೆ ಶ್ರೀರಾಮನ ನೇತ್ರಗಳಿಂದ ಅಶ್ರು ಒಸರುತ್ತಿತ್ತು . ಅವರು ವಿಸ್ಮಯ ಚಕಿತರಾದರು. ಕೂಡಲೇ ಶ್ರೀಮಹಾರಾಜರ ಕೋಣೆಗೆ ಹೋದರೆ ಅವರು ನರಳುತ್ತಿದ್ದರು. ಶ್ರೀರಾಮನ ಮೂರ್ತಿಯ ನಯನಗಳಿಂದ ಅಶ್ರು ಬಂದಿರುವುದನ್ನು ಗಣಪತರಾಯರು ಹೇಳಿದರು. ಮಹಾರಾಜರು ಸಟ್ಟನೆ ಎದ್ದು, ಮಡಿಯುಟ್ಟು, 'ಜಾನಕೀಜೀವನ ಸ್ಮರಣ ಜಯ ಜಯ ರಾಮ' ಎಂದು ಹೇಳುತ್ತಾ ಮಂದಿರದ ಗರ್ಭಗುಡಿಗೆ ಬಂದರು. ತಮ್ಮ ಕೈಯಲ್ಲಿದ್ದ ಕರವಸ್ತ್ರದಿಂದ ಶ್ರೀರಾಮ ಮೂರ್ತಿಯ ಕಣ್ಣುಗಳಿಂದ ಒಸರುತ್ತಿರುವ ಅಶ್ರು ಒರೆಸಿದರು. ಅಶ್ರು ಒರೆಸುತ್ತಾ-ಒರೆಸುತ್ತಾ ಅವರು ಶ್ರೀರಾಮನಿಗೆ ಹೇಳಿದರು - ಪ್ರಭೂ! ನೀನು ಮನಸ್ಸಿಗೆ ಇಷ್ಟು ಹಚ್ಚಿಕೊಳ್ಳಬೇಡ, ನಿನ್ನ ಕೃಪೆಯಿಂದ ನನ್ನ ವ್ಯಾಧಿಯು ಹೊರಟು ಹೋದೀತು. ಶ್ರೀಮಹಾರಾಜರಿಗೆ ನೆನಪಾಯಿತು. ಈ ಹಿಂದೆ 1897ರಲ್ಲಿ ಅವರು ನೈಮಿಷಾರಣ್ಯಕ್ಕೆ ಹೊರಟಾಗಲೂ ಶ್ರೀರಾಮನ ನೇತ್ರಗಳಿಂದ ಹೀಗೆಯೇ ಅಶ್ರುಗಳು ಹರಿದಿದ್ದವು. ದೇವರಿಗೆ ತನ್ನ ಭಕ್ತನ ಮೇಲೆ ಎಷ್ಟೊಂದು ಪ್ರೇಮವಿರುತ್ತದೆ! ಮುಂದೆ ಬೇಗನೆ ಶ್ರೀರಾಮನ ಕೃಪೆಯಿಂದ ಶ್ರೀಮಹಾರಾಜರು ವ್ಯಾಧಿಮುಕ್ತರಾದರು. ಅವರು ಭಕ್ತರಿಂದ ಶ್ರೀರಾಮನಿಗೆ ದುಗ್ಧಾಭಿಷೇಕ ಮಾಡಿಸಿದರು. ಈ ಸಂಗತಿ ಯಾರಿಗೂ ಹೇಳಬಾರದೆಂದು ಭಕ್ತರಿಗೆ ಅವರು ತಿಳಿಸಿದರು. ಆದರೂ ಈ ಸಂಗತಿ ಜನರಿಗೆ ತಿಳಿಯಿತು. ಶ್ರೀರಾಮನ ಮೂರ್ತಿಯ ನಯನಗಳಲ್ಲಿ ಅಶ್ರುಬಂದ ವಾರ್ತೆಯನ್ನು ಲೋಕಮಾನ್ಯರ ಕೇಸರಿಯಲ್ಲಿ ಅಚ್ಚಾಗಿ ಬಂತು.

ಗೊಂದವಲೆಯಲ್ಲಿ ಪ್ರತಿದಿನ ದೊಡ್ಡ ಪ್ರಮಾಣದಲ್ಲಿ ಭೋಜನ ಪ್ರಸಾದ ನಡೆಯುತ್ತಿತ್ತು. ಅನೇಕ ಭಕ್ತರು ದರ್ಶನ ಮತ್ತು ಪ್ರಸಾದ ಸೇವನೆಯಿಂದ ತೃಪ್ತರಾಗುತ್ತಿದ್ದರು. ತುಂಬಾ ಅಡಿಗೆ ಮಾಡಬೇಕಾಗುತ್ತಿತ್ತು . ಅಡಿಗೆ ಮಾಡುವ ಭಗಿನಿಯವರಲ್ಲಿ ಕಾಶೀತಾಯಿ, ಗಂಗೂತಾಯಿ ಮತ್ತು ಮುಕ್ತಾಬಾಯಿ ಹೀಗೆ ಮೂವರು ಪ್ರಮುಖರಾಗಿದ್ದರು. ಆ ಮೂವರೂ ಪರಮ ಕಷ್ಟ ಪಡುತ್ತಿದ್ದರು.

ಎಂಟೆಂಟು ಸೇರಿನ ಜೋಳದ ಹಿಟ್ಟಿನ ರೊಟ್ಟಿ ಒಲೆಯ ಮೇಲೆ ಮಾಡುತ್ತಿದ್ದರು. ಅವರಲ್ಲಿ ಮುಕ್ತಾಬಾಯಿ ಬಾಲವಿಧವೆಯಾಗಿದ್ದರು. ಅವರಿಗೆ ಮಹಾರಾಜರೊಂದಿಗೆ ದೂರದ ಸಂಬಂಧವಿತ್ತು . ಅವರು ತೆಳ್ಳಗೆ, ಅಶಕ್ತರಂತೆ ಕಂಡು ಬಂದರೂ ಸಶಕ್ತರಾಗಿದ್ದರು. ಅನ್ನದ ದೊಡ್ಡ ತಪಲೆ ಅಥವಾ ಹಂಡೆಗಳನ್ನು ಲೀಲಾಜಾಲವಾಗಿ ಎತ್ತಿ ಇಡುತ್ತಿದ್ದರು. ಒಮ್ಮೆ ಮುಕ್ತಾಬಾಯಿಯವರು ದತ್ತದರ್ಶನಕ್ಕಾಗಿ ದತ್ತ ಮಂದಿರಕ್ಕೆ ಹೋಗಿದ್ದರು, ಅವರಿಗೆ ಇದ್ದಕ್ಕಿದ್ದಂತೆ ಗೋದಿಯ ಪಾಯಸ ತಿನ್ನಬೇಕೆಂಬ ಇಚ್ಛೆ ಉಂಟಾಯಿತು. ಅನೇಕ ಸಲ ತನಗೆ ಹೀಗೆ ಏನಾದರೂ ತಿನ್ನಬೇಕೆಂಬ ಇಚ್ಛೆ ಆಗುತ್ತದೆ ಮತ್ತು ತಾನು ಮರೆತೂ ಹೋಗುತ್ತಾರೆ, ಮುಕ್ತಾಬಾಯಿ ಆ ಇಚ್ಛೆಯನ್ನು ಮರೆತು ಬಿಟ್ಟರು. ಶ್ರೀಮಹಾರಾಜರಿಗೆ ಆ ಇಚ್ಛೆ ತಿಳಿಯಿತು. ಅವರು ಅಡಿಗೆ ಮನೆಗೆ ಹೋಗಿ ಗಂಗೂತಾಯಿಯವರಿಗೆ ನೈವೇದ್ಯಕ್ಕಾಗಿ ಗೋದಿಯ ಪಾಯಸ ಮಾಡಲು ಹೇಳಿದರು, ರಾಮನಿಗೆ ನೈವೇದ್ಯ ಆಗಿ ಭಕ್ತರ ಪಂಕ್ತಿ ಕುಳಿತುಕೊಳ್ಳ ತೊಡಗಿತು. ಶ್ರೀಮಹಾರಾಜರು ಒಂದು ದೊಡ್ಡ ಪುಷ್ಪಪಾತ್ರೆಯಲ್ಲಿ ಗೋದಿಯ ಪಾಯಸ ಎತ್ತಿಕೊಂಡು ದತ್ತಮಂದಿರಕ್ಕೆ ಬಂದರು. ಅವರು ಮುಕ್ತಾಬಾಯಿಯ ಎದುರು ಆ ಪಾತ್ರೆ ಹಿಡಿದು ಹೇಳಿದರು – ''ಗೋದಿಯ ಪಾಯಸವಿದೆ, ಹೊಟ್ಟೆ ತುಂಬಾ ತಿನ್ನು , ಇನ್ನು ಬೇಕಾದರೆ ಹೇಳು. ಮುಕ್ತಾಬಾಯಿಯ ಕಣ್ಣಿಗಳಿಂದ ಕಂಬನಿ ಹರಿದವು. ಭಾವವಿವಶರಾಗಿ ಹೇಳಿದರು. ಜನ್ಮದಾತೃ ತಂದೆಯೂ ಇಷ್ಟು ಪ್ರೀತಿ ಮಾಡಲಿಲ್ಲ. ಆದರೆ ನೀವು ಅದಕ್ಕಿಂತ ಹೆಚ್ಚು ಮಾಡುತ್ತಿದ್ದೀರಿ.

1912ರ ಕಥೆ – ವಾಯಿಯ ಹತ್ತಿರದ ಊರಿನಲ್ಲಿ ದರೋಡೆ ನಡೆಯಿತು, ದರೋಡೆ ಕೋರರು ಮಾಣದವರಾಗಿದ್ದರು. ಸಿಪಾಯಿಗಳು ಹುಡುಕ ತೊಡಗಿದರು. ಅವರು ದರೋಡೆ ಕೋರರನ್ನು ಹಿಡಿದರು, ಅವರ ಬಳಿ ಇದ್ದ ದರೋಡೆಯ ಸಾಮಾನು ಜಪ್ತಿ ಮಾಡಿದರು. ನ್ಯಾಯಾಲಯದಲ್ಲಿ ಆ ಎಲ್ಲ ದರೋಡೆ ಕೋರರಿಗೆ ಒಬ್ಬೊಬ್ಬರಿಗೆ ಎರಡು ವರ್ಷ ಕಠಿಣ ಶಿಕ್ಷೆಯಾಯಿತು. ಇವರೆಲ್ಲರೂ ಈ ಮೊದಲು ಅನೇಕ ಅಪರಾಧ ಮಾಡಿದ್ದರು. ಅವರಿಗಾದ ಶಿಕ್ಷೆಯು ಅಪರಾಧಿಗಳ ದೃಷ್ಟಿಯಿಂದ ಕಡಿಮೆ ಎಂದು ಸರಕಾರಕ್ಕೆ ಅನಿಸಿತು. ಎಲ್ಲ ಖಟ್ಲೆ ಕಲೆಕ್ಟರ್ ಎದುರಿಗೆ ನಡೆಯಬೇಕೆಂದು ನಿಶ್ಚಯಿಸಲಾಯಿತು. ಅವರನ್ನು ಸಾತಾರೆಗೆ ಕರೆತರಲಾಯಿತು. ಕಲೆಕ್ಟರರು ಪ್ರವಾಸದಲ್ಲಿ ಇದ್ದರು, ಮತ್ತೆ ಸಿಪಾಯಿಗಳು ಆ ದರೋಡೆಕೋರರನ್ನು ಸಾತಾರಾ, ವಡೂಜ, ದಹಿವಡಿ ಹೀಗೆ ತಿರುಗಾಡಿಸುತ್ತಾ ಕಲೆಕ್ಟರರ ಹಿಂದೆಯೇ ಗೊಂದವಲೆಗೆ ತಂದರು. ಕಲೆಕ್ಟರರು ಸರಕಾರೀ ಬಂಗ್ಲೆಯಲ್ಲಿ ಇದ್ದರು, ವಾರ ಶನಿವಾರವಾಗಿತ್ತು , ಶನೀದೇವರಿಗೆ ಮಹಾಭಿಷೇಕ ನಡೆಯುತ್ತಿತ್ತು , ಬಹಳ ಜನರು ಸೇರಿದ್ದರು, ಶ್ರೀಮಹಾರಾಜರು

ದತ್ತಮಂದಿರದ ಹಿಂದೆ ನಿಂತಿದ್ದರು. ಅಲ್ಲಿಂದಲೇ ಕೊಳ ತೊಡಿಸಿದ ದರೋಡೆಕೋರರನ್ನು ಕರಕೊಂಡು ಪೊಲೀಸರು ಹೋಗುತ್ತಿದ್ದರು. ಆ ಪೊಲಿಸರ ಗುಂಪಿನಲ್ಲಿ ಪವಾರ ಎಂಬ ಪೊಲೀಸನು ಮಹಾರಾಜರ ಭಕ್ತನಾಗಿದ್ದನು. ಅವನು ಶ್ರೀಮಹಾರಾಜರ ದರ್ಶನಕ್ಕಾಗಿ ಆಗಾಗ ಗೊಂದವಲೆಗೆ ಬರುತ್ತಿದ್ದನು. ಶ್ರೀಮಹಾರಾಜರು ತನ್ನ ಭಕ್ತನನ್ನು ಕರೆದರು, ಪವಾರ ಕೈ ಮುಗಿದು ಮುಂದೆ ಬಂದ, ಎಲ್ಲರನ್ನು ತಮ್ಮ ಬಳಿಗೆ ಕರೆದುಕೊಂಡು ಬರಲು ಮಹಾರಾಜರು ಹೇಳಿದರು. ಪವಾರ ಎಲ್ಲರನ್ನು ಕರೆದುಕೊಂಡು ಬಂದನು. ಆ ದರೋಡೆ ಕೋರರು ಬಾಯಾರಿದ್ದರು, ಹಸಿದಿದ್ದರು, ಮಹಾರಾಜರಿಗೆ ಅವರ ಮೇಲೆ ದಯೆ ಬಂತು ಮಹಾರಾಜರು ಹೇಳಿದರು - 'ಇವರಿಗೆ ಊಟ ಹಾಕುವಾ, ಸ್ವಲ್ಪ ಹೊತ್ತು ಅವರ ಕೊಳ ತೆಗೆಯಿರಿ, ಕೊಳ ತೆಗೆಯುವುದು ಆಪತ್ತಿನ ವಿಷಯವೆಂದು ತಿಳಿದು ಪೊಲೀಸರು ಒಪ್ಪಲಿಲ್ಲ. ಮಹಾರಾಜರು ಹೇಳಿದರು - ಇವರ ಜವಾಬ್ದಾರಿ ನನಗಿರಲಿ, ಅವರ ಸಂಕೋಲೆ ಬಿಚ್ಚಿ ಊಟವಾದ ಮೇಲೆ ಪುನಃ ತೊಡಿಸಬಹುದು. ಅಪರಾಧಿಗಳು ಮತ್ತು ಎಲ್ಲ ಪೊಲೀಸರು ಹೊಟ್ಟೆತುಂಬಾ ಉಂಡರು. ಶ್ರೀಮಹಾರಾಜರು ಆ ದರೋಡೆಕೋರರಿಗೆ ಹೇಳಿದರು-ಅಪ್ಪಾ! ನಮಗೆ ಮಾನವ ಜನ್ಮ ದೊರೆತಿದೆ, ಪ್ರಮಾಣಿಕ ಶ್ರಮ ಪಡಬೇಕು, ತನ್ನ ಮತ್ತು ತನ್ನ ಕುಟುಂಬದ ನಿರ್ವಾಹಕ್ಕಾಗಿ ನ್ಯಾಯಯುಕ್ತ ಕಷ್ಟ ಪಡಬೇಕು, ಸನ್ಮಾರ್ಗದಲ್ಲಿ ನಡೆಯಬೇಕು, ಇಂದಿನವರೆಗಿನದನ್ನು ಮರೆತುಬಿಡಿ. ಇಂದು ನೀವು ಮುಕ್ತರಾಗುವಿರಿ, ಪುನಃ ಮಾತ್ರ ಹೀಗೆ ನಡೆಯಬೇಡಿ, ನಿಮಗೆ ರಾಮನ ಆಣೆ ಇದೆ.

ಶ್ರೀಮಹಾರಾಜರ ಮಾತು ಸತ್ಯವಾಯಿತು. ಕಲೆಕ್ಟರರು ಆ ದರೋಡೆಕೋರರನ್ನು ಮುಕ್ತಗೊಳಿಸಿದರು, ಅವರೆಲ್ಲರೂ ಶ್ರೀಮಹಾರಾಜರ ಬಳಿಗೆ ಬಂದು ಚರಣಗಳಲ್ಲಿ ಹೊರಳಾಡಿದರು. ಮಹಾರಾಜರು ಅವರನ್ನು ಶ್ರೀರಾಮಮೂರ್ತಿಯ ಎದುರಿಗೆ ತಂದು ಆ ದಯಾಸಾಗರನ ಚರಣಗಳಲ್ಲಿ ತಲೆಯಿಡಲು ಅವರಿಗೆ ಹೇಳಿದರು. ರಾಮಚರಣಗಳಲ್ಲಿ ಮಸ್ತಕವನ್ನಿಟ್ಟು ಸದ್‌ವರ್ತನೆಯ ಶಪಥ ಮಾಡಿರಿ, ಹೀಗೆ ಅವರಿಂದ ಶಪಥ ಮಾಡಿಸಿ ಬೀಳ್ಕೊಟ್ಟರು.

ಭಯ್ಯಾ ರಾಮೋಶೀ ಎಂಬ ಬೇರೆ ರೀತಿಯ ದರೋಡೆಕೋರನಿದ್ದನು. ಅವನು ಶ್ರೀಮಂತರ ಮನೆಗಳಲ್ಲಿ ದರೋಡೆ ಹಾಕಿ, ಲೂಟಿ ಮಾಡಿದ ಧನವನ್ನು ಬಡ-ಬಗ್ಗರಿಗೆ ಹಂಚಿಬಿಡುತ್ತಿದ್ದನು. ಶ್ರೀಮಹಾರಾಜರು ಅವನನ್ನು, ಪರಿವರ್ತನೆ ಮಾಡಿದರು. ಅವನಿಗೆ ಹೊಸ ವ್ಯವಸಾಯ ಮಾಡಲು ಐದುನೂರು ರೂಪಾಯಿ ಕೊಟ್ಟರು. ಅವನು ಆ ಹಣದಿಂದ ಕೋಳಿಸಾಕುವ ವ್ಯವಸಾಯ ಪ್ರಾರಂಭಿಸಿ, ಸನ್ಮಾರ್ಗದಲ್ಲಿ ನಡೆಯ ತೊಡಗಿದನು.

□□

## -: ಮೂವತ್ತೈದು :-

# ಜೀವಿಗಳ ಮಿತ್ರರು

ವಿಷ ಪ್ರಯೋಗ ಆದಾಗಿನಿಂದ ಶ್ರೀಮಹಾರಾಜರಿಗೆ ದಮ್ಮಿನ ವಿಕಾರ ಶುರುವಾಯಿತು. ಅದು ಆಗಾಗ ಜೋರಾಗುತ್ತಿತ್ತು ಕೆಲವೊಮ್ಮೆ ರಾತ್ರಿಯಿಡೀ ಮಲಗುತ್ತಿರಲಿಲ್ಲ. ತುಂಬಾ ಕಷ್ಟವಾಗುತ್ತಿತ್ತು. ಆದರೆ ಅವರು ಆ ಪರಿಸ್ಥಿತಿಯಲ್ಲೂ ಮಂದಿರದ ನಿತ್ಯಕ್ರಮ, ನಾಮಸಾಧನಾ ಸತತ ನಡೆಸುತ್ತಿದ್ದರು. ಶ್ರೀಮಹಾರಾಜರ ಸಂಪರ್ಕಕ್ಕೆ ಬೇರೆ-ಬೇರೆ ಪ್ರಕಾರದ ಮತ್ತು ಬೇರೆ-ಬೇರೆ ಸ್ವಭಾವದ ಜನರು ಬರುತ್ತಿದ್ದರು. ಸರಕಾರವು ಪಂಚಕ್ರೋಶಿಯ ಧರ್ಮಾಚಾರ್ಯರ ಅಧಿಕಾರ ಕೊಟ್ಟಿತ್ತು. ಮಹಾರಾಜರೊಂದಿಗೆ ಭಾವುಸಾಹೇಬ ಕೇತಕರ್, ಭಾಪೂಸಾಹೇಬ ಸಾತೆ, ಬಾಪೂಸಾಹೇಬ ಖರೆ, ಅಪ್ಪಾಸಾಹೇಬ ಭಡಗಾವಕರ್ ಮುಂತಾದ ಮಂಡಳಿ ಇರುತ್ತಿತ್ತು. ಶ್ರೀಮಹಾರಾಜರು ಅವರೆಲ್ಲರನ್ನೂ 'ಕೌನ್ಸಿಲ್' ಎಂದು ಸಂಬೋಧಿಸುತ್ತಿದ್ದರು. ಸುತ್ತಮುತ್ತಲಿನ ಊರುಗಳಿಂದ ವಾದ, ತಂಟೆ-ತಕರಾರು ಇವರ ಮುಂದೆ ಬರುತ್ತಿದ್ದವು, ಶ್ರೀಮಹಾರಾಜರು ಯಾರಿಗೂ ಅನ್ಯಾಯವಾಗದಂತೆ ಎಚ್ಚರ ವಹಿಸುತ್ತಿದ್ದರು. ಪರಸ್ಪರ ವಿರುದ್ಧ ಕಡೆಯ ಜನರು ಸಮಾಧಾನ ಪಡುತ್ತಿದ್ದರು.

ಶ್ರೀಮಹಾರಾಜರ ಶಿಷ್ಯರು ಅವರನ್ನು ಸಮರ್ಥರ ಅವತಾರ ಎಂದು ತಿಳಿಯುತ್ತಿದ್ದರು. ಒಮ್ಮೆ ಸಹೃದಯರಲ್ಲಿ ಶ್ರೀಮಹಾರಾಜರು ಹರಟೆ ಹೊಡೆಯುತ್ತಾ ಕುಳಿತಿದ್ದರು. ಶ್ರೀಮಹಾರಾಜರು ಬ್ರಹ್ಮಾನಂದ ಬುವಾರವರಿಗೆ ಕೇಳಿದರು - ಬ್ರಹ್ಮಾನಂದಬುವಾ! ಈ ಜನರು ನನ್ನನ್ನು ಸಮರ್ಥರ ಅವತಾರ ಎಂದು ತಿಳಿಯುತ್ತಾರೆ, ನನಗೆ ಹೇಳಿ! ಸಮರ್ಥರಲ್ಲಿ ಮತ್ತು ನನ್ನಲ್ಲಿ ಯಾವುದು ಸಾಮ್ಯವಿದೆ? ಬ್ರಹ್ಮಾನಂದ ಬುವಾ ಕೈಮುಗಿದು ನಮ್ರರಾಗಿ ಹೇಳಿದರು - ನೀವು ಮತ್ತು ಸಮರ್ಥರು ಎಲ್ಲ ವಿಧದಲ್ಲಿ ಒಂದೇ ಆಗಿರುವಿರಿ. ಕೇವಲ ನಿಮಗೆ ಶಿಷ್ಯನಾಗಿ ಕಲ್ಯಾಣ ಸಿಗಲಿಲ್ಲ.

ಶ್ರೀಮಹಾರಾಜರು ಮಂದಹಾಸ ಬೀರಿ ಉದ್ಗರಿಸಿದರು - ಸಮರ್ಥರಂತೆ ಸಮರ್ಥರೇ! ಅವರಿಗೆ ಸಮ ಯಾರೂ ಇಲ್ಲ. ಒಂದು ಮಾತ್ರ ಇದೆ. ಈ ಬ್ರಹ್ಮಾನಂದ ಮಾತ್ರ ಕಲ್ಯಾಣರಾಗಿದ್ದಾರೆ.

ಬ್ರಹ್ಮನಾಂದರು ಗೊಂದವಲೆಯಲ್ಲಿ ಇರುವಾಗ ಧನುರ್ಮಾಸ ಬಂತು. ರಾತ್ರೆ ಎರಡು ಗಂಟೆಯವರೆಗೆ ಎಲ್ಲರೂ ಭೋಜನ ಮಾಡಿದರು, ರಾತ್ರೆ ಎರಡು ಗಂಟೆಯ ಬಳಿಕ ಮಲಗಿದರೆ ಬೇಗ ಯಾರು ಏಳುವರು? ಬ್ರಹ್ಮಾನಂದ ಬುವಾ ಮಾತ್ರ ಬೆಳಗಿನ ಝಾವ ಎದ್ದರು. ಸ್ನಾನಾದಿ ಗಳನ್ನು ಪೂರೈಸಿ ಸೂರ್ಯೋದಯ ಸಮಯದಲ್ಲಿ ಖಿಚಡಿ, ಸಜ್ಜೆರೊಟ್ಟಿ, ಪಲ್ಯ ಹೀಗೆ ಅಡಿಗೆ ಮಾಡಿ ನೈವೇದ್ಯ ಮಾಡಿದರು. ಕೆಲವರು ಎಚ್ಚರಗೊಂಡರು. ಕೆಲವರು ಮಲಗಲೇ ಇಲ್ಲ. ಶ್ರೀಮಹಾರಾಜರೂ ಇನ್ನು ಎದ್ದಿರಲಿಲ್ಲ, ಬ್ರಹ್ಮಾನಂದ ಬುವಾ ಒಬ್ಬ ಭಕ್ತನೊಡನೆ ತಟ್ಟೆ ಬಡಿಸಿ ಕಳಿಸಿದರು, ಶ್ರೀಮಹಾರಾಜರು ಸ್ವೀಕರಿಸಬೇಕೆಂದು ಇಚ್ಛೆ ಅವರಿಗಿತ್ತು. ಶ್ರೀಮಹಾರಾಜರು ಆ ಪ್ರಸಾದವನ್ನು ಒಬ್ಬರೇ ತಿನ್ನದೆ, ಸ್ನಾನ-ಸಂಧ್ಯೆಮಾಡಿ, ಶ್ರೀರಾಮಚರಣದಲ್ಲಿ ತುಳಸೀ ಅರ್ಪಿಸಿ, ಎಲ್ಲರೊಂದಿಗೆ ಅವರು ಭೋಜನೆ ಮಾಡಿದರು.

ಶ್ರೀಮಹಾರಾಜರಲ್ಲಿಗೆ ದುರಾಗ್ರಹೀ, ಅಹಂಕಾರೀ, ಹಟವಾದಿ ಮನುಷ್ಯರು ಬರುತ್ತಿದ್ದರು, ಶ್ರೀಮಹಾರಾಜರು ಇವರ ಸ್ವಭಾವ ತಿಳಿದರೂ ಅವರೊಂದಿಗೆ ಪ್ರೇಮದಿಂದ ನಡೆದು ಕೊಳ್ಳುತ್ತಿದ್ದರು. ಶ್ರೀಮಹಾರಾಜರಿಂದಾಗಿ ಅವರ ದುರಾಗ್ರಹ, ಅಹಂಕಾರ ಹೊರಟು ಹೋಗುತ್ತಿತ್ತು. ಅವರು ಭಕ್ತಿಭಾವದಿಂದ ನಾಮಸ್ಮರಣೆ ಮಾಡತೊಡಗಿದರು. ಕೆಲವರು ಬೀಡಿ, ತಂಬಾಕು ವ್ಯಸನ ಉಳ್ಳವರೂ ಬರುತ್ತಿದ್ದರು. ತಮ್ಮ ವ್ಯಸನ ಬಿಡಲು ಅವರು ತಯಾರು ಇರಲಿಲ್ಲ. ಶ್ರೀಮಹಾರಾಜರು ಆ ಸ್ಥಿತಿಯಲ್ಲೂ ಅವರೊಡನೆ ಪ್ರೇಮದಿಂದ ನಡೆದುಕೊಳ್ಳುತ್ತಿದ್ದರು. ವ್ಯಸನ ಬಿಡಲು ಅಗ್ರಹಿಸುತ್ತಿರಲಿಲ್ಲ. ಆಗ್ರಹ ಕೇವಲ ನಾಮಸ್ಮರಣೆಯದು, ಶ್ರೀಮಹಾರಾಜರ ಸಂಗದಿಂದ ಅವರ ವ್ಯಸನಗಳು ತಾವಾಗಿ ಬಿಟ್ಟು ಹೋಗುತ್ತಿದ್ದವು.

ಹಟವಾದೀ, ವ್ಯಸನೀ ಜನರಂತೆ ವ್ಯಾಧಿಗ್ರಸ್ತ ಜನರೂ ಶ್ರೀಮಹಾರಾಜರಲ್ಲಿಗೆ ಬರುತ್ತಿದ್ದರು. ಶ್ರೀಮಹಾರಾಜರು ಅವರನ್ನೂ ಆತ್ಮೀಯತೆಯಿಂದ ಸ್ವೀಕರುಸ್ತಿದ್ದರು. ಒಮ್ಮೆ ಗೊಂದವಲೆಗೆ ಖಂಡೇರಾಮ ಮ್ಹ್ಯಾಸಾಳಕರ್ ಎಂಬ ಓರ್ವ ಗೃಹಸ್ಥರು ಬಂದರು. ಅವರ ಆರ್ಥಿಕ ಸ್ಥಿತಿ ಉತ್ತಮವಾಗಿತ್ತು. ದುರ್ದೈವದಿಂದ ಅವರಿಗೆ ಮಹಾರೋಗ ಉಂಟಾಯಿತು, ಅವರು ಅನೇಕ ವೈದ್ಯಕೀಯ ಉಪಚಾರ ಮಾಡಿನೋಡಿದರು, ಆದರೆ ಗುಣ ಸಿಗಲಿಲ್ಲ. ಕೊನೆಗೆ ಅವರು ಸಂತ ಚರಣದಲ್ಲಿ ಮೃತ್ಯು ಬರಲಿ ಎಂದು

ಶ್ರೀಮಹಾರಾಜರ ಬಳಿಗೆ ಬಂದರು. ಶ್ರೀಮಹಾರಾಜರು ಅವರನ್ನೂ ತುಂಬು ಪ್ರೇಮದಿಂದ ಸ್ವಾಗತಿಸಿದರು, ಅವರಿಗೆ ಶ್ರೀರಾಮನಾಮದ ಜಪ ಮಾಡಲು ಹೇಳಿದರು, ಅವರಿಗೆ ಅವರು ಶ್ರೀರಾಮನ ತೀರ್ಥ ಕುಡಿಯಲು ಕೊಡುವುದು, ರಾಮಚರಣದಲ್ಲಿದ್ದ ತುಲಸೀ ಪತ್ರ ತಿನ್ನಲು ಕೊಡುತ್ತಿದ್ದರು. ಅವರ ಕುಷ್ಠದ ಗಾಯಗಳಿಗೆ ಭಸ್ಮ ಹಚ್ಚುವುದು, ತಮ್ಮ ಬಳಿ ಊಟಕ್ಕೆ ಕುಳ್ಳಿರಿಸಿಕೊಳ್ಳುತ್ತಿದ್ದರು, ಜನರು ಹೇಳುತ್ತಿದ್ದರು - ಮಹಾರಾಜ! ಇವರಿಗೆ ಮಹಾರೋಗವಿದೆ, ನೀವು ಇವರಲ್ಲಿ ಇಷ್ಟು ಆತ್ಮೀಯತೆ ತೋರಿದರೆ ಈ ಭಯಂಕರ ರೋಗದ ಬಾಧೆ ನಿಮಗೂ ಆದೀತು, ಇದು ಅತಿಶಯ ಸಂಸರ್ಗ ಜನ್ಯ ರೋಗವಾಗಿದೆ. ಶ್ರೀಮಹಾರಾಜರು ನಕ್ಕು ಉತ್ತರಿಸುತ್ತಿದ್ದರು - ಹೀಗೇನಿಲ್ಲ, ಎಲ್ಲರೂ ಇವರನ್ನು ದೂರ ಮಾಡಿದರೆ ಇವರಿಗೇನು ಅನಿಸೀತು?

ಒಮ್ಮೆ ಗೊಂದವಲೆಗೆ ಶ್ರೀಮಹಾರಾಜರ ಹತ್ತಿರ ಬಾಪೂಸಾಹೇಬ ಜತಕರ್ ಎಂಬ ಓರ್ವ ಗೃಹಸ್ಥರು ತಮ್ಮ ಮಂದಬುದ್ಧಿ ಮಗನನ್ನು ಕರೆದುಕೊಂಡು ಬಂದರು. ಅವನಿಗೆ ವಯಸ್ಸಾಗಿತ್ತು, ಆದರೆ ಅವನ ಬುದ್ಧಿ ಬೆಳೆದಿರಲಿಲ್ಲ. ಅವನ ಮೆದುಳಿನಲ್ಲಿ ದೋಷವಿತ್ತು . ಇಪ್ಪತ್ತೆರಡು ವರ್ಷವಾದರೂ ಅವನು ಮಂದಬುದ್ಧಿಯ ದಡ್ಡನಾಗಿದ್ದನು. ಅವನಿಗೆ ಏನೂ ತಿಳಿಯುತ್ತಿರಲಿಲ್ಲ. ಶ್ರೀಮಹಾರಾಜರು ಹೇಳಿದ ಉಪಾಯ ಮಾಡಲು ಜತಕರ್ ತಯಾರಿದ್ದರು. ತಮ್ಮ ಮಗನ ಮದುವೆಯನ್ನು ಮಹಾರಾಜರು ಮಾಡಬೇಕೆಂಬ ತೀವ್ರ ಇಚ್ಛೆ ಇತ್ತು. ಶ್ರೀಮಹಾರಾಜರು ಅವರಿಬ್ಬರಿಗೂ ನಾಮಸ್ಮರಣ ಮಾಡಲು ಹೇಳಿದರು. ಜತಕರ್ ಸ್ವತಃ ನಾಮಸ್ಮರಣ ಮಾಡ ತೊಡಗಿದರು ಮತ್ತು ಪ್ರಯತ್ನಪೂರ್ವಕ ಮಗನಿಂದಲೂ ನಾಮಸ್ಮರಣ ಮಾಡಿಸಲು ತೊಡಗಿದರು. ಆಗಾಗ ಅವರು ಶ್ರೀಮಹಾರಾಜರಲ್ಲಿ ಮಗನ ಮದುವೆಯ ವಿಷಯ ಕೇಳುತ್ತಿದ್ದರು. ಮಹಾರಾಜರು ಹೇಳಿದರು - ಲಗ್ನದ ಗಂಟು ಹಾಕುವವರು ನಾವು ಯಾರು? ಇದನ್ನು ಶ್ರೀರಾಮನೇ ಗಂಟು ಹಾಕುತ್ತಾನೆ. ಹೀಗೆ ಮಾಡುತ್ತಾ - ಮಾಡುತ್ತಾ ಒಂದು ವರ್ಷ ಕಳೆಯಿತು. ಕೊನೆಗೆ ಜತಕರ್ ಸಿಟ್ಟುಕೊಂಡರು, ಅವರು ತಮ್ಮ ಊರಿಗೆ ಹಿಂತಿರುಗಲು ತಯಾರಾದರು. ಅವರು ಮಹಾರಾಜರಲ್ಲಿ ಸಿಟ್ಟಿನಿಂದ ಹೇಳಿದರು - ನಾನು ನಿಮ್ಮ ಬಳಿ ಸತ್ಪುರುಷ, ಸಾಧೂ ಎಂದು ಬಂದಿದ್ದೆ, ನೀವು ಕೇವಲ ನಮಗೆ ಜಪ ಮಾಡಲು ಹಚ್ಚಿದಿರಿ, ವರ್ಷ ಕಳೆದು ಹೋದರೂ ಉಪಯೋಗ ಶೂನ್ಯ , ಮಗನ ಮದುವೆ ಆಗಲೇ ಇಲ್ಲ. ಶ್ರೀಮಹಾರಾಜರು ಶಾಂತವಾಗಿ ಹೇಳಿದರು - ಬಾಪೂಸಾಹೇಬ! ನಿಮ್ಮ ಮಗನ ಜೀವನದಲ್ಲಿ ವಿವಾಹಯೋಗವಿಲ್ಲ, ನೀವು ಅವನ ಮದುವೆಯ ಜಂಜಾಟದಲ್ಲಿ ಬೀಳಬೇಡಿ, ಅದರಿಂದ ಮದುವೆಯಾಗಿ ಬರುವ

ಹುಡುಗಿ, ಆಕೆಯ ಮನೆಯವರು ಯಾರೂ ಸುಖಿಯಾಗಲಾರರು. ನಿಮಗೂ ಆ ಮದುವೆಯ ಆನಂದ ಸಿಗಲಾರದು, ಅದರಿಂದ ದುಃಖವೇ ಉಡಿಯಲ್ಲಿ ಬಂದೀತು, ನೀವು ಈ ವಿಚಾರ ಬಿಟ್ಟುಬಿಡಿ. ಈ ಜನ್ಮದ ರಾಮನಾಮದ ಫಲ ಅವನಿಗೆ ಮುಂದಿನ ಜನ್ಮದಲ್ಲಿ ಸಿಗುವುದು. ಜತಕರ್‌ರ ಮನಸ್ಸಿಗೆ ಒಪ್ಪಿಗೆ ಆಯಿತು. ಅವರು ಮಧ್ಯಾಹ್ನ ಊಟ ಮಾಡಿ ತನ್ನ ಮಗನೊಂದಿಗೆ ತಮ್ಮ ಊರಿಗೆ ಹಿಂತಿರುಗಿದರು.

ವಿವಾಹದ ಯೋಗ ವಿಲಕ್ಷಣ ಚಮತ್ಕಾರಿಕವಾಗಿರುತ್ತವೆ. ಓರ್ವ ಗೋಪಾಳರಾವ ಎಂಬ ತರುಣ ವಿವಾಹಯೋಗ್ಯನಾದ. ಕನ್ಯೆ ಬೆಳ್ಳಗಿರಬೇಕಾಗಿತ್ತು, ಅವನಿಗೆ ಒಂದೇ ವಯಸ್ಸಿನ ಇಬ್ಬರು ಕನ್ಯೆಯರು ಕೂಡಿ ಬಂದರು, ಅದರಲ್ಲಿ ಗೋಪಾಳರಾವನು ಬೆಳ್ಳಗಿರುವವಳನ್ನು ಒಪ್ಪಿಕೊಂಡನು. ಆಶ್ಚರ್ಯವೆಂದರೆ ಆ ಇಬ್ಬರೂ ಕನ್ಯೆಯರ ಮದುವೆ ಒಂದೇ ಕಡೆ, ಒಂದೇ ಮಂಟಪದಲ್ಲಿ ಮಾಡಲು ನಿಶ್ಚಯವಾಯಿತು. ಇಬ್ಬರೂ ತಮ್ಮ ತಮ್ಮ ಭಾವೀ ಪತಿಗಳ ಎದುರಿಗೆ ಅಂತಃಪಟದ ಹಿಂದೆ ನಿಂತರು. ಇನ್ನೇನು ಮಂಗಳಾಷ್ಟಕ ಶುರು ಆಗುವುದು, ಅಷ್ಟರಲ್ಲಿ ಆ ಗದ್ದಲದಲ್ಲಿ ಶ್ರೀಮಹಾರಾಜರು ಲಗ್ನಮಂಟಪಕ್ಕೆ ಹೋಗಿ ಇಬ್ಬರೂ ಕನ್ಯೆಯರನ್ನು ಬದಲಾಯಿಸಿದರು. ಅಂತಃಪಟ ಸರಿಸಲಾಯಿತು, ಗೋಪಾಳರಾವನು ತನ್ನ ಪತ್ನಿಯನ್ನು ನೋಡಿದನು, ಅವನಿಗೆ ಭಾರೀ ಸಿಟ್ಟು ಬಂತು. ಈಗ ಉಪಯೋಗ ಇರಲಿಲ್ಲ, ಎಲ್ಲವೂ ಆಗಿ ಹೋಗಿತ್ತು, ಮುಂದೆ ನಾಲ್ಕು ತಿಂಗಳಲ್ಲಿ ಬಿಳಿಯ ಹುಡುಗಿಯ ಗಂಡನಿಗೆ ಅಕಸ್ಮಾತ್ ಮೃತ್ಯು ಬಂತು, ಈ ವಾರ್ತೆ ಕೇಳಿದಮೇಲೆ ಗೋಪಾಲರಾವನಿಗೆ ಶ್ರೀಮಹಾರಾಜರ ಕೃತಿಯ ಅರ್ಥ ತಿಳಿಯಿತು.

ಒಮ್ಮೆ ಬ್ರಹ್ಮಾನಂದ ಮಹಾರಾಜರು ಕರ್ನಾಟಕದಿಂದ ಬಹಳಷ್ಟು ಜನರನ್ನು ಕರೆದುಕೊಂಡು ಗೊಂದವರೆಗೆ ಬಂದರು. ದೀಪಾವಳಿಯ ಹಬ್ಬ ಇತ್ತು . ಈ ಹಬ್ಬಕ್ಕಾಗಿ ಇಷ್ಟು ಜನರು ತಮ್ಮಲ್ಲಿಗೆ ಬಂದರೆಂದು ಶ್ರೀಮಹಾರಾಜರಿಗೆ ಅತಿಶಯ ಆನಂದವಾಯಿತು. ದೀಪಾವಳಿಯ ಮೊದಲನೆಯದಿನ ಬೆಳಗಿನ ಝಾವ ಆ ಮಂಡಳಿಯು ಶ್ರೀಮಹಾರಾಜರಿಗೆ ಬಿಸಿ ನೀರಿನ ಅಭ್ಯಂಗ ಸ್ನಾನ ಮಾಡಿಸಿದರು. ಅಲ್ಲಿ ಮುಕ್ತಾಬಾಯಿ ನಿಂತಿದ್ದರು, ತಾನೂ ಮಹಾರಾಜರಿಗೆ ಸ್ನಾನ ಮಾಡಿಸಬೇಕೆಂಬ ಆಕೆಯ ಮನಸ್ಸಿಗೆ ಬಂತು. ಆಕೆಯ ಮನಸ್ಸಿನ ಭಾವ ತಿಳಿದು ಶ್ರೀಮಹಾರಾಜರು ಆಕೆಯನ್ನು ಕರೆದು, ಸ್ನಾನ ಹಾಕಲು ಹೇಳಿದರು. ಅವಳಿಗೆ ಪರಮಾನಂದವಾಯಿತು. ಆಕೆಯೂ ಅತ್ತರ್, ಸುವಾಸಿಕ ಎಣ್ಣೆ ಹಚ್ಚಿ ಅವರಿಗೆ ಸ್ನಾನ ಮಾಡಿಸಿದಳು. ಸ್ನಾನಾನಂತರ ಶ್ರೀರಾಮಪೂಜೆ ಆಯಿತು, ನೈವೇದ್ಯ ಮಾಡಿ ಎಲ್ಲ ಜನರು ಫಲಾಹಾರಕ್ಕೆ ಕುಳಿತರು.

ಹಬ್ಬ ಆಚರಿಸಲು ಎಲ್ಲ ಮಕ್ಕಳು-ಮರಿಗಳು ಮನೆಗೆ ಬಂದು, ತಿಂಡಿಯ ಆನಂದ ಪಡೆದರೆ ಅಪ್ಪನಿಗೆ ಹೇಗೆ ಸಮಾಧಾನ ಸಿಗುತ್ತದೋ, ಅತೀವ ಆನಂದವಾಗುತ್ತದೋ, ಅದೇ ಭಾವ ಮಹಾರಾಜರ ಮನಸ್ಸಿಗೆ ಬಂತು, ಅವರ ಕಣ್ಣುಗಳಿಂದ ಆನಂದಾಶ್ರುಗಳು ಹರಿದವು.

ಗೊಂದವಲೆಗೆ ಬರುವ ಪ್ರತಿಯೊಬ್ಬನಿಗೂ ಶ್ರೀಮಹಾರಾಜರು ಮಿತಿಮೀರಿ ಪ್ರೀತಿಸುತ್ತಿದ್ದರು. ಆದರೆ ಅವರಿಗೆ ಕಪಟ, ಡೊಂಗಿತನ ಮೆಚ್ಚುತ್ತಿರಲಿಲ್ಲ. ಹಿಂದೆ ಗೊಂದವಲೆಯಲ್ಲಿ ಓರ್ವ ಅಡಿಗೆಯವಳಿದ್ದಳು, ಆಕೆಯೊಂದಿಗೆ ಅವಳ ಸಣ್ಣ ಮಗ ಇದ್ದ. ಮುಂದೆ ಆ ಮಗ ದೊಡ್ಡವನಾದ, ತನ್ನ ಊರಿಗೆ ಹೋದ. ಅಲ್ಲಿ ಅವನು ಬುವಾ ಆದನು. ಸ್ತ್ರೀ-ಪುರುಷರಿಗೆ ಅವನು ಉಪದೇಶ ಕೊಡಲು ತೊಡಗಿದ, ಈ ಸುದ್ದಿ ಶ್ರೀಮಹಾರಾಜರ ಕಿವಿಗೂ ಬಿತ್ತು. ಅವರಿಗೆ ಆ ಸಂಗತಿ ಮೆಚ್ಚಿಗೆ ಆಗಲಿಲ್ಲ. ಮುಂದೆ ಅವನು ತನ್ನ ಸ್ತ್ರೀ-ಪುರುಷ ಶಿಷ್ಯಗಣಗಳೊಂದಿಗೆ ಒಂದು ದಿನ ಗೊಂದವಲೆಗೆ ಬಂದನು. ಅವನು ಅವರಿಗೆ ಹೇಳಿದ-ನಾನು ಸಮರ್ಥರಾಮದಾಸರ ಪಂಥವನ್ನು ಮುಂದುವರಿಸುತ್ತಿದ್ದೇನೆ. ಶ್ರೀಮಹಾರಾಜರ ಸಿಟ್ಟು ಮೇರೆ ಮೀರಿತು, ಅವರು ಅವನ ಕಪಾಳಕ್ಕೆ ಹೊಡೆದು ಹೇಳಿದರು - ಆಧ್ಯಾತ್ಮವು ಹೊಟ್ಟೆ ತುಂಬಿಸಿಕೊಳ್ಳುವ ಕೆಲಸವಲ್ಲ. ಹೊಟ್ಟೆ ತಿಂಬಿಸಿಕೊಳ್ಳಲು, ಸಂಸಾರ ನಡೆಸಲು ಕಷ್ಟದಿಂದ ಧನ ಗಳಿಸಬೇಕು. ಗೃಹಸ್ಥನು ಸಂಸಾರದ ಕರ್ತವ್ಯ ಕರ್ಮಗಳನ್ನು ಮಾಡುತ್ತಿರುವಾಗ ದೇವರ ನಾಮಸ್ಮರಣ ಮಾಡಬೇಕು. ಈ ನಿನ್ನ ಶಿಷ್ಯರಿಗೆ ತಮ್ಮ-ತಮ್ಮ ಮನೆಗೆ ಹಿಂದಕ್ಕೆ ಕಳಿಸು. ಪುನಃ ಇಂತಹ ಪಾಪ ಮಾಡಬೇಡ.

ಅವನೂ ಎಲ್ಲ ಶಿಷ್ಯರನ್ನು ಹಿಂದಕ್ಕೆ ಕಳಿಸಿ, ಸನ್ಮಾರ್ಗಕ್ಕೆ ತೊಡಗಿದ.

□□

-: ಮೂವತ್ತಾರು :-

# ಭಕ್ತಕೈವಾರೀ ಶ್ರೀರಾಮ

ಗಣೂಬುವಾ ರಾಮದಾಸಿ ಎಂಬ ಗೃಹಸ್ಥರು ಶ್ರೀರಾಮನ ಪರಮಭಕ್ತರಾಗಿದ್ದರು. 1895ರ ಸುಮಾರಿಗೆ ಅವರು ಶ್ರೀಮಹಾರಾಜರ ದರ್ಶನಕ್ಕೆ ಬಂದರು. ಅವರು ಉಪದೇಶ ಪಡೆದು, ಶ್ರೀಮಹಾರಾಜರ ಉಪದೇಶದಂತೆ ಅವರು ತಮ್ಮ ಊರು ಕಾಗವಾಡದ ತಮ್ಮ ಮನೆಯಲ್ಲೇ ಶ್ರೀರಾಮಮೂರ್ತಿ ಸ್ಥಾಪಿಸಿದರು. ಪ್ರಪಂಚದಲ್ಲಿ ಇದ್ದರೂ ಅವರು ಸಂಸಾರದಲ್ಲಿ ಲಿಪ್ತರಾಗಿರಲಿಲ್ಲ. ಶ್ರೀರಾಮನಪೂಜೆ ಮಾಡುವುದು, ನಾಮಸ್ಮರಣೆ ಮಾಡುವುದು, ಇದರಲ್ಲೇ ಅವರ ಮನಸ್ಸು ಹೆಚ್ಚು ರಮಿಸುತ್ತಿತ್ತು. ಅವರು ಯಾವಾಗಲೂ ಗೊಂದವಲೆಗೆ ಶ್ರೀಮಹಾರಾಜರ ಬೇಟಿಗೆ ಬರುತ್ತಿದ್ದರು. ಒಮ್ಮೆ ಅವರ ಮನೆಯಲ್ಲಿನ ಶ್ರೀರಾಮನ ಎದುರಿನ ಹನುಮಂತನ ಮೂರ್ತಿ ಭಂಗವಾಯಿತು. ಅವರು ಶ್ರೀಮಹಾರಾಜರಿಗೆ ಕಾಗವಾಡಕ್ಕೆ ಬಂದು ಹೊಸ ಹನುಮಂತನ ಮೂರ್ತಿಯನ್ನು ಸ್ಥಾಪಿಸ ಬೇಕೆಂದು ವಿನಂತಿಸಿದರು. ಶ್ರೀಮಹಾರಾಜರು ಇದಕ್ಕೆ ಒಪ್ಪಿದರು. ಎರಡು ತಿಂಗಳು ಅವರಿಗೆ ಕಾಗವಾಡಕ್ಕೆ ಹೋಗಲಾಗಲಿಲ್ಲ. ಗಣೂಬುವಾ ಶ್ರೀಮಹಾರಾಜರನ್ನು ಪ್ರತೀಕ್ಷೆ ಮಾಡುತ್ತಾ ನಿರಾಶರಾದರು. ಬಳಿಕ ಅವರು ಉಪವಾಸ ಮಾಡಲು ಪ್ರಾರಂಭಿಸಿದರು. ಬಹಳಷ್ಟು ಉಪವಾಸ ಮಾಡಿದ ಬಳಿಕ ಅವರು ಗೊಂದವಲೆಗೆ ಬಂದರು. ಮಹಾರಾಜರು ಅವರಿಗೆ ಹೇಳಿದರು – ಗಣೂಬುವಾ! ಹೀಗೆ ಉಪವಾಸ ಮಾಡಿ ದೇಹಕ್ಕೆ ಕಷ್ಟ ಕೊಡಬೇಡಿ, ನೀವು ನಿಮ್ಮ ಮನಸ್ಸನ್ನು ಶೋಧಿಸಿರಿ, ಅಂತರ್ಮುಖರಾಗಿ ವಿಚಾರ ಮಾಡಿ, ಮುಂದಿನ ದಶಮಿಗೆ ನಾನು ಕಾಗವಾಡಕ್ಕೆ ಬರುವೆನು. ಗಣೂಬುವಾ ಕಾಗವಾಡಕ್ಕೆ ಹಿಂದಿರುಗಿದರು. ದಶಮಿಗೆ ಮೊದಲು ಹನುಮಂತಮೂರ್ತಿಯ ಸ್ಥಾಪನೆಗೆ ಚೆನ್ನಾಗಿ ತಯಾರಿ ಮಾಡಿದರು. ಮಹಾರಾಜರು ಮನೆಗೆ ಬರುವರು ಎಂಬ ಸೂಕ್ಷ್ಮ ಅಹಂಕಾರ ಗಣುಬುವಾರವರಲ್ಲಿ ಉಂಟಾಗಿತ್ತು.

ಶ್ರೀಮಹಾರಾಜರು ದಶಮಿಗೆ ಕಾಗವಾಡಕ್ಕೆ ಹೋಗಲಿಲ್ಲ. ಗಣೂಬುವಾ ನಿರಾಶರಾದರು. ಅವರು ಪುನಃ ಉಪವಾಸ ಪ್ರಾರಂಭಿಸಿದರು.

ಶ್ರೀಮಹಾರಾಜರು ಮೀರಜಗೆ ಕಾಕಾ ಫಡಕೆಯವರಲ್ಲಿಗೆ ಹೋದರು. ಅಲ್ಲಿ ಮಹಾರಾಜರ ದರ್ಶನಕ್ಕಾಗಿ ಅನೇಕ ಜನ ಸೇರಿದರು, ಬುಕ್ಕಾ, ಗುಲಾಲ, ಹಾರಗಳು, ಹೂವುಗಳ ರಾಶಿಯಾಯಿತು, ತೆಂಗಿನಕಾಯಿ, ಸಕ್ಕರೆ, ಕಡ್ಲೆ, ಪುಟಾಣಿಗಳಿಂದ ಡಬ್ಬಿಗಳು ತುಂಬಿ ಹೋದುವು. ಮಹಾರಾಜರು ಈ ತಿನ್ನುವ ಪದಾರ್ಥಗಳನ್ನು ಅಲ್ಲೇ ಹಂಚಿಬಿಟ್ಟರು. ಈ ವಸ್ತುಗಳಂತೆ ತುಂಬಾ ಹಣವೂ ಜಮೆ ಆಯಿತು. ಮೂರು ಸಾವಿರ ರೂಪಾಯಿ ಒಟ್ಟಾಯಿತು. ಶ್ರೀಮಹಾರಾಜರಿಗೆ ಒಂದು ಕಾಸಿನ ಮೋಹವೂ ಇರಲಿಲ್ಲ. ಅವರು ಮೀರಜನಲ್ಲಿ ಊರ ಸಂತರ್ಪಣೆ ಮಾಡಿದರು. ಎಲ್ಲ ಜಾತಿಯ ಮುತ್ತೈದೆಯರಿಗೆ ಊಟ ಹಾಕಿ ಒಂದೊಂದು ಸೀರೆ ಕೊಟ್ಟರು. ಇದಕ್ಕೆ ಎರಡು ಸಾವಿರ ರೂಪಾಯಿ ಖರ್ಚಾಯಿತು. ಈಗ ಒಂದು ಸಾವಿರ ರೂಪಾಯಿ ಉಳಿಯಿತು. ಊರಿನಲ್ಲಿದ್ದ ಬಡ ಬಗ್ಗರಿಗೆ ಕರೆಸಿ, ಗೋದಿ ಪಾಯಸ ಹಂಚಿ, ಪ್ರತಿಯೊಬ್ಬನಿಗೆ ಒಂದು ರೂಪಾಯಿ ದಕ್ಷಿಣೆ ಕೊಟ್ಟರು. ಇದರಲ್ಲಿ ಒಂದು ಸಾವಿರ ಖರ್ಚಾಗಿ, ಮೀರಜಿನಲ್ಲಿ ಸಿಕ್ಕಿರುವ ಧನ ಮೀರಜಿನಲ್ಲೇ ಖರ್ಚು ಮಾಡಿದರು.

ಕಾಗವಾಡದಲ್ಲಿ ಗಣೂಬುವಾರವರ ಉಪೋಷಣ ನಡೆದೇ ಇತ್ತು . ಶ್ರೀಮಹಾರಾಜರು ಹನುಮಂತ ಮೂರ್ತಿ ಸ್ಥಾಪನೆಗೆ ಬರುವುದಿಲ್ಲ ಎಂದು ತಿಳಿದು ಅವರು ವಿಷ ಕುಡಿದು ಜೀವನ ಮುಗಿಸಿಬಿಡುವ ನಿರ್ಣಯಕ್ಕೆ ಬಂದರು. ಶ್ರೀಮಹಾರಾಜರು ಅವರ ಮನಸ್ಸಿನ ವಿಷಯ ಅಂತರ್ಜ್ಞಾನದಿಂದ ತಿಳಿದರು. ಅವರು ಅಂತಾಜೀಪಂತ ಮತ್ತು ವ್ಯಂಕಟರಣಭಟ್ಟ ಇವರನ್ನು ತ್ವರಿತವಾಗಿ ಕಾಗವಾಡಕ್ಕೆ ಕಳಿಸಿದರು. ಇತ್ತ ತಾಮ್ರದ ಒಂದು ಚೊಂಬಿನಲ್ಲಿ ಗಣುಬುವಾರವರು ಸೋಮಲ ಎಂಬ ವಿಷ ಕಲಿಸಿ ಇಟ್ಟರು. ಶ್ರೀರಾಮನಾಮದ ಜಪ ಮಾಡುತ್ತಾ ಒಂದು ಮಾಲೆ ಜಪ ಮಾಡಿದರು. 'ಓವಾಳು ಆರತೀ ಸದ್ಗುರು ಚೈತನ್ಯಬ್ರಹ್ಮಾ' ಈ ಮಾರಾಜರದ ಆರತೀ ಹಾಡಿದರು, ಮನಸ್ಸಿನಲ್ಲೇ ನಮಸ್ಕರಿಸಿದರು. ವಿಷ ಪ್ರಾಶನ ಮಾಡಲು ಬುವಾರವರು ಪಾತ್ರೆ ಎತ್ತಿದರು, ಅಷ್ಟರಲ್ಲಿ 'ಗಣೂಬುವಾ! ಶ್ರೀಮಹಾರಾಜರು ಬಂದರು' ಎಂಬ ಮಾತು ಕೇಳಿತು. ಗಣೂಬುವಾ ಪಾತ್ರೆ ಕೆಳಗಿಟ್ಟರು. ಓಡಿ ಕೆಳಗೆ ಬಂದರು. ವ್ಯಂಕಣ್ಣಭಟ್ಟ ಮತ್ತು ಅಂತಾಜೀಪಂತರನ್ನು ನೋಡಿ ಗಣೂಬುವಾರವರಿಗೆ ಕಂಠ ಉಮ್ಮಳಿಸಿ ಬಂತು. ಶ್ರೀಮಹಾರಾಜರು ತಮ್ಮ ಭಕ್ತರ ಜೀವನಕ್ಕಿಂತ ಹೆಚ್ಚು ಚಿಂತೆ ಮಾಡುತ್ತಾರೆ. ವ್ಯಂಕಣ್ಣ

ಭಟ್ಟರು ಆ ಪಾತ್ರೆಯ ವಿಷ ತಿಪ್ಪೆಗೆಸೆದರು. 'ಶ್ರೀಮಹಾರಾಜರು ನಾಳೆಯೇ ಬರುತ್ತಿದ್ದಾರೆ' ಈ ಸುದ್ದಿ ಗಣೂಬುವಾರವರಿಗೆ ತಿಳಿಸಿದರು.

ಇತ್ತ ಶ್ರೀಮಹಾರಾಜರು ಕಾಗವಾಡಕ್ಕೆ ಬಂದರು, ಸ್ವಾಗತಕ್ಕಾಗಿ ರಸ್ತೆಯ ಇಕ್ಕೆಲಗಳಲ್ಲಿ ಸಾರಿಸಿ ರಂಗೋಲಿ ಹಾಕಿದ್ದರು, ಶ್ರೀಮಹಾರಾಜರ ಆಗಮನವಾಯಿತು. ಗಣುಬುವಾ ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ವಾದ್ಯ ಘೋಷದೊಂದಿಗೆ ಮಹಾರಾಜರು ಹೊರಟರು. ಭಜನಾ ಮಂಡಳಿ ಟಾಳ-ವೀಣಾ-ಮೃದಂಗದೊಂದಿಗೆ ಭಜನೆ ಹಾಡುತ್ತಿದ್ದರು. ಮಹಾರಾಜರಿಗೆ ಮುತ್ತೈದೆಯರು ಆರತಿ ಬೆಳಗಿದರು. ಆಷಾಢ ಶುದ್ಧ ಪಂಚಮಿ ಬುಧವಾರ ಬೆಳಿಗ್ಗೆ ಅವರು ಮಾರುತಿ ಮೂರ್ತಿಯ ಪ್ರತಿಷ್ಠಾಪನೆ ಮಾಡಿದರು.

ಸಂತಾಬಾಯಿ ಎಂಬ ಓರ್ವ ಕಸ ಹೊಡೆಯುವ ಅಂತ್ಯಜ ವೃದ್ಧ ಸ್ತ್ರೀಯಿದ್ದಳು. ಅವಳು ಗಣೂಬುವಾರವರಲ್ಲಿ 'ಮಹಾರಾಜರು ಯಾವಾಗ ಬರುತ್ತಾರೆ?' ಎಂದು ಯಾವಾಗಲೂ ಕೇಳುತ್ತಿದ್ದಳು. ಒಂದು ದಿನ ಗಣೂಬುವಾರವರು ಆಕೆಯನ್ನು ಸಹಜವಾಗಿ ಕೇಳಿದರು – ಅಜ್ಜೀ! ಮಹಾರಾಜರಲ್ಲಿ ಏನು ಬೇಡುವೆ? ನಿಜವಾಗಿ ಸಂತಾಬಾಯಿಯು ಮಹಾರಾಜರನ್ನು ಕಂಡೇ ಇರಲಿಲ್ಲ. ಅವಳೆಂದರು – ಇನ್ನೇನು ಬೇಡುವುದು? ಸಾವನ್ನೇ ಬೇಡುವೆನು, ಪುನಃ ಈ ಜನ್ಮ-ಮರಣದ ಝುಂಜಾಟವೇ ಬೇಡ! ಆಕೆಯು ಸ್ವಲ್ಪ ಹಣ ಕೂಟಡಿಟ್ಟಿದ್ದಳು, ಆ ಹಣವನು ಆಕೆ ಪಕ್ಕದ ಮನೆಯವರಲ್ಲಿ ಕೊಟ್ಟು ಹೇಳಿದಳು – ಈ ಹಣದಲ್ಲಿ ನಾನು ಸತ್ತಮೇಲೆ ಸಂತರ್ಪಣೆ ಮಾಡಿರಿ. ಅವಳೂ ಶ್ರೀಮಹಾರಾಜರ ದರ್ಶನಕ್ಕೆ ಬಂದಳು. ಆಕೆಯನ್ನು ಮಹಾರಾಜರು ಪ್ರೇಮದಿಂದ ಕೇಳಿದರು – ಅಮ್ಮಾ! ಏನು ಇಚ್ಛೆ ಇದೆ? ಕೈಮುಗಿದು ಅವಳೆಂದಳು – ಈಗ ಯಾವ ಇಚ್ಛೆಯೂ ಇಲ್ಲ, ಈ ಜನ್ಮದಲ್ಲಿ ಬಹಳಷ್ಟು ಅನುಭವಿಸಿದೆ, ಇನ್ನು ಇದರಿಂದ ಬಿಡಿಸಿರಿ. ಸ್ವತಃ ಶ್ರೀಮಹಾರಾಜರು ಆಕೆಗೆ ತೀರ್ಥ ಪ್ರಸಾದ ಕೊಟ್ಟರು. ಅವಳು ಮನೆಗೆ ಹೋದಳು. ಅದೇ ದಿನ ಅಕ್ಕ-ಪಕ್ಕದ ಮನೆಯವರನ್ನು ಬೀಳ್ಕೊಂಡು ರಾಮ-ರಾಮ-ರಾಮ ಹೀಗೆ ಮೂರು ಬಾರಿ ಹೇಳಿ ಜಗತ್ತನ್ನೇ ಬಿಟ್ಟು ಹೋದಳು. ಸಂತಾಬಾಯಿಯು ಹೋದುದು ಶ್ರೀಮಹಾರಾಜರಿಗೆ ತಿಳಿಯಿತು, ಅವರು ಉದ್ಗರಿಸಿದರು – ಅವಳು ರಾಮನ ಪರಮಭಕ್ತಳಾಗಿದ್ದಳು. ಆಕೆಗೆ ಮುಕ್ತಿ ಲಭಿಸಿತು, ಆಕೆಯ ಉತ್ತರ ಕ್ರಿಯೆ ಚೆನ್ನಾಗಿ ಮಾಡಿರಿ. ಅವರು ಉತ್ತರ ಕ್ರಿಯೆಗಾಗಿ ಐವತ್ತು ರೂಪಾಯಿ ತೆಗೆದು ಕೊಟ್ಟರು ಮತ್ತು ಅವಳ ಹೆಸರಲ್ಲಿ ಸಾಕಷ್ಟು ಅನ್ನದಾನ ಮಾಡಿದರು.

ಗಣೂಬುವಾರವರ ರಾಮ ಮಂದಿರದ ಹತ್ತಿರ ಒಂದು ಬಾವಿ ಇತ್ತು. ಅದರ ನೀರು ಸವಳು ಇದ್ದದ್ದರಿಂದ ಅದು ನಿರುಪಯೋಗಿಯಾಗಿತ್ತು. ಉತ್ಸವದ ಸಂದರ್ಭ ನೀರಿನ ತುಂಬಾ ತೊಂದರೆ ಆಗುತ್ತಿತ್ತು. ಈ ಸಂಗತಿ ಶ್ರೀಮಹಾರಾಜರಿಗೆ ತಿಳಿಯಿತು. ಶ್ರೀಮಹಾರಾಜರು ಗಣೂಬುವಾರವರಿಗೆ ಹೇಳಿದರು – 'ಉತ್ಸವದ ಸಮಯ ಈ ನೀರನ್ನು ಅಡಿಗೆಗಾಗಿ ಉಪಯೋಗಿಸಿ, ಶ್ರೀರಾಮನು ಆ ನೀರನ್ನು ಸಿಹಿಯಾಗಿಸುವನು. ಅದೇ ದಿನ ಒಬ್ಬ ಗೋಸಾವಿ ಅಲ್ಲಿಗೆ ಬಂದರು. ಅವನ ಹೆಗಲಲ್ಲಿ ನೀರಿನ ಕಾವಡಿ ಇತ್ತು. ಅವನು ಆ ಕಾವಡಿಯನ್ನು ಶ್ರೀಮಹಾರಾಜರ ಚರಣಗಳಲ್ಲಿ ಅರ್ಪಿಸಿ ಹೇಳಿದನು – ''ಮೈ ಮಹಾದೇವಜೀಕಾ ಭಕ್ತಹೂಂ ಯೇ ಕಾಶಿಕೀ ಗಂಗಾ ಹೈ' ರಾಮೇಶ್ವರ ಲೇ ಜಾರಹಾಹೂ। ಕಲ ರಾತ ಸಪನೆಮೇ ಮಹಾದೇವಜೀ ಆಯೆ। ಉನ್ಹೋನೇ ಮುಝೀ ಆಜ್ಞಾದೀ ಕೀ ತೂ ಕಾಗವಾಡ ಜಾ ಬ್ರಹ್ಮಚೈತನ್ಯಕೋ ಗಂಗಾ ದೋ ವಹ ಮುಝೀ ಮಿಲೇಗೀ!'' ಶ್ರೀಮಹಾರಾಜರು ಆ ಗೋಸಾವಿಯನ್ನು ಪ್ರೇಮದಿಂದ ಆಲಿಂಗಿಸಿದರು. ಕಾವಡಿಯಲ್ಲಿದ್ದ ಗಂಗೆಯನ್ನು ಆ ಉಪ್ಪುನೀರು ಬಾವಿಗೆ ಸುರಿದರು. ಅಂದಿನಿಂದ ಆ ಬಾವಿಯ ನೀರು ಸಿಹಿ ಮತ್ತು ಗುಣಕಾರೀ ಆಯಿತು.

ಮುರಾರಜೀ ಎಂಬ ಒಬ್ಬ ಭಾಟಿಯಾ ಗೃಹಸ್ಥರಿದ್ದರು. ಅವರ ಬಟ್ಟೆಯ ಗಿರಣಿ ಕಾಗವಾಡದಲ್ಲಿ ಇತ್ತು. ಭಾರೀ ಧನಕನಕ ಸಂಪನ್ನರಾಗಿದ್ದರು. ಆದರೆ ಮಕ್ಕಳಿಲ್ಲದೆ ದುಃಖಿಯಾಗಿದ್ದರು. ಅವರು ಶ್ರೀಮಹಾರಾಜರನ್ನು ತಮ್ಮ ಬಟ್ಟೆಮಿಲ್ಲನ್ನು ನೋಡಲು ಬರಬೇಕೆಂದು ಆಗ್ರಹದಿಂದ ಆಮಂತ್ರಣ ಕೊಟ್ಟನು. ಮಹಾರಾಜರು ಆಮಂತ್ರಣ ಸ್ವೀಕರಿಸಿದರು. ಆದರೆ ಅವನು ಇಡೀ ಊರಿಗೆ ಖೀರುಪೂರಿಯ ಊಟ ಹಾಕಲು ಷರತ್ತು ಹಾಕಿದರು. ಮುರಾರಜೀಯವರು ಆ ಷರತ್ತನ್ನು ಒಪ್ಪಿಕೊಂಡನು. ಅವರು ಶ್ರೀಮಹಾರಾಜರು ಗಿರಣಿಗೆ ಭೆಟ್ಟಿಕೊಟ್ಟ ಬಳಿಕ ಪೂರಿ ಪಾಯಸದ ಊಟ ಊರಿಗೆ ಹಾಕಿದನು. ಮಹಾರಾಜರಿಗೆ ಸಂತೋಷವಾಗಿ ಹೇಳಿದರು – ಚೆನ್ನಾಯಿತು, ಅನ್ನದಾನ ಅಮೂಲ್ಯವಾಗಿರುತ್ತದೆ. ಹೇಳಿ, ನಿಮಗೇನು ಇಚ್ಛೆ ಇದೆ? ಮುರಾರಜೀ ಕೈ ಮುಗಿದು ಹೇಳಿದರು – ಧನವಿದೆ, ವೈಭವವಿದೆ ಆದರೆ ಸಂತತಿ ಇಲ್ಲ. ಪುತ್ರನಾಗಬೇಕೆಂಬ ಇಚ್ಛೆ ಇದೆ. ಮಹಾರಾಜರು ಹೇಳಿದರು – ಶ್ರೀರಾಮಕೃಪೆಯಿಂದ ಪುತ್ರಪ್ರಾಪ್ತಿ ಆಗುವುದು, ಪತಿ–ಪತ್ನೀ ನೀವಿಬ್ಬರೂ ಶ್ರೀರಾಮನಾಮದ ಮೂರೂವರೆ ಕೋಟಿ ಜಪ ಮಾಡಬೇಕು. ಅದರಂತೆ ಅವರು ಪರಮಶ್ರದ್ಧೆಯಿಂದ ಆ ಸಂಕಲ್ಪವನ್ನು ಪೂರ್ಣ ಗೊಳಿಸಿದರು, ಅವರಿಗೆ ಪುತ್ರ ಪ್ರಾಪ್ತಿಯಾಯಿತು.

ಉಗಾರದ ಇಬ್ಬರು ತರುಣರು ಶ್ರೀಮಹಾರಾಜರನ್ನು ಕರೆದುಕೊಂಡು ಹೋಗಲು ಬಂದರು. ಶ್ರೀಮಹಾರಾಜರು ಜೊತೆಯಲ್ಲಿ ಬಂದ ಜನರನ್ನು ಮುಂದೆ ಕಳಿಸಿದರು. ಮರುದಿನ ಕಾಗವಾಡದ ಮಂಡಳನ್ನು ಬೀಳ್ಕೊಂಡು ಅವರು ಗಣಪತಿರಾವ ದಾಮಲೆಯೊಂದಿಗೆ ಮೇಣೆಯಲ್ಲಿ ಕುಳಿತುಕೊಂಡು ಉಗಾರದ ಕಡೆಗೆ ಹೊರಟರು. ಎರಡು ಮೈಲು ಹೋದಾಗ ಅವರಿಗೆ ಒಂದು ಟಾಂಗಾ ಸಿಕ್ಕಿತು, ಬೆಳಗಾವಿಯ ಪ್ರಸಿದ್ಧ ವಕೀಲ ಮೋರೋಪಂತ ಮರಾಠೆ ಮತ್ತು ಅವರ ಮಿತ್ರರು ಶ್ರೀಮಹಾರಾಜರ ದರ್ಶನಕ್ಕಾಗಿ ಬಂದಿದ್ದರು. ಶ್ರೀಮಹಾರಾಜರು ಮೇಣೆಯನ್ನು ನಿಲ್ಲಿಸಿ, ಕೆಳಗೆ ಇಳಿದರು. ಮಹಾರಾಜರು ಕೇಳಿದರು – ಗಣಪತರಾವ! ನೀವು ಬೆಳಗಾವಿಯಿಂದ ಯಾವಾಗ ಹೊರಟಿರಿ? ಗಣಪತಿರಾವ ಮತ್ತು ಅವರ ಮಿತ್ರರು ಶ್ರೀಮಹಾರಾಜರ ಚರಣವಂದನೆ ಮಾಡಿದರು. ಮರಾಠೇ ಹೇಳಿದರು – ನಿಮ್ಮನ್ನು ಭೆಟ್ಟಿಯಾಗಲು ಎರಡು ದಿನಗಳಿಂದ ತಿರುಗಾಡುತ್ತೇವೆ. ಕೊನೆಗೆ ನೀವು ಉಗಾರಕ್ಕೆ ಹೋಗುತ್ತಿದ್ದೀರೆಂದು ಕಾಗವಾಡದಲ್ಲಿ ತಿಳಿಯಿತು. ಹಾಗೆಯೇ ಹೊರಟೆವು, ಹೊಟ್ಟೆಯಲ್ಲಿ ಅನ್ನದ ಅಗಳು ಇಲ್ಲ, ಶ್ರೀಮಹಾರಾಜರಿಗೆ ಬಹಳ ದುಃಖವಾಯಿತು. ಹೀಗೆ ಹೇಗೆ ನೀವು? ಪ್ರವಾಸಕ್ಕೆ ಹೊರಟಾಗ ಜೊತೆಗೆ ಬುತ್ತಿ ತೆಗೆದುಕೊಳ್ಳಬೇಕು. ಹೀಗೆ ಸಂವಾದ ನಡೆಯುತ್ತಿರುವಾಗ ಒಬ್ಬ ಗೃಹಸ್ಥ ಅಲ್ಲಿಗೆ ಬಂದ, ಅವನ ತಲೆಯ ಮೇಲೆ ದೊಡ್ಡ ಬುಟ್ಟಿಯಿತ್ತು . ಬಂದವನೇ ಅವನು ಬುಟ್ಟಿ ಕೆಳಗಿಟ್ಟು, ಶ್ರೀಮಹಾರಾಜರ ಚರಣಗಳಲ್ಲಿ ಶಿರಚಾಚಿದನು. ಅವನು ಹೇಳಿದನು – ನಿಮ್ಮ ದರ್ಶನವಾಯಿತು, ನಾನು ತೃಪ್ತನಾದೆ. ನಿಮಗೆ ದೀಪಾವಳಿಯ ಫಲಹಾರ ಕೊಡುವು ಇಚ್ಛೆ ಇತ್ತು , ನೀವು ಕಾಗವಾಡದಲ್ಲಿದ್ದೀರಿ ಎಂದು ತಿಳಿಯಿತು, ಅದರಿಂದ ನಾನು ಅಲ್ಲಿಗೆ ಹೋದೆ, ನೀವು ಮೇಣೆಯಿಂದ ಈಗತಾನೇ ಉಗಾರಿಗೆ ಹೋದರು ಎಂದು ಅಲ್ಲಿ ತಿಳಿಯಿತು. ಅವಸರ – ಅವಸರದಿಂದ ನಾನು ಬಂದೆ ಮತ್ತು ರಾಮ ಒಲಿದ ಎಂದು ಕೈಮುಗಿದ. ಶ್ರೀಮಹಾರಾಜರು ಮರಾಠೆ, ಅವರ ಮಿತ್ರ , ಉಗಾರದ ಇಬ್ಬರು ತರುಣರು ಎಲ್ಲರಿಗೆ ಆ ಫಲಹಾರದ ವಸ್ತುಗಳನ್ನು ಪ್ರೇಮದಿಂದ ತಿನ್ನಲು ಕೊಟ್ಟರು, ಸ್ವತಃ ತಾನೂ ಸ್ವಲ್ಪ ಫಲಹಾರ ಸ್ವೀಕರಿಸಿದರು. ತಿಂಡಿ ಆಯಿತು, ಈಗ ಕುಡಿಯಲಿಕ್ಕೆ ನೀರು ಬೇಕು, ಶ್ರೀಮಹಾರಾಜರು ನೀರೆಲ್ಲಿದೆ ಎಂದು ಅತ್ತ-ಇತ್ತ ನೋಡತೊಡಗಿದರು. ಅಷ್ಟರಲ್ಲಿ ಓರ್ವ ಮನುಷ್ಯ ತಲೆಯ ಮೇಲೆ ಕೊಡ ಎತ್ತಿಕೊಂಡು ಅಲ್ಲಿಗೆ ಬಂದನು, ಕೊಡ ಕೆಳಗಿಟ್ಟು ಅವನು ಶ್ರೀಮಹಾರಾಜರ ಕಾಲುಗಳಲ್ಲಿ ತಲೆಯನ್ನಿಟ್ಟನು. ಕೈಮುಗಿದು ಅವನು ಹೇಳಿದ – ಮಹಾರಾಜ! ನಿಮ್ಮ ಚರಣಗಳಲ್ಲಿ

ಅರ್ಪಿಸಲು ಈ ಗಂಗೆಯನ್ನು ತಂದಿರುವೆ, ದಯಮಾಡಿ ಸ್ವೀಕರಿಸಬೇಕು. ಮಹಾರಾಜರು ಹೇಳಿದರು - ನೋಡಿ, ಶ್ರೀರಾಮನು ಎಷ್ಟು ಭಕ್ತಾಭಿಮಾನಿಯಾಗಿದ್ದಾನೆ. ಅವನೇ ನಮಗೆ ಫಲಹಾರದ ಮತ್ತು ನೀರಿನ ವ್ಯವಸ್ಥೆ ಮಾಡಿದನು, ಹೇಳಿ, ಶ್ರೀರಾಮ ಜಯ ರಾಮ ಜಯ ಜಯ ರಾಮ'.

□□

-: ಮೂವತ್ತೇಳು :-

# ರಾಮಭಕ್ತರೇ ಆಪ್ತರು

ಮೋರೋಪಂತ ಮರಾಠೆ ಅತಿಶಯ ಜಾಣ ವಕೀಲರು. ಬೆಳಗಾವಿಯಲ್ಲಿ ಅವರ ವಕೀಲಿ ಚೆನ್ನಾಗಿತ್ತು. ಹಣವೂ ಸಾಕಷ್ಟು ಸಿಗುತ್ತಿತ್ತು. ಹೀಗೆ ಶ್ರೀಮಂತಿಕೆ ದೊರೆತಾಗ ನಾನು ಮತ್ತು ನನ್ನ ಕರ್ತೃತ್ವ ಇಂತಹ ಅಹಂಕಾರ ಬರಲು ತಡವಾಗುವುದಿಲ್ಲ. ಅದೇ ಕಥೆ ಮೋರೋಪಂತರ ವಿಷಯದಲ್ಲಿಯೂ ಆಯಿತು. ಅವರಿಗೆ ತನ್ನ ಕೃರ್ತೃತ್ವದ ಮುಂದೇ ದೇವರು ಕಾಣಿಸದಾದರು. ದೇವರನ್ನು ಅವರು ಒಪ್ಪಿಕೊಳ್ಳದಾದರು. ಅವರ ಪತ್ನೀ ತುಂಬಾ ಶ್ರದ್ಧಾವಂತಳಾಗಿದ್ದಳು. ಆಕೆಗೆ ಶ್ರೀರಾಮ ಮತ್ತು ಶ್ರೀಮಹಾರಾಜರ ಮೇಲೆ ದೃಢವಾದ ಶ್ರದ್ಧೆ ಇತ್ತು. ಅವರ ನಾಮಸ್ಮರಣ, ಪೂಜೆ ನಡೆಯುತ್ತಲೇ ಇತ್ತು. ಮೋರೋಪಂತರು ಮಾತ್ರ ಆಕೆಯನ್ನು ನಿಂದಿಸುತ್ತಲೇ ಇದ್ದರು.

ಕೆಲ ದಿನಗಳಲ್ಲಿ ಮೋರೋಪಂತರು ಕಾಯಿಲೆ ಬಿದ್ದರು. ಅವರಿಗೆ ವಿಷಮ ಜ್ವರವಾಯಿತು. ದಿನದಿಂದ ದಿನಕ್ಕೆ ಸ್ವಾಥ್ಯ ಕೆಟ್ಟುಹೋಯಿತು, ಅವರ ಪತ್ನೀ ಮನಃಪೂರ್ವಕ ಅವರ ಸೇವೆ ಮಾಡುತ್ತಿದ್ದರು. ಆಕೆಯ ಮನಸ್ಸಿನ ಚಿಂತೆ ಹೆಚ್ಚತೊಡಗಿತು. ಅವಳು ಮನಸ್ಸಿನಲ್ಲೇ ಮಹಾರಾಜರನ್ನು ಪ್ರಾರ್ಥಿಸತೊಡಗಿದರು - ಮಹಾರಾಜರೇ ! ಇವರು ಆರೋಗ್ಯವಂತರಾದರೆ ನಾವಿಬ್ಬರೂ ತಮ್ಮ ದರ್ಶನ ಪಡೆಯಲು ಗೊಂದವಲೆಗೆ ಬರುತ್ತೇವೆ. ಇಪ್ಪತ್ತೊಂದರನೆಯ ದಿನ ಅವರ ಜ್ವರ ಇಳಿಯಿತು. ವಾರದಲ್ಲಿ ಅವರ ಆರೋಗ್ಯ ಹಿಂದಿನಂತೆ ಆಯಿತು. ಪತ್ನೀಯ ಇಚ್ಛೆಯನ್ನು ಪೂರ್ಣಗೊಳಿಸಲು ಅವರು ಗೊಂದವಲೆಗೆ ಬಂದರು. ಪತ್ನೀಗೆ ದೃಢ ವಿಶ್ವಾಸವಿತ್ತು, ಆದರೆ ಅವರಿಗೆ ವಿಶ್ವಾಸ ಇರಲಿಲ್ಲ. ಶ್ರೀಮಹಾರಾಜರು ಅವರನ್ನು, ಪ್ರೇಮದಿಂದ ಸ್ವಾಗತಿಸಿದರು. ಅವರು ಮೋರೋಪಂತರಿಗೆ ಹೇಳಿದರು - ನಿಮ್ಮ ಪತ್ನಿಯು ರಾಮನನ್ನು ಪ್ರಾರ್ಥಿಸಿದರು, ಆ ದಯಾಘನ ನಿಮ್ಮ ಕಠಿಣ ಪ್ರಸಂಗದಲ್ಲಿ

ಓಡಿ ಬಂದ, ನಿಮ್ಮ ಆರೋಗ್ಯ ಸುಧಾರಿಸಿತು, ಇದು ಶ್ರೀರಾಮನ ಕೃಪೆಯೇ ಆಗಿದೆ. ಮೋರೋಪಂತರಿಗೆ ಶ್ರೀಮಹಾರಾಜರ ಮಾತು ಒಪ್ಪಿಗೆ ಆಗಲಿಲ್ಲ. ಅವರು ಕೇಳಿದರು – ರಾಮನು ಕೃಪೆ ಮಾಡಿ ನನ್ನ ಆರೋಗ್ಯ ಸುಧಾರಿಸಿತು ಎಂದು ನಾನು ಒಪ್ಪುವುದಿಲ್ಲ, ಇದಕ್ಕೆ ಪುರಾವೆ ಏನಿದೆ? ಅವರು ಪತ್ನಿಗೆ ಇದು ಸರಿಬೀಳಲಿಲ್ಲ. ಶ್ರೀಮಹಾರಾಜರು ಉತ್ತರಿಸಿದರು – ದೇವರೇ ನಮ್ಮ ಒಳಿತನ್ನು ಮಾಡುತ್ತಿರುತ್ತಾನೆ.

ಮೋರೋಪಂತರು ಕೇಳಿದರು – ದೇವರು ಇದ್ದಾನೆ ಎಂಬುದು ಯಾತರಿಂದ? ಶ್ರೀಮಹಾರಜರು ಪ್ರಶ್ನೆ ಮಾಡಿದರು – ದೇವರು ಇಲ್ಲ ಎಂಬುದು ಯಾತರಿಂದ? ಮೋರೋಪಂತರು ಕೇಳಿದರು – ಅಲ್ಲ, ದೇವರು ಇದ್ದಾನೆ ಎಂದಾದರೆ ಅವನು ಏಕೆ ಕಾಣುವುದಿಲ್ಲ? ಶ್ರೀಮಹಾರಾಜರು ಕೇಳಿದರು – ಯಾವುದು ನಮಗೆ ಕಾಣುವುದಿಲ್ಲವೋ ಅದು ಅಸ್ತಿತ್ವದಲ್ಲಿ ಇಲ್ಲ ಎಂದು ನಾವು ನಿಶ್ಚಯಿಸುತ್ತೇವೆಯೋ? ಪೃಥಿವಿಯ ಮಧ್ಯಭಾಗ ನಮಗೆ ಕಾಣುತ್ತದೆಯೇ? ಹಿಮಾಲಯದ ಗೌರೀಶಂಕರ ಶಿಖರ ನಾವು ನೋಡಿದ್ದೇವೆಯೋ? ಸಮುದ್ರದ ತಳದಲ್ಲಿರುವ ಮೀನುಗಳನ್ನು ನಾವು ನೋಡಿದ್ದೇವೆಯೋ? ಸ್ವತಃ ತನ್ನ ಮೆದುಳು ನಮಗೆ ಕಾಣುವುದಿಲ್ಲ, ಈಗ ಇದೆಲ್ಲವೂ ಅಸ್ತಿತ್ವದಲ್ಲಿ ಇಲ್ಲವೆಂದು ನಾವು ನಿಶ್ಚಯಿಸಬಹುದೇ? ಅದಕ್ಕ ಮೋರೋಪಂತರು ಹೇಳಿದರು – ಇವೆಲ್ಲವನ್ನು ಯಾರಾದರೂ ನೋಡಿದ್ದಾರಲ್ಲ! ಅವರು ಹೇಳಿರುವುದಲ್ಲಿ ನಾವು ವಿಶ್ವಾಸವಿಡಬಾರದೆ? ಶ್ರೀಮಹಾರಾಜರು ಹೇಳಿದರು – ಸರಿಯಾಗಿ ನೀವು ಹೇಳಿದಿರಿ. ಸಂತರು ನಮಗೆ ದೇವನಿದ್ದಾನೆ, ಅವನ ಅಸ್ತಿತ್ವ ಇದೆ, ಇದನ್ನು ಅನೇಕಬಾರಿ ಸ್ಪಷ್ಟವಾಗಿ ಹೇಳಿರುವರು. ಸಂತರ ಚರಿತ್ರೆ, ಅವರ ಅಭಂಗ, ಅವರ ಸಾಹಿತ್ಯದಲ್ಲಿ ಈಶ್ವರನ ಅಸ್ತಿತ್ವ ಶಬ್ದ-ಶಬ್ದಗಳಲ್ಲಿ ಕಾಣುತ್ತದೆ, ಸಂತರು ಇದೆಲ್ಲವನ್ನು ಸ್ವಾನುಭೂತಿಯಿಂದ ಹೇಳಿದರು. ಸಂತರಾದರೋ ಪೂರ್ಣ ನಿಃಸ್ವಾರ್ಥಿಗಳು ಹಾಗೂ ಸಂತರು ಅಸತ್ಯ ಹೇಳುವುದು ಶಕ್ಯವೇ ಇಲ್ಲ. ಮೋರೋಪಂತರಿಗೆ ಈಗೇನು ಹೇಳುವುದೆಂದು ತಿಳಿಯಲಿಲ್ಲ. ಅವರ ಪತ್ನೀಯ ಶ್ರದ್ಧೆ ದೃಢವಾಗಿತ್ತು . ಅದು ಇನ್ನೂ ದೃಢವಾಯಿತು. ಶ್ರೀಮಹಾರಾಜರು ಸಮಜಾಯಿಸುತ್ತಾ ಹೇಳಿದರು – ಎಲ್ಲವೂ ಶ್ರೀರಾಮನ ಇಚ್ಛೆಯಿಂದಲೇ ನಡೆಯುತ್ತದೆ, ವಿಶ್ವಾಸ ವಿಡಿ, ನಾವು ನಿಮಿತ್ತ ಮಾತ್ರ ಆಗಿದ್ದೇವೆ. ಮೋರೋಪಂತರ ಮನಸ್ಸಿಗೆ ಅರ್ಥವಾಯಿತು, ಅವರು ಶ್ರೀಮಹಾರಾಜರ ಚರಣಗಳಲ್ಲಿ ಶಿರವನ್ನಿಟ್ಟರು. ಅವರ ಪತ್ನೀಯ ಕಣ್ಣುಗಳಿಂದ ಆನಂದಾಶ್ರು ಹರಿಯ ತೊಡಗಿದವು, ಆಕೆಯು ಶ್ರೀಮಹಾರಾಜರ ಪಾದಗಳಲ್ಲಿ ಪರಮಶ್ರದ್ಧೆಯಿಂದ ಮಸ್ತಕವನ್ನು ಇಟ್ಟರು. ಪತಿ-ಪತ್ನೀಯರು ನಾಲ್ಕು ದಿನ ಗೊಂದವಲೆಯಲ್ಲಿ ಇದ್ದು,

ಐದನೆಯ ದಿನ ಮೋರೋಪಂತರು ಶ್ರೀಮಹಾರಾಜರಿಂದ ಉಪದೇಶ ಪಡೆದರು. ಪತಿ-ಪತ್ನೀಯರು ತುಂಬು ಸಂತೋಷದಿಂದ ಬೆಳಗಾವಿಗೆ ಮರಳಿದರು.

ಶ್ರೀಮಹಾರಾಜರು ಜೊತೆಯ ಭಕ್ತಮಂಡಳಿಯೊಂದಿಗೆ ಉಗಾರಕ್ಕೆ ಬಂದರು. ಅವರ ನಿವಾಸ ವ್ಯವಸ್ಥೆ ಒಂದು ಮಂದಿರದಲ್ಲಿ ಮಾಡಲಾಗಿತ್ತು . ಯಾವ ಇಬ್ಬರು ತರುಣರು ಶ್ರೀಮಹಾರಾಜರಿಗೆ ಆಮಂತ್ರಣ ಕೊಟ್ಟಿದ್ದರೋ, ಅವರಲ್ಲಿ ಒಬ್ಬನು ಶ್ರೀಮಹಾರಾಜರು ಮತ್ತು ಜೊತೆಗಿನ ಭಕ್ತರನ್ನು ತಮ್ಮ ಮನೆಗೆ ಭೋಜನಕ್ಕಾಗಿ ಆಮಂತ್ರಿಸಿದನು. ಮನೆಯಲ್ಲಿ ಅವನ ತಾಯಿ ಮತ್ತು ಪತ್ನೀ ಇಬ್ಬರೇ ಇದ್ದರು, ಅವರ ತಂದೆ ಪರ ಊರಿಗೆ ಹೋಗಿದ್ದರು. ಮನೆಯಲ್ಲಿ ಭೋಜನದ ತಯಾರಿ ನಡೆದಿತ್ತು . ಅಚಾನಕವಾಗಿ ಅವರ ತಂದೆ ಪರ ಊರಿನಿಂದ ಮರಳಿದರು. ತನಗೆ ತಿಳಿಸದೆ ಇಷ್ಟು ಜನರಿಗೆ ಊಟಕ್ಕೆ ಕರೆದುದು ಅವರಿಗೆ ಸಿಟ್ಟು ಬಂತು. ಅವರು ಮಗನಿಗೆ ಸಿಟ್ಟಿನಿಂದ ಬೈದರು. ಉಟದ ತಯಾರಿ ಪೂರ್ಣವಾಗಿರಲಿಲ್ಲ, ಕಾರ್ಯಕ್ರಮ ರದ್ದಾಯಿತು. ತಾನು ಶ್ರೀಮಹಾರಾಜರೊಂದಿಗೆ ಎಲ್ಲರಿಗೂ ಊಟದ ಆಮಂತ್ರಣ ಮಾಡಿದ್ದೆ ಹಾಗೂ ಅದು ಪೂರ್ಣ ಆಗಲಿಲ್ಲ ಎಂದು ಅವನು ನಿರಾಶನಾದನು. ಅವನು ತನ್ನ ತಂದೆಗೆ ಎದುರು ಮಾತನಾಡಲಿಲ್ಲ. ಆದರೆ ಸಿಟ್ಟುಗೊಂಡು ಮನೆಯಿಂದ ಹೊರಬಿದ್ದ, ಶ್ರೀಮಹಾರಾಜರಲ್ಲಿಗೆ ಮಂದಿರಕ್ಕೆ ಬಂದು ಉಳಿದ. ಶ್ರೀಮಹಾರಾಜರು ಚುರುಮುರಿ ತಂದು, ಎಲ್ಲರಿಗೆ ತಿನ್ನಲು ಕೊಟ್ಟರು. ಆದ ಪ್ರಕರಣ ಇನ್ನೊಬ್ಬ ತರುಣನಿಗೆ ತಿಳಿಯಿತು. ಅವನು ತನ್ನ ಮನೆಯಲ್ಲಿ ಸ್ವಲ್ಪ ಹೊತ್ತಿನಲ್ಲೇ ಎಲ್ಲರಿಗಾಗಿ ಝುಣಕ ರೊಟ್ಟಿ ತಯಾರಿಸಿ, ಮಂದಿರಕ್ಕೆ ಬಂದು ಎಲ್ಲರಿಗೆ ತಿನ್ನಿಸಿದರು.

ಮರುದಿನ ಬೆಳಿಗ್ಗೆ ಸಿಟ್ಟುಗೊಂಡು ಹೋದ ಮಗನ ತಂದೆಯವರು ಮಂದಿರಕ್ಕೆ ಬಂದು ಶ್ರೀಮಹಾರಾಜರಿಗೆ ಹೇಳಿದರು - ಮಹಾರಾಜ! ನನ್ನನ್ನು ಕೇಳದೆ, ನಾನಿಲ್ಲದಾಗ ಇಷ್ಟು ಜನರನ್ನು ಮನೆಗೆ ಊಟಕ್ಕೆ ಕರೆದನು, ಸ್ವಲ್ಪ ಸಮಜಾಯಿಸಿ ಹೇಳಿ ಇವನಿಗೆ. ಶ್ರೀಮಹಾರಾಜರು ಅವನನ್ನು ಪ್ರೇಮದಿಂದ ಬಳಿಯಲ್ಲಿ ಕುಳ್ಳಿರಿಸಿಕೊಂಡು ಹೇಳಿದರು - ಮಗು ! ಹಿರಿಯರ ಅವಜ್ಞೆ ಮಾಡುವುದು ಸರಿಯಲ್ಲ, ಹೋಗು, ಮನೆಗೆ ಹೋಗು. ಮಹಾರಾಜರು ಹೇಳಿದರೆಂದು ಆ ತರುಣ ತಂದೆಯ ಜೊತೆಗೆ ಮನೆಗೆ ಹೋದ. ಮನೆಗೆ ಹೋದಮೇಲೆ ಅವನು ತಂದೆಗೆ ಹೇಳಿದ- ನಾನು ಶ್ರೀಮಹಾರಾಜರನ್ನು ಮತ್ತು ಅವರ ಭಕ್ತರನ್ನು ಮನೆಗೆ ಊಟಕ್ಕೆ ಆಮಂತ್ರಿಸಿದೆ, ಆದರೆ ಅದು ನಡೆಯಲಿಲ್ಲ, ಅವರ ಅಪಮಾನವಾಯಿತು. ಆ ಅಪಮಾನದ ಪ್ರಾಯಶ್ಚಿತ್ತ ಆಗಲೇಬೇಕು. ಶ್ರೀಮಹಾರಾಜರು ನಮ್ಮ ಮನೆಗೆ ಬಂದು ಊಟ ಮಾಡುವವರೆಗೆ

ನಾನು ಒಂದು ಅನ್ನದ ಅಗುಳೂ ಬಾಯಿಗೆ ಹಾಕಲಾರೆ. ತಂದೆಗೆ ಉಪಾಯವಿಲ್ಲದಂತಾಯಿತು. ಅವರು ಶ್ರೀಮಹಾರಾಜರನ್ನು ಆಮಂತ್ರಿಸಲು ಮಂದಿರಕ್ಕೆ ಬಂದರು. ಕೈಮುಗಿದು ಹೇಳಿದ - ಮಹಾರಾಜ! ನೀವು ಮತ್ತು ನಿಮ್ಮ ಜೊತೆಗಿದ್ದ ಎಲ್ಲ ಭಕ್ತರು ನಮ್ಮ ಮನೆಗೆ ಊಟಕ್ಕೆ ಬರಬೇಕು. ಮಹಾರಾಜರು ಹೇಳಿದರು - ಬೇಡ, ನಮಗೆ ಕರೆಯಬೇಡಿ, ನಾವು ತುಂಬಾ ಜನರಿದ್ದೇವೆ ಮತ್ತೆ ಆ ತಂದೆಯು ಶ್ರೀಮಹಾರಾಜರ ಚರಣಗಳಲ್ಲಿ ಶಿರವನ್ನಿಟ್ಟು ಹೇಳಿದರು - ನಾನು ಮಗನ ಮೇಲೆ ಸಿಟ್ಟಾದೆ, ನನ್ನ ತಪ್ಪಾಯಿತು, ಈಗ ನೀವು ತಿರಸ್ಕರಿಸಿದರೆ ನನ್ನ ಮಗನೇನು ನಾನೂ ಕೂಡ ಅನ್ನಗ್ರಹಣ ಮಾಡಲಾರೆ. ಶ್ರೀಮಹಾರಾಜರು ಒಪ್ಪಿದರು, ಅದೇ ದಿನ ಸಂಜೆ ಶ್ರೀಮಹಾರಾಜರು ಮತ್ತು ಜೊತೆಗಿನ ಮಂಡಳಿ ಅವರ ಮನೆಗೆ ಊಟಕ್ಕೆ ಹೋದರು. ಊಟವಾಗಿ ಅಲ್ಲಿಂದ ಮಂದಿರಕ್ಕೆ ಹಿಂತಿರುಗುವಾಗ ಶ್ರೀಮಹಾರಾಜರು ಆ ಹುಡುಗನನ್ನು ಬಳಿ ಕರೆದು ಹೇಳಿದರು - ಹಿರಿಯರ ಆಜ್ಞೆಯನ್ನು ಉಲ್ಲಂಘಿಸಬಾರದು, ನಮ್ರತೆಯಿಂದ ಇರಬೇಕು. ಮರುದಿನ ಬೆಳಿಗ್ಗೆ ಆ ಮಗ ಅವನ ಪತ್ನೀ , ಅವನ ತಂದೆ-ತಾಯಿ ಎಲ್ಲರೂ ಶ್ರೀಮಹಾರಾಜರಿಂದ ಉಪದೇಶ ಪಡೆದರು.

ಹುಬ್ಬಳ್ಳಿಯಲ್ಲಿ ಚಿದಂಬರ ನಾಯೀಕ ಎಂಬ ಸಾಹುಕಾರರೊಬ್ಬರಿದ್ದರು. ಹುಬ್ಬಳ್ಳಿಯಲ್ಲಿ ಶ್ರೀಮಹಾರಾಜರ ಬಹಳ ಭಕ್ತರಿದ್ದರು. ಚಿದಂಬರನಾಯಿಕರು ಇತರ ಜನರ ಸಹಾಯದಿಂದ ಹುಬ್ಬಳ್ಳಿಯಲ್ಲಿ ಒಂದು ರಾಮಮಂದಿರ ಕಟ್ಟಿಸಿದರು. ರಾಮನ ಮೂರ್ತಿ ಪ್ರತಿಷ್ಠಾಪಿಸಲು ಮಹಾರಾಜರನ್ನು ಆಮಂತ್ರಿಸಲಾಯಿತು. ಶ್ರೀಮಹಾರಾಜರು ತಮ್ಮ ಭಕ್ತ ಮಂಡಳಿಯೊಂದಿಗೆ ಹುಬ್ಬಳ್ಳಿಗೆ ಬಂದರು. ಅವರನ್ನು ಸ್ಟೇಶನ್ನಲ್ಲೇ ಭವ್ಯವಾಗಿ ಸ್ವಾಗತಿಸಲಾಯಿತು. ಚಿದಂಬರನಾಯಿಕರ ಮನೆ ದೊಡ್ಡದಾಗಿತ್ತು . ಶ್ರೀಮಹಾರಾಜರನ್ನು ಹಜಾರದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ ಮಾಡಲಾಗಿತ್ತು . ಅವರ ದರ್ಶನಕ್ಕಾಗಿ ಭಾರೀ ಜನ ಸೇರಿದರು, ರಾತ್ರೆ ಒಂಭತ್ತು ಗಂಟೆಯಾದರೂ ಜನರ ಸಂದಣಿ ಕಡಿಮೆ ಆಗಲಿಲ್ಲ. ಕೊನೆಗೆ ತಬೀಬರು ಶ್ರೀಮಹಾರಾಜರನ್ನು ಆ ಸಂದಣಿಯಿಂದ ಪಕ್ಕಕ್ಕೆ ಕೊಂಡು ಹೋಗಿ ಹಿಂದಿನ ಬಾಗಿಲಿನಿಂದ ಒಂದು ಸ್ವತಂತ್ರ ಕೋಣೆಯಲ್ಲಿ ಕುಳ್ಳಿರಿಸಿದರು. ಅವರ ಸೇವೆಗಾಗಿ ಒಬ್ಬ ಮನುಷ್ಯನನ್ನು ಇಟ್ಟರು. ಅವನಿಗೆ ಹೇಳಿದರು - ಈಗ ಮಹಾರಾಜರು ವಿಶ್ರಾಂತಿ ಪಡೆಯಲಿ, ಈಗ ಯಾರಿಗೂ ಒಳಗೆ ಬಿಡಬೇಡ. ಮೂಲೆಯಲ್ಲಿ ಒಂದು ಮೊಂಬತ್ತಿ ಉರಿಸಿ ತಬೀಬರು ಹೊರಟು ಹೋದರು. ಸೇವಕ ಬೀಸಣಿಗೆಯಿಂದ ಗಾಳಿ ಬೀಸುತ್ತಿದ್ದ. ಭಕ್ತರು ದರ್ಶನಕ್ಕಾಗಿ ಬಂದು ಹಿಂದಿರುಗಿ ಹೋಗಿರಬಹುದು, ನಿರಾಶರಾಗಿರಬಹುದು

ಎಂದು ಮನಸ್ಸಿನಲ್ಲಿ ಯೋಚಿಸಿ ಶ್ರೀಮಹಾರಾಜರು ಆ ವ್ಯಕ್ತಿಯಿಂದ ಬೀಸಣಿಗೆ ಎತ್ತಿಕೊಂಡು ಮೊಂಬತ್ತಿ ಆರಿಸಿ ಬಿಟ್ಟರು. ಆ ವ್ಯಕ್ತಿ ಪುನಃ ಮೊಂಬತ್ತಿ ಹಚ್ಚಲು ಕತ್ತಲೆಯಲ್ಲಿ ಪರದಾಡುತ್ತಿರುವಾಗ ಶ್ರೀಮಹಾರಾಜರು ಕೋಣೆಯಿಂದ ಹೊರಗೆ ಹೊರಟು ಹಜಾರದಲ್ಲಿ ಬಂದು ಕುಳಿತರು, ಜನರು ಅವರ ದರ್ಶನ ಪಡೆದರು. ಆ ಸೇವಕ ನಿರುಪಾಯನಾಗಿ ಹಜಾರಕ್ಕೆ ಬಂದು ಕುಳಿತ. ಜನರ ಸಂದಣಿ ರಾತ್ರಿ ಹನ್ನೊಂದು ಗಂಟೆಗೆ ಕರಗಿತು. ಭಕ್ತರಿಗೆ ಆಗುವ ನಿರಾಸೆಯನ್ನು ಮಹಾರಾಜರು ಮೆಚ್ಚುತ್ತಿರಲಿಲ್ಲ.

ಶ್ರೀರಾಮಮೂರ್ತಿಯ ಪ್ರತಿಷ್ಠಾಪನೆಯ ಹಿಂದಿನ ದಿನ ಶ್ರೀ ಮಹಾರಾಜರು ಕಾಯಿಲೆ ಬಿದ್ದರು. ಅವರಿಗೆ ಜ್ವರ ಬಂದಿತ್ತು. ಅವರು ಯಾರಿಗೂ ಹೇಳಲಿಲ್ಲ. ಎಲ್ಲ ಕಾರ್ಯಕ್ರಮ ವ್ಯವಸ್ಥಿತ ಶುರುವಾಯಿತು. ಬೆಳಗಾಯಿತು, ಎಲ್ಲ ಮಂಡಳಿ ಮಂದಿರಕ್ಕೆ ಹೊರಟರು. ಶ್ರೀಮಹಾರಾಜರು ಮಾತ್ರ ಎಲ್ಲರ ಕಣ್ಣು ತಪ್ಪಿಸಿ ಒಂದು ಗಲ್ಲಿಯಲ್ಲಿ ನುಗ್ಗಿದರು. ಅಲ್ಲಿ ಜಾನಕೀ ಬಾಯಿಯ ಮನೆ ಇತ್ತು . ಈ ಜಾನಕೀಬಾಯಿ ಗದುಗಿನಲ್ಲಿ ಭಾವುಸಾಹೇಬ ಕೇತಕರ್ ಅವರಲ್ಲಿ ಅಡಿಗೆಗೆ ಇದ್ದರು. ಮುಂದೆ ಭಾವುಸಾಹೇಬ ನಿವೃತ್ತರಾದರು. ಜಾನಕೀಬಾಯಿ ತನ್ನ ಊರಾದ ಹುಬ್ಬಳ್ಳಿಗೆ ಬಂದು ಬಂದು ಸಣ್ಣ ಕೋಣೆಯಲ್ಲಿ ಇರುತ್ತಿದ್ದರು. ಈಗ ಅವರ ವಯಸ್ಸು ಎಪ್ಪತ್ತೈದು ಆಗಿತ್ತು . ಇವರು ಶ್ರೀಮಹಾರಾಜರ ನಿಷ್ಠಾವಂತ ಭಕ್ತರಾಗಿದ್ದರು. ಶ್ರೀಮಹಾರಾಜರು ಜಾನಕೀಬಾಯಿಯ ಕೋಣೆಗೆ ಬಂದರು. ಅಚಾನಕಾಗಿ ಮಹಾರಾಜರು ಬಂದುದನ್ನು ನೋಡಿ, ಅವರು ವಿಸ್ಮಯ ಚಕಿತರಾದರು. ಅವರಿಗೆ ಪರಮಾನಂದವಾಯಿತು, ಬನ್ನಿ, ಕುಳಿತುಕೊಳ್ಳಿ, ಇಷ್ಟಕ್ಕೂ ಅವರಿಂದ ಹೇಳಲಾಗಲಿಲ್ಲ. ಆ ಕೋಣೆಯಲ್ಲಿನ ಒಂದು ಹರಕು ಶತರಂಜಿಯಲ್ಲಿ ಮಹಾರಾಜರು ಕುಳಿತು ಜಾನಕೀಬಾಯಿಗೆ ಹೇಳಿದರು – ನನಗೆ ನಿನ್ನೆಯಿಂದ ಜ್ವರ ಬಂದಿದೆ, ಬಾಯಿರುಚಿ ಇಲ್ಲ, ನಿನ್ನೆಯಿಂದ ನಾನು ಏನನ್ನೂ ತಿಂದಿಲ್ಲ, ಸ್ವಲ್ಪ ಮೆತ್ತಗೆ ಅನ್ನ ಮತ್ತು ಕೊಕಂ (ಮುರುನಹುಳಿ) ಸಾರು ತಿನ್ನಬೇಕೆನಿಸಿದೆ. ಶ್ರೀಮಹಾರಾಜರು ಹೀಗೆ ಹೇಳಿದಾಗ ಅವರು ಎಚ್ಚರಗೊಂಡರು. ಅವರ ಕಣ್ಣುಗಳಿಂದ ಅಶ್ರು ಹರಿಯ ತೊಡಗಿದವು. ಅವರು ತನ್ನ ತಲೆಯನ್ನು ಶ್ರೀಮಹಾರಾಜರ ಚರಣಗಳಲ್ಲಿ ಇಟ್ಟರು ಹಾಗೂ ತಯಾರಿಗೆ ತೊಡಗಿದರು, ಅವರು ಶ್ರೀಮಹಾರಾಜರಿಗೆ ಮಲಗಲು ಹಸೆ ಹಾಸಿ, ಸಾರನ್ನ ಆಗುವವರೆಗೆ ವಿಶ್ರಾಂತಿ ಪಡೆಯಲು ಹೇಳಿದರು. ಸಾರನ್ನ ಆಗುತ್ತಲೇ ಮಹಾರಾಜರನ್ನು ಎಬ್ಬಿಸಿ ತನ್ನ ಕೈಯಿಂದಲೇ ಮಹಾರಾಜರಿಗೆ ತುತ್ತು ತಿನ್ನಿಸಿದರು. ಊಟವಾದ ಮೇಲೆ ಶ್ರೀಮಹಾರಾಜರು ಮಂದಿರದ ಕಡೆಗೆ ಹೋಗಲು ಹೊರಟರು. ಜಾನಕೀಬಾಯಿಯು ಅವರ ಚರಣ ವಂದನೆ ಮಾಡಿದರು.

ಮಹಾರಾಜರು ಭಾವುಕರಾಗಿ ಹೇಳಿದರು – ರಾಮನಾಮ ಜಪಿಸಿರಿ, ಅವನು ನಿಮಗೆ ಪ್ರೇಮಾಧಾರ ನೀಡುವನು. ತಾಯಿ! ನಿಮ್ಮ ಜವಾಬ್ದಾರಿ ನಾನು ತೆಗೆದುಕೊಂಡೆ, ರಾಮನಾಮ ನಿಮಗೆ ಶಾಂತಿ, ಸಮಾಧಾನ ಮತ್ತು ಪರಮಾನಂದ ನೀಡೀತು.

ಶ್ರೀರಾಮ ಮೂರ್ತಿಯ ಸ್ಥಾಪನೆ ಶ್ರೀಮಹಾರಾಜರ ಪಾವನ ಕರಗಳಿಂದ ಆಯಿತು. ವಿಶೇಷ ಅನ್ನದಾನ ನಡೆಯಿತು.

ಹುಬ್ಬಳ್ಳಿಯ ಸಿದ್ಧಾರೂಢ ಸ್ವಾಮಿಗಳು ಶ್ರೀಮಹಾರಾಜರನ್ನು ತಮ್ಮ ಮಠಕ್ಕೆ ಬರಲು ಆಂತ್ರಿಸಿದರು. ಶ್ರೀಮಹಾರಾಜರು ತಮ್ಮ ಜೊತೆಗಿದ್ದ ಭಕ್ತರೊಡನೆ ಮಠಕ್ಕೆ ಹೋದರು. ಸಿದ್ಧಾರೂಢ ಸ್ವಾಮಿಗಳು ಅವರನ್ನು ಸ್ವಾಗತಿಸಿದರು, ಅವರನ್ನು ದೃಢವಾಗಿ ಆಲಿಂಗಿಸಿಕೊಂಡರು. ಇಬ್ಬರ ಶಿಷ್ಯರೂ ಮಠದಲ್ಲಿದ್ದರು. ಹರಿ ಮತ್ತು ಹರ, ವಿಷ್ಣು ಮತ್ತು ಶಿವ ಇವರಲ್ಲಿ ಭೇದವಿಲ್ಲ, ಅವರು ಒಂದೇ ಆಗಿರುವರು ಎಂಬ ಇಬ್ಬರದೂ ನಿಶ್ಚಿತಮತವಾಗಿತ್ತು . ಇಬ್ಬರೂ ಶಿಷ್ಯರಿಗೆ ಅದೇ ತತ್ತ್ವ ತಿಳಿಸಿದರು. ಮಠ ನೋಡಿ ಶ್ರೀಮಹಾರಾಜರು ಹಿಂದಿರುಗಿದರು. ಮರುದಿನ ಶ್ರೀಮಹಾರಾಜರು ಮಂಡಳಿಸಹಿತ ಗೊಂದವಲೆಗೆ ಮರಳಿದರು.



-: ಮೂವತ್ತೆಂಟು :-

# ಶ್ರೀರಾಮನವಮಿಯ ಕೊನೆಯ ಉತ್ಸವ

ಶ್ರೀಮಹಾರಾಜರು ತಮ್ಮ ಪಾವನ ಕರಗಳಿಂದ ಅನೇಕ ಊರುಗಳಲ್ಲಿ ಮಂದಿರಗಳನ್ನು ಸ್ಥಾಪಿಸಿದರು. ಶ್ರೀರಾಮಮಂದಿರ ಜೊತೆಗೆ ಇತರ ದೇವತೆಗಳ ಮಂದಿರಗಳೂ ಅವರ ಕೈಯಿಂದ ಸ್ಥಾಪಿತವಾದುವು. ಕರ್ಹಾಡದಲ್ಲಿ ರಾಮಮಂದಿರ, ಹಳೇ ಇಂದೋರಿನಲ್ಲಿ ರಾಮಮಂದಿರ, ಹರ್ದಾದಲ್ಲಿ ರಾಮಮಂದಿರ, ಪಂಢರಪುರದಲ್ಲಿ ರಾಮಮಂದಿರ, ಕುರ್ತುಕೋಟಿಯಲ್ಲಿ ರಾಮಮಂದಿರ, ಕುವರಲೀಲಾ ರಾಮಮಂದಿರ, ಗಿರವಿಯಲ್ಲಿ ರಾಮಮಂದಿರ, ಗೋಮೇವಾಡಿಯಲ್ಲಿ ರಾಮಮಂದಿರ, ಆಟಪಾಡಿಯಲ್ಲಿ ರಾಮಮಂದಿರ, ಆಟಪಾಡಿಯಲ್ಲಿ ದತ್ತ ಮಂದಿರ, ಕಗವಾಡಿಯಲ್ಲಿ ರಾಮಮಂದಿರ, ಮ್ಹಾಸುರ್ಣೆದಲ್ಲಿ ರಾಮಮಂದಿರ ಯಾವಂಗಲದಲ್ಲಿ ದತ್ತ ಮಂದಿರ, ಹುಬ್ಬಳ್ಳಿಯಲ್ಲಿ ರಾಮಮಂದಿರ, ಮೋರಗಿರಿಯಲ್ಲಿ ರಾಮಮಂದಿರ, ನರಗುಂದಲ್ಲಿ ವಿಟ್ಠಲಮಂದಿರ, ಖಾತವಳದಲ್ಲಿ ವಿಠ್ಠಲಮಂದಿರ, ವಿಖಳೆಯಲ್ಲಿ ರಾಮಮಂದಿರ, ಸಾತಾರಾದಲ್ಲಿ ದತ್ತಮಂದಿರ, ಉಕಸಾಣಾದಲ್ಲಿ ವಿಟ್ಠಲ ಮಂದಿರ, ಪಾಟಣದಲ್ಲಿ ರಾಮಮಂದಿರ, ಕೋಕಣದ ಖೆರ್ಡಿಯಲ್ಲಿನ ರಾಮಮಂದಿರ, ಸಾತಪುಡಿಯ ಪರ್ವತ ಪಂಕ್ತಿಯಲ್ಲಿನ ರಾಮಮಂದಿರ, ಸೋಲಾಪುರದಲ್ಲಿ ರಾಮಮಂದಿರ, ಬೆಂಗಳೂರಿನ ಬಳಿ ಚಿಂತಾಮಣಿಯಲ್ಲಿ ರಾಮಮಂದಿರ.

ಈ ರಾಮಮಂದಿರಗಳ ಹಿಂದೆ ಪ್ರೇರಣೆಯಾಗಿದ್ದರು ಶ್ರೀಮಹಾರಾಜರು. ಇವರ ಪಾವನ ಕರಗಳಿಂದ ಈ ಮಂದಿರಗಳಲ್ಲಿ ಮೂರ್ತಿಗಳ ಪ್ರತಿಷ್ಠಾಪನೆ ಆಯಿತು. ಚಿಂತಾಮಣಿಯ ಮಂದಿರದಲ್ಲಿ ಶ್ರೀರಾಮಮೂರ್ತಿಯ ಪ್ರತಿಷ್ಠಾಪನೆ ಮಾಡುವಾಗ ಶ್ರೀಮಹಾರಾಜರು ಅತಿಶಯ ಆರ್ತ ಸ್ವರದಲ್ಲಿ ಈ ಅಭಂಗ ಹಾಡಿದರು.

**ಯೇರೇ ಯರೇ ರಘುನಾಥಾ! ತುಝೇ ಚರಣೀ ಮಾಝಾ ಮಾಥಾ ॥ 1 ॥**
**ತೂಂಚಿ ಮಾಝಾ ಮಾತಾ ಪಿತಾ । ತುಜವೀಣ ನಾಹೀ ತ್ರಾತಾ ॥ 2 ॥**

**ಜೀವ ರಘಾಲೆ ಕಷ್ಟೀ ಘಾರ । ಕೃಪಾಕರೀ ರಘುವೀರಾ ॥ 3 ॥**
**ತುಝೀ ಚರಣೀ ಮಾಝಾ ಮಾಥಾ । ಕೃಪಾಕರೀ ರಘುನಾಥಾ ॥ 4 ॥**
**ದೀನದಾಸ ಯೇಈ ಕಾಕುಳತೀ । ತುಜವಿಣ ನಾಹಿ ಪ್ರೀತಿ ॥ 5 ॥**
**ಯಾವೆ ಯಾವೆ ರಘುನಾಥಾ । ತುಮಚೆ ಚರಣೀ ಮಾಝಾ ಮಾಥಾ ॥ 6 ॥**

ಶ್ರೀಮಹಾರಾಜರ ಭಕ್ತ ಹಣಮಂತರಾವ ಮಾಸ್ತರ ಇವರು ಕಾಂಚೀಸಮುದ್ರಮ್‌ದಲ್ಲಿ ಶ್ರೀಮಹಾರಾಜರ ಮಂದಿರ ಸ್ಥಾಪಿಸಿದರು.

ಬಿದರಹಳ್ಳಿಯಲ್ಲಿ ರಾಮಸ್ಥಾಪನೆ ಮಾಡುವಾಗ ಕರ್ನಾಟಕ ಪ್ರಾಂತದಲ್ಲಿ ಶ್ರೀಬ್ರಹ್ಮಾನಂದರು ಅತಿ ಉತ್ತಮ ವ್ಯವಸ್ಥೆ ಮಾಡಿದ್ದರು. ಬಿದರಹಳ್ಳಿ ನದೀತೀರದಲ್ಲಿ ಒಂದು ಭವ್ಯ ಮಂಟಪ ರಚಿಸಿದ್ದರು. ನೂರು ಜನ ಅಡಿಗೆಯವರು ಭೋಜನ ಸಿದ್ಧತೆ ಮಾಡುತ್ತಿದ್ದರು. ಮೂರು ತಿಂಗಳು ಅನ್ನದಾನ ನಡೆದೇ ಇತ್ತು. ಬಡಬಗ್ಗರು ತೃಪ್ತರಾಗಿದ್ದರು. ಶ್ರೀಮಹಾರಾಜರು ಇಲ್ಲಿ ನಾಲ್ಕು ದಿನ ಇದ್ದರು. ಎರಡು ಸಾವಿರ ಜನರ ಒಂದು ಪಂಕ್ತಿ, ಇಂತಹ ಪಂಕ್ತಿಗಳು ಪ್ರಸಾದದ ಅನುಭೂತಿ ಪಡೆಯುತ್ತಿತ್ತು. ಒಂದು ದಿನ ಓರ್ವ ಅತಿಶಯ ವೃದ್ಧಸ್ತ್ರೀ ಮಹಾರಾಜರ ದರ್ಶನಕ್ಕಾಗಿ ಬಂದರು ದರ್ಶನ ಪಡೆದು ಅವಳು ಮಂಟಪದ ಕಡೆಗೆ ಬರುತ್ತಿದ್ದಳು. ದಾರಿಯಲ್ಲೇ ಆಕೆ ನಿಂತಳು ಮತ್ತು ಪ್ರಾಣೋತ್ಕ್ರಮಣ ಆಯಿತು. ಒಂದು ವ್ಯಕ್ತಿ ಓಡಿ ಬಂದು ಶ್ರೀಬ್ರಹ್ಮಾನಂದರಿಗೆ ಹೇಳಿತು– ಮಹಾರಾಜ! ಆ ಮುದುಕಿ ಸತ್ತಳು ಇಗೇನು ಮಾಡುವುದು? ಬ್ರಹ್ಮಾನಂದರು ಹೇಳಿದರು – ಹೀಗೆ ಆಗಲಿಕ್ಕೆ ಇಲ್ಲ, ಅವಳು ಮಹಾರಾಜರ ಅನುಮತಿ ಪಡೆದಳೆ? ಅದಲ್ಲದೆ ಆಕೆಗೆ ಈ ಲೋಕ– ಬಿಡಲು ಸಾಧ್ಯವಿಲ್ಲ. ಅವರು ನಿಶ್ಚೇಷ್ಟಿತ ಬಿದ್ದ ವೃದ್ಧ ಸ್ತ್ರೀಯ ಕಡೆಗೆ ಹೋದರು, ಆಕೆಯ ಮುಖದಲ್ಲಿ ತೀರ್ಥ ಹಾಕಿದರು, ನಿದ್ದೆಯಿಂದ ಎದ್ದ ಹಾಗೆ ಅವಳು ಎದ್ದು ಕುಳಿತಳು. ಮತ್ತೆ ಆಕೆಯನ್ನು ಭೋಜನ ಮಂಟಪಕ್ಕೆ ಕರೆದುಕೊಂಡು ಹೋದರು. ಶ್ರೀಬ್ರಹ್ಮಾನಂದರು ಆಕೆಗೆ ನೈವೇದ್ಯದ ಮೊಸರನ್ನ ಬಡಿಸಿದರು. ಬಳಿಕ ಮರುದಿನ ಬೆಳಗಿನ ಝಾವ ಅವಳು ದೇವಲೋಕಕ್ಕೆ ಹೋದಳು.

ಸೋಲಾಪುರದಲ್ಲಿ ಶ್ರೀರಾಮಮೂರ್ತಿಯ ಸ್ಥಾಪನೆಯ ಸಮಯ ಒಬ್ಬ ಫೋಟೋಗ್ರಾಫರ್ ಫೋಟೋ ತೆಗೆಯುವ ಆಸೆಯಿಂದ ಶ್ರೀಮಹಾರಾಜರ ಬಳಿಗೆ ಬಂದನು. ಮಹಾರಾಜರು ಅವನಿಗೆ ಹೇಳಿದರು – ಈ ಫೋಟೋ ತೆಗೆದು ಚೆನ್ನಾಗಿ ಲಾಭಗಳಿಸಬೇಕೆಂದು ನಿಮಗೆ ಅನಿಸಬಹುದು, ಆದರೆ ಇಂದು ಫೋಟೋ ತೆಗೆಯಬೇಡ, ಮತ್ತೆ ತೆಗಿ. ಫೋಟೋಗ್ರಾಫರ ಕೇಳಲಿಲ್ಲ. ತುಂಬಾ ಒತ್ತಾಯ ಮಾಡಿದ,

ಅವನು ಫೋಟೋ ತೆಗೆಯುವ ತಯಾರಿ ಮಾಡಿದನು. ಕೊನೆಗೆ ಮಹಾರಾಜರು ಸಿದ್ಧರಾದರು. ಫೋಟೋ ತೆಗೆಯುವಾಗ ಇಕ್ಕೆಲಗಳಲ್ಲಿ ಇಬ್ಬರು ಸಾಹೇಬರು ಕೈ ಮುಗಿದು ನಿಂತುಕೊಂಡರು. ಅನಂತರ ಆ ಫೋಟೋಗ್ರಾಫರ್ ಫೋಟೋ ಡೆವಲಪ್ ಮಾಡಿದರೆ ಫೋಟೋದಲ್ಲಿ ಇಕ್ಕೆಲಗಳಲ್ಲಿ ಸಾಹೇಬರು ಬಂದಿದ್ದರು. ಶ್ರೀಮಹಾರಾಜರ ಫೋಟೋ ಬಂದೇ ಇಲ್ಲ. ಮತ್ತೆ ಆ ಫೋಟೋಗ್ರಾಫರ್ ಶ್ರೀಮಹಾರಾಜರ ಹತ್ತಿರ ಬಂದು, ಅವರ ಚರಣದಲ್ಲಿ ತಲೆಯಿಟ್ಟು ಕ್ಷಮೆ ಯಾಚಿಸಿದನು. ಶ್ರೀಮಹಾರಾಜರು ಅವನಿಗೆ ಮರುದಿನ ಫೋಟೋ ತೆಗೆಯಲು ಅನುಮತಿ ನೀಡಿದರು. ಆ ಫೋಟೋ ಅತ್ಯುತ್ತಮವಾಗಿ ಬಂತು.

ಇತ್ತ ಪಂಢರಪುರದಲ್ಲಿ ದೇವರ ಒಡವೆ ಮತ್ತು ಸಂಪಾದನೆ ಇದರಲ್ಲಿ ಬಡವೆಗಳಲ್ಲಿ ತಂಟೆ ತಕರಾರು ಶುರು ಆಯಿತು. ಕಲೆಕ್ಟರರು ಶ್ರೀಮಹಾರಾಜರನ್ನು ಆ ತಕರಾರು ಮುಗಿಸಲು ವಿನಂತಿಸಿದರು. ಶ್ರೀಮಹಾರಾಜರು ಪಂಢರಪುರಕ್ಕೆ ಹೋದರು, ಅಲ್ಲಿ ನಾಲ್ಕು ದಿನ ಇದ್ದು ಬಡವೆಗಳ ತಕರಾರು ತೀರ್ಮಾನಿಸಿದರು. ಅವರಲ್ಲಿ ಸೌಹಾರ್ದ ನಿರ್ಮಾಣ ಮಾಡಿದರು. ಹಾಗೆ ಅವರು ಕಲೆಕ್ಟರರಿಗೆ ತಿಳಿಸಿದರು ಮತ್ತು ಪುಣೆಗೆ ಬಂದರು, ಪುಣೆಯಲ್ಲಿ ಗಣಪತಿರಾವ ದಾಮಲೆಯವರನ್ನು ಭೆಟ್ಟಿಯಾಗಿ ಗೊಂದವಲೆಗೆ ಮರಳಿದರು.

1919ರ ಶ್ರೀಮಹಾರಾಜರ ಗೊಂದವಲೆಯ ಕೊನೆಯ ರಾಮನವಮಿ. ಆಗ ಶ್ರೀಮಹಾರಾಜರು ಎಲ್ಲ ಭಕ್ತರಿಗೆ ಆಗ್ರಹದಿಂದ ಮತ್ತೆ ಪ್ರೇಮದಿಂದ ನಿಮಂತ್ರಣ ಕಳಿಸಿದರು. 'ಮುಂದೆ ನಾನು ಇರುವೆನೋ ಇಲ್ಲವೋ, ಅಕಸ್ಮಾತ್ ನೈಮಿಷಾರಣ್ಯದಲ್ಲಿ ಗಮನ ಮಾಡುವೆನು. ನಿಮ್ಮನ್ನ ಕಾಣುವ ಇಚ್ಛೆ ಇದೆ' ಹೀಗೆ ಪತ್ರ ಬಂದಾಗ ಯಾವ ಭಕ್ತನು ಬಾರದೇ ಇದ್ದಾನು! ಭಕ್ತರು ಪ್ರಚಂಡವಾಗಿ ಸೇರಿದರು, ವೈದಿಕ, ಶಾಸ್ತ್ರೀ, ಪಂಡಿತ, ಉಚ್ಚಪದಸ್ಥ, ಪ್ರವಚನಕಾರ, ಕೀರ್ತನಕಾರರು, ರಾಮದಾಸೀ, ಸಂನ್ಯಾಸೀ, ಸಾಮಾನ್ಯಭಕ್ತರು, ಇವರೆಲ್ಲ ಬಂದು ನೆರೆದರು. ಹತ್ತುದಿನ ಈ ಉತ್ಸವ ನಡೆಯಿತು. ಈ ಉತ್ಸವದಲ್ಲಿ ಪ್ರತಿಯೊಬ್ಬ ವ್ಯಕ್ತಿಯು ಬಂದು ಶ್ರೀಮಹಾರಾಜರ ಚರಣಗಳಲ್ಲಿ ಶಿರವನ್ನಿಡುತ್ತಿದ್ದರು. ಶ್ರೀಮಹಾರಾಜರು ಅತೀವ ಪ್ರೇಮದಿಂದ ಅವರ ಬೆನ್ನು ಸವರಿ ಹೇಳುತ್ತಿದ್ದರು – ''ಮಗು! ನಾವು ಪ್ರಾಂಚಿಕಕರು, ಈ ಪ್ರಪಂಚದಲ್ಲಿ ದೇವರು ನಮ್ಮನ್ನು ಯಾವ ಪರಿಸ್ಥಿತಿಯಲ್ಲಿ ಇಟ್ಟಿರುವನೋ ಅದರಲ್ಲೇ ನಾವು ಸಮಾಧಾನ ಪಡಬೇಕು. ಶ್ರೀರಾಮನನ್ನು ಮರೆಯಬಾರದು. ಪ್ರೇಮದಿಂದ ನಾಮಜಪಿಸುವವನ ಹಿಂದೆ ಅವನು ನಿಂತಿರುತ್ತಾನೆ. ಅವನೇ ನಮ್ಮ ಉದ್ಧಾರಕನು'' ಈ ಉತ್ಸವದಲ್ಲಿ

ಶ್ರೀಮಹಾರಾಜರ ಮುಂದೆ ಉಡುಗರೆಯ ರಾಶಿಯೇ ಬಿತ್ತು. ಉತ್ಸವ ನೆರವೇರಿದ ಬಳಿಕ ಜನರು ಶ್ರೀಮಹಾರಾಜರನ್ನು ಬೀಳ್ಕೊಂಡು ಮರಳ ತೊಡಗಿದರು. ಶ್ರೀಮಹಾರಾಜರು ಆಹೇರ ಎಂದು ಪ್ರತಿಯೊಬ್ಬನಿಗೂ ವಸ್ತುಗಳನ್ನು ಕೊಟ್ಟರು. ಸತತ ರಾಮನಾಮ ಜಪಿಸಿರಿ ಎಂಬ ಕಿವಿಮಾತು ಹೇಳಿದರು.

ಹುಚ್ಚಪ್ಪಾ ಮಾತ್ರ ಉತ್ಸವದ ಬಳಿಕವೂ ಶ್ರೀಮಹಾರಾಜರ ಹಿಂದೆ ಹಿಂದೆ ಇರತೊಡಗಿದ. ಜನರು ಅವನನ್ನು ಹುಚ್ಚಪ್ಪಾ ಎಂದು ಹೇಳುತ್ತಿದ್ದರು. ಮೊದಲು ಅವನು ಹುಚ್ಚನಂತೆ ತೋರುತ್ತಿದ್ದ ಅನಂತರ ಗೊಂದವಲೆಗೆ ಶ್ರೀಮಹಾರಾಜರ ಸಾನ್ನಿಧ್ಯದಲ್ಲಿ ಬಂದ ನಂತರ ಅವನು ತುಂಬಾ ಸುಧಾರಿಸಿದ. ಶ್ರೀಮಹಾರಾಜರು ಏನಾದರೂ ಹೇಳತೊಡಗಿದರೆ ಗಮನ ಕೊಟ್ಟು ಕೇಳುತ್ತಿದ್ದ. ಅವನ ಕಣ್ಣುಗಳಲ್ಲಿ ಆನಂದಾಶ್ರುಗಳು ಬರುತ್ತಿದ್ದವು ''ದಾದಾ! ನೀವು ಎಷ್ಟು ಮಧುರ ಮಾತನಾಡುತ್ತೀರಿ! ಎಷ್ಟು ಚೆನ್ನಾಗಿದ್ದೀರಿ ನೀವು ! ಎಂದು ಅವನು ಉದ್ಗರಿಸುತ್ತಿದ್ದ. ಒಮ್ಮೆ ಮಧ್ಯಾಹ್ನ ವಿಶ್ವನಾಥ ಬಾವೀಕಟ್ಟೆಯಲ್ಲಿ ಸ್ನಾನ ಮಾಡುತ್ತಿದ್ದರು. ಅಲ್ಲಿಗೆ ಹುಚ್ಚಪ್ಪಾ ಬಂದು ಹೇಳಿದ - ವಿಶ್ವನಾಥಾ! ನನಗಾದರೋ ಈ ಗೊಂದವಲೆಯ ಸುತ್ತಲು ಬೆಂಕಿಯ ಜ್ವಾಲೆ ಕಾಣುತ್ತಿವೆ. ಅವನು ಮಹಾರಾಜರನ್ನು 'ದಾದಾ' ಎಂದು ಹೇಳುತ್ತಿದ್ದನು. ಮುಂದೆ ಹೇಳಿದ - 'ವಿಶ್ವನಾಥಾ! ದಾದಾ ಇನ್ನು ಹೆಚ್ಚುದಿನ ಇರಲಾರರು, ನಿನಗೆ ಕಷ್ಟವಾದೀತು, ಆದರೆ... ಆದರೆ ಅವರ ಆಶೀರ್ವಾದದಿಂದ ನಿನ್ನ ಕಲ್ಯಾಣವಾದೀತು'. ಉತ್ಸವಕ್ಕಾಗಿ ಅಣ್ಣಾಸಾಹೇಬ ಘಾಣೇಕರರು ಒಂದು ತಿಂಗಳ ರಜೆ ತೆಗೆದುಕೊಂಡಿದ್ದರು. ಉತ್ಸವ ಆದ ಬಳಿಕವೂ ಅವರು ಗೊಂದವಲೆಯಲ್ಲೇ ಉಳಕೊಂಡಿದ್ದರು. ಒಂದು ದಿನ ಹುಚ್ಚಪ್ಪಾ ಅಣ್ಣಾಸಾಹೇಬರಿಗೆ ಹೇಳಿದ - ಅಣ್ಣಾ ನೀವು ಇಲ್ಲೇ ಇರಿ. ಇನ್ನು ದಾದಾರವರ ಕುರಿತು ಹೇಳಲಾಗುವುದಿಲ್ಲ, ಅವನ ಕಣ್ಣುಗಳಲ್ಲಿ ನೀರೂರಿತು. ಶ್ರೀಮಹಾರಾಜರು ಗೊಂದವಲೆಯ ಸಂತೆ ಗುರುವಾರ ನಿಶ್ಚಯಿಸಿದ್ದರು. ಒಂದು ಗುರುವಾರ ಅಪ್ಪಾ ಸಂತೆಗೆ ಬಂದಿದ, ಅವನನ್ನು ನೋಡಿ ಓರ್ವ ತರಕಾರಿ ಕೊಂಡುಕೊಳ್ಳುತ್ತಿದ್ದ ತಂಗಿ ಹೇಳಿದಳು- ಅಪ್ಪಾ! ಸಂತೆಯಲ್ಲಿ ನಿನಗೇನು ಕೆಲಸ? ಹುಚ್ಚಪ್ಪ ಕಾತರ ಸ್ವರದಲ್ಲಿ ಹೇಳಿದ - ತರಕಾರಿ ತೆಗೆದುಕೊಳ್ಳಿ. ಮುಂದೆ ಒಂದು ದಿನ ಹುಚ್ಚಪ್ಪ ರಾಮಮಂದಿರಕ್ಕೆ ಬಂದನು, ಶ್ರೀಮಹಾರಾಜರು ಅವನನ್ನು ಕರೆದು ಪಕ್ಕದಲ್ಲಿ ಕುಳ್ಳಿರಿಸಿ ಕೊಂಡರು. ಅಪ್ಪಾ ಹೇಳಿದ - ಮಹಾರಾಜ! ನನಗೆ ಆಜ್ಞೆ ಕೊಡಿ, ನಾನು ಮುಂದೆ ಹೋಗುತ್ತೇನೆ. ಶ್ರೀಮಹಾರಾಜರು ಅವನಕಡೆ ಪ್ರೇಮದಿಂದ ನೋಡಿ, ಮೃದುಸ್ವರದಲ್ಲಿ ಹೇಳಿದರು - ನೀನು ಮುಂದೆ ಹೋಗಲು ಹೇಳುತ್ತಿರುವೆ, ಹೋಗಪ್ಪ, ಹೋಗು, ಆದರೆ ಮಧ್ಯಾಹ್ನ ರಾಮಪ್ರಸಾದ

ತೆಗೆದುಕೊಳ್ಳದೆ ಹೋಗಬೇಡ. ರಾಮಪ್ರಸಾದ ತೆಗೆದುಕೊಂಡು ಹೋಗು. ಮಧ್ಯಾಹ್ನ ಪ್ರಸಾದದ ಸಮಯ ಶ್ರೀಮಹಾರಾಜರು ಅವನನ್ನು ಹತ್ತಿರ ಕುಳ್ಳಿರಿಸಿಕೊಂಡು ಪ್ರೇಮದಿಂದ ಊಟ ಹಾಕಿದರು. ಈ ಅಪ್ಪಾ ಶ್ರೀಮಹಾರಾಜರಿಗೆ ಎಂದೂ ನಮಸ್ಕಾರ ಮಾಡುತ್ತಿರಲಿಲ್ಲ. ಅಂದು ಮಾತ್ರ ಅವನು ಭಕ್ತಿಭಾವದಿಂದ ಶ್ರೀಮಹಾರಾಜರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದ. ಮರುದಿನ ಹುಚ್ಚಪ್ಪನು ನದೀತೀರದಲ್ಲಿ ದೇಹವಿಟ್ಟನು.

□□

## -: ಮೂವತ್ತೊಂಭತ್ತು :-

# ಶ್ರೀಮಹಾರಾಜರ ಪಾರಲೌಕಿಕ ವ್ಯಕ್ತಿತ್ವ

ಶ್ರೀಮಹಾರಾಜರಿಗೆ ಈಗ ಬಳಲಿಕೆ ತಿಳಿಯ ತೊಡಗಿತ್ತು , ಆದರೆ ಅವರ ನಿತ್ಯಕ್ರಮ ಎಂದೂ ತಪ್ಪಲಿಲ್ಲ. ಅಭಂಗ ಹಾಡತೊಡಗಿದರೆ ಸ್ವರ-ತಾಲ-ಲಯ ಓರ್ವ ನಿಷ್ಣಾತ ಗಾಯಕನಂತೆ ಇತ್ತು , ಭಾವವಾದರೋ ಉತ್ಕಟವಾಗಿತ್ತು , ಕೇಳುವವರ ಕಣ್ಣುಗಳಿಂದ ಅಶ್ರುಹರಿಯುತ್ತಿದ್ದವು, ಕೊನೆಯವರೆಗೆ ಶ್ರೀಮಹಾರಾಜರು ಗೊಂದವಲೆಗೆ ಬರುವ ಪ್ರತಿಯೊಬ್ಬನಿಗೂ ಊಟ ಹಾಕಿದರು, ನಾಮದ ಮಾಹಾತ್ಮ್ಯ ತಿಳಿಸಿಕೊಟ್ಟರು, ಗುರು ಮಾಹಾತ್ಮ್ಯ ತಿಳಿಸುವಾಗ ಅವರು ಹೇಳುತ್ತಿದ್ದರು- ದೇವರ ಪೂಜೆಗಿಂತ ಗುರುಸೇವೆ ಕಠಿಣವಾಗಿರುತ್ತದೆ, ಸಂತ ಏಕನಾಥರು ಜನಾರ್ದನ ಸ್ವಾಮಿಯ ಸೇವೆ ಮಾಡಿದರು, ಕಲ್ಯಾಣ ಸ್ವಾಮಿಗಳು ಸಮರ್ಥ ರಾಮದಾಸ ಸ್ವಾಮಿಗಳ ಸೇವೆ ಮಾಡಿದರು, ಗುರುಗಳ ಏಕನಿಷ್ಠ ಸೇವೆ ದೇಹಬುದ್ಧಿ ನಾಶಮಾಡುತ್ತದೆ.

ಶ್ರೀಮಹಾರಾಜರು ಬಾಲ್ಯದಲ್ಲಿ ಗುರುಗೃಹ ಯೆಹಳೆಯಲ್ಲಿದ್ದಾಗಿನ ನೆನಪುಗಳು ಅವರ ಮನಸ್ಸಿನಲ್ಲಿ ಮರುಕಳಿಸಿದವು. ಅವರ ಗುರುಗಳು ತುಕಾಮಾಯಿ, ಸಣ್ಣವರಿದ್ದಾಗಲೇ ಅವರ ತಂದೆ-ತಾಯಿ ದೇವರ ಪಾದ ಸೇರಿದ್ದರು, ಸಿಕ್ಕಿದ್ದು ತಿನ್ನುವುದು, ಕುಡಿಯುವುದು, ಮೈಮೇಲೆ ಬಟ್ಟೆಯ ಎಚ್ಚರವೂ ಇಲ್ಲ, ಕೆಲವೊಮ್ಮೆ ತಲೆಯ ಮೇಲೆ ಟೋಪಿ ಇರುತ್ತಿತ್ತು . ಚಿಲೀಮ ಸೇದುವ ಅಭ್ಯಾಸವಿತ್ತು, ಅವರಿಗೆ ಓರ್ವ ರೈತ ಮಿತ್ರನಿದ್ದನು. ಅವನಲ್ಲಿಗೆ ಹೋಗಿ ಚಿಲೀಮ ಸೇದುವುದು, ಅವನಲ್ಲೇ ಉಳ್ಳಾಗಡ್ಡೆ ರೊಟ್ಟಿ ತಿನ್ನುವುದು, ಅನಂದೀ ವೃತ್ತಿ , ಸಣ್ಣ ಮಕ್ಕಳೊಂದಿಗೆ ಆಡುವಾಗ ಅವರಿಗೆ ಆನಂದವಾಗುತ್ತಿತ್ತು . ಒಮ್ಮೆ ಊರಿನ ಗವಳಿಗಳ ಮಕ್ಕಳು ಗೋವುಗಳನ್ನು ಮೇಯಿಸಲು ಕಾಡಿಗೆ ಹೋಗಿದ್ದರು. ಹಸುಗಳು ಮೇಯ ತೊಡಗಿದಾಗ ಮೈಮೇಲಿನ ಬಟ್ಟೆ ಕಳಚಿ ಮಕ್ಕಳು ನದಿಯಲ್ಲಿ ಈಜತೊಡಗಿದರು. ಅಷ್ಟರಲ್ಲಿ ಅಲ್ಲಿಗೆ ತುಕಾಯಿ ಬಂದರು, ಅವರನ್ನು ನೋಡಿ ಮಕ್ಕಳು ಗಾಬರಿಗೊಂಡರು. ವಾಸ್ತವವಾಗಿ ತುಕಾಮಾಯಿ

ಅಂದರೆ ಆಧ್ಯಾತ್ಮದಲ್ಲಿನ ಉಚ್ಚಾಧಿಕಾರಿ, ಹಸಿವು ತೃಷೆಯ ಪರಿವೆ ಇಲ್ಲ, ಸುಖ-ದುಃಖಗಳಿಂದ ಅತೀತರಾದ ಸತ್ಪುರುಷರು. ಜನರಿಗೆ ಅವರ ಈ ಆಧ್ಯಾತ್ಮಿಕ-ಅಧಿಕಾರದ ಕಲ್ಪನೆ ಇರಲಿಲ್ಲ. ಅವರ ಬಾಹ್ಯ ವರ್ತನೆಯನ್ನು ನೋಡಿ ಜನರು ಅವರನ್ನು 'ಹುಚ್ಚತುಕಾ' ಎಂದು ಹೇಳುತ್ತಿದ್ದರು. ತುಕಾಮಾಯಿ ಬಂದಿರುವುದನ್ನು ನೋಡಿ ಮಕ್ಕಳು ಬೊಬ್ಬೆ ಹಾಕಿದರು – 'ಬಟ್ಟೆ ಕಾಪಾಡಿಕೊಳ್ಳಿರೋ, ತುಕ್ಕಾ ಬಂದ', ಅವಸರದಿಂದ ನೀರಿನಿಂದ ಹೊರಬಂದು, ಬಟ್ಟೆ ಒಟ್ಟು ಮಾಡಲು ತೊಡಗಿದರು, ಗಡಿಬಿಡಿಯಲ್ಲಿ ಒಬ್ಬರ ಬಟ್ಟೆ ಇನ್ನೊಬ್ಬ ಎತ್ತಿಕೊಂಡ, ಎಲವೋ, ಇದು ನಿನ್ನದಲ್ಲ, ನನ್ನದು, ಎಂದು ಹೇಳುತ್ತಾ ಪರಸ್ಪ ಎಳೆದಾಡ ತೊಡಗಿದರು. ಈ ಎಳೆದಾಟದಲ್ಲಿ ಒಬ್ಬನ ಹೊದೆಯುವ ಬಟ್ಟೆ ಹರಿಯಿತು, ಆ ಹುಡುಗ ಅಳತೊಡಗಿದ, ನನ್ನಲ್ಲಿ ಒಂದೇ ಹೊದಿಕೆ, ಅರ್ಧ ಹಾಸಿ ಅರ್ಧ ಹೊದೆಯುತ್ತಿದ್ದೆ, ಈಗ ತಾಯಿ ನನಗೆ ಹೊಡೆಯುವಳು. ತುಕಾಮಾಯಿಯು ಇತರ ಹುಡುಗರಿಗೆ ಹೇಳಿದರು- ಮಕ್ಕಳೇ! ಎಳೆದಾಟದಲ್ಲಿ ಹೊದಿಕೆ ಹರಿಯಿತು, ನೀವೆ ಎಲ್ಲ ಮಾಡಿದಿರಿ, ಅವನ ಹೊದಿಕೆ ತುಂಬಿ ಕೊಡಿ, ಅವರಲ್ಲಿ ಒಬ್ಬ ಹುಡುಗ ಹೇಳಿದ – ನಾವು ಯಾಕೆ ತುಂಬಿ ಕೊಡಬೇಕು? ನೀನು ಬಂದೆ ಎಂದು ನಮ್ಮ ಎಳೆದಾಟ ನಡೆಯಿತು, ನಿನ್ನಿಂದಾಗಿಯೇ ಇದೆಲ್ಲ ಆಯಿತು, ಹೊದಿಕೆ ನೀನೇ ತುಂಬಿಕೊಡು. ಯಾರ ಹೊದಿಕೆ ಹರಿದಿತ್ತೋ ಅವನು ಜೋರಾಗಿ ಅಳತೊಡಗಿದ. ತುಕಾಮಾಯಿ ಅವನಿಗೆ ಪ್ರೇಮದಿಂದ ಹೇಳಿದರು – ಮಗು ! ಹೊದಿಕೆ ಹರಿದಿದೆಯಲ್ಲಾ ! ಇಷ್ಟು ಏಕೆ ಅಳುತ್ತೀ ? ಅಳಬೇಡ, ನಾನು ನಿನಗೆ ಪಾಂಡುರಂಗನ ಸುಂದರ ಶಾಲು ಕೊಡುತ್ತೇನೆ. ತುಕಾಮಾಯಿಯವರು ತಮ್ಮ ನಿಲುವಂಗಿಯ ಒಳಗಿಂತ ಒಂದು ಚೆನ್ನಾದ ದೊಡ್ಡ ಶಾಲು ತೆಗೆದು ಆ ಮಗನಿಗೆ ಕೊಟ್ಟರು. ಮಕ್ಕಳು ಆನಂದಗೊಂಡರು, ಎಲ್ಲರೂ ಕಬಡ್ಡಿ ಆಡಿದರು, ಮತ್ತೆ ತುಕಾಯಿ ಮಕ್ಕಳಿಗೆ ಹೇಳಿದರು -ಮಕ್ಕಳೇ ನನಗೆ ಹಸಿವು ಆಗಿದೆ, ಮಕ್ಕಳು ಬರುವಾಗ ಬುತ್ತಿ ತಂದಿದ್ದರು. ಯಾರೋ ರೊಟ್ಟಿ ಚಟಣಿ, ಯಾರೋ ನುಚ್ಚು, ಯಾರೋ ಅಂಬಲಿ ಯಾರೋ ಥಾಲಿಪಿಟ್ಟು, ಹೀಗೆ ಬೇರೆ-ಬೇರೆ ಪದಾರ್ಥ ತಂದಿದ್ದರು. ತುಕಾಮಾಯಿಯವರು ಎಲ್ಲ ಪದಾರ್ಥ ಬೆರೆಸಿದರು, ಎಲ್ಲರಿಗೆ ಹಂಚಿದರು, ತನಗಾಗಿಯೂ ತೆಗೆದುಕೊಂಡರು. ಎಲ್ಲರೂ ತಿನ್ನತೊಡಗಿದರು, ಒಬ್ಬ ಹುಡುಗ ಹೇಳಿದ-ತುಕ್ಕಾ ! ಇದರೊಂದಿಗೆ ತಿನ್ನಲು ಉಳ್ಳಾಗಡ್ಡಿ ಬೇಕು, ಒಳ್ಳೆ ರುಚಿ ಇರುತ್ತದೆ, ತುಕಾಮಾಯಿ ಬೆಬ್ಬೆಯಿಟ್ಟರು – ಪಾಂಡುರಂಗ ! ಉಳ್ಳಾಗಡ್ಡಿ ಬೇಕಾಗಿದೆ, ಅದೇ ಹೊತ್ತಿಗೆ ಒಂದು ಗಂಡ-ಹೆಂಡತಿ ತಲೆಯಲ್ಲಿ ಬುಟ್ಟಿಯನ್ನಿಟ್ಟುಕೊಂಡು ಹೋಗುತ್ತಿದ್ದರು. ಬುಟ್ಟಿಯಲ್ಲಿ ಉಳ್ಳಾಗಡ್ಡೆ ಇತ್ತು.

ತುಕಾಮಾಯಿ ಅವರಿಂದ ಉಳ್ಳಾಗಡ್ಡಿ ಪಡೆದರು. ಮಕ್ಕಳಿಗೆ ಅನಿಸಿತು, ಎಲ್ಲ ಆನಂದೀ, ಆನಂದ. ಶ್ರೀಮಹಾರಾಜರು ಉದ್ಗರಿಸಿದರು – ತುಕಾಮಾಯಿಯಂತಹ ಸಂತರು ಸಿಗುವುದು ಬಹಳ ಕಷ್ಟ! ಇಂದಿನ ಈ ಗೊಂದವಲೆಯ ವೈಭವವೆಲ್ಲ ಕೇವಲ ಅವರ ಕೃಪೆಯಿಂದಲೇ ಇದೆ.

ಪಂಢಪುರದ ಬಡವೆಗಳ ನಿಮಂತ್ರಣ ಬಂತು, ಹಿಂದೆಯೇ ಮಹಾರಾಜರು ಅವರಿಗೆ ವಿಠ್ಠಲ ದರ್ಶನಕ್ಕಾಗಿ ಬರುವೆ ಎದು ಮಾತು ಕೊಟ್ಟಿದ್ದರು. ಜೂನ ತಿಂಗಳ ಮೊದಲನೇ ವಾರ ಶ್ರೀಮಹಾರಾಜರು ಅಂದಾಜು ನೂರು ಜನರೊಂದಿಗೆ ಪಂಢರಪುರಕ್ಕೆ ಹೋದರು. ಶ್ರೀ ಬ್ರಹ್ಮಾನಂದರೂ ಅನೇಕ ಜನರನ್ನು ಕರೆದುಕೊಂಡು ಪಂಢರಪುರಕ್ಕೆ ಬಂದರು. ಆಗ ತುಕಾರಾಮ ಬುವಾ ವಲವ್ಹಣಕರ್ ಎಂಬ ಒಬ್ಬ ದೊಡ್ಡ ಮಠಾಧಿಪತಿ ಪಂಢರಪುರಕ್ಕೆ ಬಂದಿದ್ದರು. ಅವರು ನಿಷ್ಠಾವಂತ ಉಪಾಸಕರಾಗಿದ್ದರು. ಅವರು ವೇದಶಾಸ್ತ್ರ ಸಂಪನ್ನಾಗಿದ್ದರು. ಶ್ರೀಮಹಾರಾಜರು ನಾಮವೇ ಶ್ರೇಷ್ಠ ಎಂದು ಹೇಳಿದರೆ, ತುಕಾರಾಮಬುವಾ ಭಗವಂತನ ರೂಪ ಶ್ರೇಷ್ಠ ಎಂದು ಹೇಳುತ್ತಿದ್ದರು. ಒಂದು ವಿಶೇಷ ಸಭೆ ಸೇರಿತು, ಇಬ್ಬರಲ್ಲಿಯೂ ನಾಮ ಶ್ರೇಷ್ಠವೋ, ರೂಪ ಶ್ರೇಷ್ಠವೋ ಎಂಬ ಚರ್ಚೆ ನಡೆಯಿತು, ದೀರ್ಘ ಚರ್ಚೆಯಲ್ಲಿ ಶ್ರೀಮಹಾರಾಜರು ತುಕಾರಾಮ ಬುವಾರವರಿಗೆ ತಿಳಿಸಿ ಹೇಳಿದರು, ಶ್ರೀಮಹಾರಾಜರ ವಿಚಾರ, ವಿಷಯ ಅವರು ಹೇಳುವ ಕ್ರಮದಿಂದಾಗಿ ಅವರು ವಿಲಕ್ಷಣ ಪ್ರಭಾವಿತರಾದರು. ಶ್ರೀಮಹಾರಾಜರು ಇಡೀ ಸಭೆಯನ್ನು ಮಂತ್ರ ಮುಗ್ಧ ಗೊಳಿಸಿದರು. ಬುವಾರವರ ಕಣ್ಣುಗಳಿಂದ ನೀರು ಹರಿಯಿತು, ಅವರು ಮಹಾರಾಜರ ಚರಣಗಳಲ್ಲಿ ಶಿರ ಚಾಚಿದರು. ಮಹಾರಾಜರು ಅವರನ್ನು ಎಬ್ಬಿಸಿ ದೃಢವಾಗಿ ಆಲಂಗಿಸಿಕೊಂಡರು, ಅವರ ಕೊರಳಿಗೆ ತುಳಸಿಯ ಮಾಲೆ ಹಾಕಿದರು.

ಶ್ರೀಬ್ರಹ್ಮಾನಂದರು ಮಹಾರಾಜರನ್ನು ಬೀಳ್ಕೊಂಡು ಹೊರಟರು, ಅವರು ಶ್ರೀಮಹಾರಾಜರ ಚರಣದಲ್ಲಿ ಮಸ್ತಕವನ್ನಿಟ್ಟರು. ಮಹಾರಾಜರು ಅವರನ್ನು ಎಬ್ಬಿಸಿ ಹೇಳಿದರು – ಈಗ ನಮ್ಮ ಈ ಲೋಕದ ಕೆಲಸ ಮುಗಿಯಿತು, ಕೆಲವೇ ದಿನಗಳಲ್ಲಿ ಈ ಇಹಲೋಕ ಬಿಟ್ಟು ನಾವು ಹೋಗುತ್ತೇವೆ. ಶ್ರೀಬ್ರಹ್ಮಾನಂದರ ಕಣ್ಣುಗಳ ನೀರು ನಿಂತಿರುತ್ತಿರಲಿಲ್ಲ. ಅವರು ಶ್ರೀಮಹಾರಾಜರನ್ನು ಕಣ್ತುಂಬಾ ನೋಡಿಕೊಂಡರು, ಭಾರವಾದ ಅಂತಃಕರಣದಿಂದ ಅವರು ಹೊರಟು ಹೋದರು.

ಹದಿನೈದು ಸೆಪ್ಟಂಬರ ನಂತರ ಶ್ರೀಮಹಾರಾಜರು ಗೊಂದವಲೆಗೆ ಮರಳಿದರು. ಏಳೆಂಟು ದಿನ ಆದಾಗ ಅವರಿಗೆ ಪುನಃ ಕುವರಲೀಲಾಗೆ ಆಮಂತ್ರಣ ಬಂತು. ಅಲ್ಲಿ

ದಾಮೋದರ ಬುವಾರವರು ದೊಡ್ಡ ರಾಮಮಂದಿರ ಕಟ್ಟಿದ್ದರು. ಶ್ರೀಮಹಾರಾಜರು ಕುವರಲೀಲಾಗಿ ಹೋಗಿ ಬಂದರು. ಈಗ ಶ್ರೀಮಹಾರಾಜರು ಸಿದ್ಧತೆ ಪ್ರಾರಂಭಿಸಿದರು. ಮಾರ್ಗಶೀರ್ಷ ಶುದ್ಧ ಪೌರ್ಣಿಮೆ, ದತ್ತಜಯಂತಿಯ ಉತ್ಸವವಿತ್ತು, ಶ್ರೀಮಹಾರಾಜರ ದಮ್ಮು ಜಾಸ್ತಿಯಾಗಿತ್ತು, ಆದರೂ ಅವರು ದತ್ತಮಂದಿರಕ್ಕೆ ಹೋಗಿ ಶ್ರೀದತ್ತಾತ್ರೇಯರ ದರ್ಶನ ಪಡೆದರು.

ಈಗ ಶ್ರೀಮಹಾರಾಜರು ಬಳಲಿದ್ದರು. ದಮ್ಮು ಹೆಚ್ಚುತ್ತಲೇ ಇತ್ತು , ಕಾಲುಗಳು ಊದಿಕೊಂಡವು, ಅವರ ಆಹಾರ ಕಡಿಮೆಯಾಯಿತು, ಡಾ।। ಗೋಪಾಳರಾವ ಜೋಷಿ ಅವರ ಆರೋಗ್ಯವನ್ನು ನೋಡಿಕೊಳ್ಳುತ್ತಿದ್ದರು. ಅದೇ ಸಮಯ ಡಾ।। ಕುರ್ತಕೋಟಿ ಅವರನ್ನು ಭೆಟ್ಟಿಯಾಗಲು ಬಂದರು. ಮಹಾರಾಜರು ಅವರಿಗೆ ಹೇಳಿದರು - ನಾಮಸ್ಮರಣೆ ಬಹಳ ಸುಲಭ, ಸ್ವತಃ ನಾವೇ ಅದಕ್ಕೆ ಅಡ್ಡ ಬರುತ್ತೇವೆ, ಅದನ್ನು ಕಾಪಾಡಿಕೊಳ್ಳಬೇಕು. ಜಗತ್ತಿನ ಹಿಂದೆ ಬೀಳದೆ ರಾಮನಾಮ ಜಪಿಸಬೇಕು. ಶ್ರೀರಾಮನು ಎಲ್ಲರ ಕಲ್ಯಾಣ ಮಾಡುವನು.

ಮ್ಹಸವಡದ ನಾಗೋಬಾನ ಜಾತ್ರೆಯಲ್ಲಿ ಬಹಳ ಗೋವುಗಳು ಮಾರಾಟಕ್ಕೆ ಬರುತ್ತವೆ. ಶ್ರೀಮಹಾರಾಜರು ಕೊನೆಯ ಗೋಸೇವೆ ಎಂದು ಅನೇಕ-ಗೋವುಗಳನ್ನು ಖರೀದಿಸಿದರು. ಒಂದು ತುಂಟ ಎತ್ತೂ ಇತ್ತು, ಸಂತ ಸಹಸವಾಸದಿಂದ ಅದು ಶಾಂತವಾಯಿತು. ಶ್ರೀಮಹಾರಾಜರು ನಾನು ನೈಮಿಷಾರಣ್ಯಕ್ಕೆ ಹೊರಟೆ ಎಂದು ಎಲ್ಲರಿಗೂ ಹೇಳುತ್ತಿದ್ದರು, ಆದರೆ ಭಕ್ತಮಂಡಳಿ ಇದನ್ನು ನಂಬುತ್ತಿರಲಿಲ್ಲ, ಶ್ರೀಮಹಾರಾಜರ ಬತಾಶಾ ಕುದುರೆ ಅವರ ಪರಮ ಭಕ್ತವಾಗಿತ್ತು , ಶ್ರೀಮಹಾರಾಜರು ಬಹಳ ದಿನ ಅವನ ಮೇಲೆ ಕುಳಿತಿರಲಿಲ್ಲ, ಅದು ತಂಟೆ ಮಾಡುತ್ತಿತ್ತು . ವಿಶ್ವನಾಥನು ಮಹಾರಾಜರಿಗೆ ಬಂದು ಹೇಳಿದ. ಶ್ರೀಮಹಾರಾಜರು ಬತಾಶಾ ಬಳಿಗೆ ಹೋಗಿ ಪ್ರೇಮದಿಂದ ಅದರ ಬೆನ್ನು ಸವರಿದರು, ಅದರ ಮೇಲೆ ಕುಳಿತು ನಾಲ್ಕೈದು ಮೈಲು ಓಡಿಸಿದಾಗ ಬತಾಶಾ ಶಾಂತವಾಯಿತು.

ಶ್ರೀಮಹಾರಾಜರು ಅತಿಶಯ ಸಾದಾ ವೃತ್ತಿಯವರು. ಸೊಂಟಕ್ಕೆ ದಪ್ಪ ಉಡಿದಾರ, ಲಂಗೋಟಿ, ಹೆಚ್ಚಿನ ಸಮಯ ಸೊಂಟದ ಮೇಲೆ ಬರಿಮೈ , ಕೆಲವು ಪ್ರಸಂಗದಲ್ಲಿ ಸೊಂಟದಲ್ಲಿ ಪೀತಾಂಬರ, ಧೋತಿ, ಮೇಲೆ ಕಫನಿ ಅಥವಾ ಛಾಟಿ ಇರುತ್ತಿತ್ತು . ತಲೆಗೆ ಮುಂಡಾಸು ಅಥವಾ ವಲ್ಲಿ ಸುತ್ತಿಕೊಳ್ಳುತ್ತಿದ್ದರು. ಎಂದಾದರು ಟೋಪಿ ಧರಿಸುತ್ತಿದ್ದರು. ಕಾಲಿಗೆ ಪಾದುಕೆ, ರಾಮನ ಎದುರಿಗೆ ಇಟ್ಟ ಕುರ್ಚಿಯಲ್ಲಿ ದಿಂಬಿಗೆ ಒರಗಿ ಅವರು ಕುಳಿತುಕೊಳ್ಳುತ್ತಿದ್ದರು. ಅವರ ಬಟ್ಟೆ ವಾಮನರಾವ

ಜ್ಞಾನೇಶ್ವರೀ ನೋಡಿಕೊಳ್ಳುತ್ತಿದ್ದರು. ಶ್ರೀಮಹಾರಾಜರು ಉತ್ತಮ ಅಶ್ವಾರೋಹಿಯಾಗಿದ್ದರು. ಅವರು ಕುದುರೆಯಂತಹ ಪ್ರಾಣಿಯನ್ನು ಪ್ರೇಮದಿಂದ ತನ್ನವನನ್ನಾಗಿಸುತ್ತಿದ್ದರು. ಅವರು ನಿಷ್ಣಾತ ಈಜುಗಾರರು, ನೋಡು ನೋಡುತ್ತಾ ಅವರು ಗಂಗೆಯ ಆಚೆ ದಡಕ್ಕೆ ತಲುಪುತ್ತಿದ್ದರು. ಆನಂದೀ ವೃತ್ತಿ , ಹುಡುಗಾಟದ ಸ್ವಭಾವ ಬಾಲ್ಯದಿಂದಲೇ ಕುಂಟಾಟ, ಖೋಖೋ, ಕಣ್ಣು ಮುಚ್ಚಾಲೆ ಮುಂತಾದವು ಮೆಚ್ಚಿನ ಆಟ, ಮರಹತ್ತುವುದರಲ್ಲಿ ಅವರು ಪಾರಂಗತರಾಗಿದ್ದರು. ಶ್ರಮಜೀವಿ, ಆ ಪ್ರಮಾಣದಲ್ಲಿ ಊಟ ಕಡಿಮೆ, ಸಿಹಿ ಅಷ್ಟಾಗಿ ಮೆಚ್ಚುತ್ತಿರಲಿಲ್ಲ. ಜೋಳ ಅಥವಾ ಸಜ್ಜೆಯ ರೊಟ್ಟಿ, ಸಾರು ಇಲ್ಲವೆ ಝುಣಕ ಹೀಗೆ ಸಾದಾ ಊಟವೇ ಮೆಚ್ಚುತ್ತಿದ್ದರು. ಒಂಟಿಯಾಗಿ ತಿರುಗಾಡುತ್ತಿರುವಾಗ ಒಣಹಿಟ್ಟನ್ನು ನದೀನೀರಿನಲ್ಲಿ ಕಲಿಸಿ ತಿನ್ನುತ್ತಿದ್ದರು. ಎಂದಾದರೂ ಅದರ ರೊಟ್ಟಿ ಸುಟ್ಟು ತಿನ್ನುವುದು, ಕಾಡುದಾರಿಯಿಂದ ಹೋಗುವಾಗ ಅಲ್ಲಿಯ ಕಂದ-ಮೂಲಗಳನ್ನು ತಿನ್ನುವುದು.

ಶ್ರೀಮಹಾರಾಜರ ದಿನಚರಿ ಬೆಳಗಿನ ಝೂವ ಐದೂವರೆಗೆ ಎಚ್ಚರ, ಶೌಚ-ಮುಖ ಮಾರ್ಜನ, ಶ್ರೀರಾಮದರ್ಶನ, ಕುರ್ಚಿಯಲ್ಲಿ ಕುಳಿತು ಭಕ್ತಮಂಡಳಿಯ ಭೆಟ್ಟಿ, ಶಂಕಾನಿವಾರಣ, ಬೆಳಿಗ್ಗೆ ಒಂಭತ್ತಕ್ಕೆ ಯಾವುದಾದರೂ ಓವಿ ಅಥವಾ ಅಭಂಗದ ಮೇಲೆ ಒಂದುಗಂಟೆ ನಿರೂಪಣ, ಬಳಿಕ ಎಂದಾದರೂ ಹಳ್ಳದಲ್ಲಿ ತಣ್ಣೀರಿನಿಂದ ಸ್ನಾನ, ಎಂದಾದರೂ ಮಂದಿರದಲ್ಲಿ ಬಿಸಿ ನೀರಿನ ಸ್ನಾನ, ಅನಂತರ ಹಣೆಗೆ ಗಂಧ-ಮುದ್ರೆ ಹಚ್ಚಿಸಂಧ್ಯೆ , ಅಷ್ಟೊತ್ತಿಗೆ ಮಧ್ಯಾಹ್ನ ಹನ್ನೆರಡು ಆಗುತ್ತಿತ್ತು. ಮತ್ತೆ ಎಂದಾದರು ಗ್ರಂಥ ಪಠಣ, ಎಂದಾದರೂ ಹೊಲ ನೋಡಿಕೊಂಡು ಬರುವುದು, ಅನಂತರ ಶ್ರೀರಾಮನಿಗೆ ನೈವೇದ್ಯ ಮಾಡಿ ಭೋಜನ ಪ್ರಸಾದ, ಗೊಂದವಲೆಯಲ್ಲಿ ನಾಲ್ಕೈದು ನೂರು ಜನರು ಊಟಕ್ಕೆ, ಅವರ ವ್ಯವಸ್ಥೆ, ಅವರ ಸಮಸ್ಯೆ ನಿವಾರಣೆ ಇದರಲ್ಲೆ ಮಧ್ಯಾಹ್ನ ನಂತರದ ಬಹಳ ಹೊತ್ತು ಹೋಗುತ್ತಿತ್ತು , ಸ್ವಲ್ಪ ವಿಶ್ರಾಂತಿ ಆದ ಬಳಿಕ ಮೂರೂವರೆಗೆ ಮಂದಿರದಲ್ಲಿಗ್ರಂಥ ಪಠಣ, ಸಾಯಂ ಆರತಿ, ಫಲಹಾರ, ಭಜನೆ ಆರತಿ, ಎಲ್ಲ ಜನರು ಮಲಗಿದ ಬಳಿಕ ಶ್ರೀಮಹಾರಾಜರು ನಿದ್ರಿಸುತ್ತಿದ್ದರು.

ಶ್ರೀಮಹಾರಾಜರ ವಾಣಿ ಮೃದು ಮತ್ತು ಮಧುರ, ಸುಂದರ ತಿದ್ದಿದ ಅಕ್ಷರ, ಶ್ರೀರಾಮನ ನಾಮಸ್ಮರಣ ಅತಿ ಪ್ರಿಯ, ಭಜನೆ ಹಾಡುವಾಗ ಅವರು ತಲ್ಲೀನರಾಗುತ್ತಿದ್ದರು, ಭಾವಪೂರ್ಣ ಭಜನೆ ಹಾಡುತ್ತಿದ್ದರು. ಶ್ರೀಮಹಾರಾಜರು ಸ್ವತಃ ಶ್ರೀರಾಮನ ಪರಮ ಭಕ್ತರಾಗಿದ್ದು, ಅದ್ವೈತ ವಾದಿ ಆಗಿದ್ದರು. ತಮ್ಮ ಕರ್ತವ್ಯ

ನಿಷ್ಠೆಯಿಂದ ಮಾಡುವುದು, ದೊರೆತ ಫಲದಲ್ಲಿ ಸಮಾಧಾನ, ನೀತಿಯ ಮರ್ಯಾದೆ ದಾಟಬಾರದು, ಸದಾಚಾರ ಬಿಡಬಾರದು, ಯಾವುದೇ ಪರಿಸ್ಥಿತಿಯಲ್ಲಿ ನಿರಾಶರಾಗಬಾರದು, ಸಂಸಾರ ಉತ್ತಮವಾಗಿ ನಡೆಸಬೇಕು ಹಾಗೂ ಅದರಲ್ಲಿ ಲಿಪ್ತರಾಗಬಾರದು, ಸತತ ನಾಮಸ್ಮರಣೆ ಮಾಡಬೇಕು, ಪ್ರಪಂಚವನ್ನು ಪರಮಾರ್ಥವಾಗಿಸಬೇಕು, ಶ್ರೀಮಹಾರಾಜರು ಸಣ್ಣವರು, ದೊಡ್ಡವರು ಸಂನ್ಯಾಸಿಗಳೊಡನೆ ಪ್ರೇಮದಿಂದ, ಆದರದಿಂದ ನಡೆದುಕೊಳ್ಳುತ್ತಿದ್ದರು. ಅವರ ಮನಸ್ಸಿನಲ್ಲಿ ಸ್ತ್ರೀಯರ ಕುರಿತು ಪರಮಾದರವಿತ್ತು , ಅವರು ಸ್ತ್ರೀಯನ್ನು ಪೂಜನೀಯ, ವಂದನೀಯ ತಿಳಿಯುತ್ತಿದ್ದರು. ಸಾದಾ ವೃತ್ತಿಯ ಶ್ರೀಮಹಾರಾಜರಲ್ಲಿ ಲೀನತೆ, ಸಹನಶೀಲತೆ, ನಿರಲಸತಾ, ಆರ್ಜವ ಮತ್ತು ಸಮಾಧಾನ ಹೀಗೆ ಅಲೌಕಿಕ ಗುಣಗಳು ಒಟ್ಟಿಗೆ ಸೇರಿದ್ದವು.

ಶ್ರೀಮಹಾರಾಜರಿಗೆ ಅಕ್ಷರಶಃ ಲಕ್ಷಾವಧಿ ಶಿಷ್ಯರು ಇದ್ದರು. ಅವರಲ್ಲಿ ಪ್ರಮುಖರನ್ನು ನೋಡುವಾ. ಶ್ರೀಗೋವಿಂದ ಅನಂತ ಕುಲಕರ್ಣಿ ಹಾಗೂ ಶ್ರೀಆನಂದಸಾಗರ, ಶ್ರೀ ಅನಂತ ರಾಮಭಟ್ಟ ಗಾಢಗುಳಿ ತಥಾ ಬ್ರಹ್ಮಾನಂದರು, ಶ್ರೀ ಅಪ್ಪಾಸಾಹೇಬ ಭಡಗಾವಕರ್, ಶ್ರೀಭಾವು ಸಾಹೇಬ ಕೇತಕರ್, ಶ್ರೀಹಣಮಂತರಾವ ಕುಲಕರ್ಣಿ, ಶ್ರೀಭಯ್ಯಾಸಾಹೇಬ ಮೋಡಕ, ಶ್ರೀ ನೀಲಕಂಠಬಾಬಾ ಲೋಖಂಡೆ, ಶ್ರೀವಿಶ್ವನಾಥ, ಶ್ರೀಕೃಷ್ಣಶಾಸ್ತ್ರೀ ಉಪ್ಪಿನಬೆಟಗೇರಿ, ಶ್ರೀರಾಮಾನಂದ ಹಾಗೂ ಪಾಂಡುರಂಗ ಬುವಾ, ಶ್ರೀಶಿವಪ್ಪ ಕುಲಕರ್ಣಿ, ಶ್ರೀಬಳವಂತರಾವ ಫಾಣೇಕರ್, ಶ್ರೀ ಅಣ್ಣಾ ಸಾಹೇಬ ಮನೋಹರ, ಶ್ರೀಕೃಷ್ಣದಾಸ, ಶ್ರೀ ಗುಂಜೂರು ವ್ಯಂಕಣ್ಣಯ್ಯ, ಡಾ।। ಕುರ್ತಕೋಟಿ, ಶ್ರೀಗಣಪತರಾವ ದಾಮಲೆ, ಶ್ರೀರಾಮಕೃಷ್ಣ ದಾಮಲೆ, ಶ್ರೀಭೀಮರಾವ ಗಾಡಗುಳಿ, ಡಾ।। ಪಾಥರಕರ್, ವೈದ್ಯ ಹಣಮಂತರಾವ ಮಾಸ್ತರ, ಶ್ರೀನಾರಾಯಣಪ್ಪ ಕುಂದಗೋಳ, ಶ್ರೀನಾನಾಚಾರ್ಯ, ಶ್ರೀತಾತ್ಯಾಸಾಹೇಬ ಕೇತಕರ್.

ಪುರುಷ ಶಿಷ್ಯರಂತೆಯೇ ಮಹಾರಾಜರಿಗೆ ಸ್ತ್ರೀ ಶಿಷ್ಯವರ್ಗವೂ ದೊಡ್ಡದಾಗಿತ್ತು . ಸೌ।। ಯಮುನಾ ಕೇತಕರ್, ಶ್ರೀಮಹಾರಾಜರ ಅಡಿಗೆಮನೆ ನೋಡಿಕೊಳ್ಳುವ ಮುಕ್ತಾಬಾಯಿ, ಮುಳಗುಂದದ ಗಂಗೂತಾಯಿ ಆಠವಳೆ, ಭಾವುಸಾಹೇಬರ ಪತ್ನೀ ಸೌ। ಕಾಶಿತಾಯಿ ಹೀಗೆ ಅವರ ಪರಮಶಿಷ್ಯಾ ಎಂದು ಹೇಳಬಹುದು.

ಶ್ರೀಬ್ರಹ್ಮಾನಂದ ಮಹಾರಾಜರು ಶ್ರೀಮಹಾರಾಜರ ಗುರುಪರಂಪರೆ ವರ್ಣಿಸುವ ಶ್ಲೋಕಬರೆದಿರುವರು.

**ನಾರಾಯಣಂ ತ್ವಾದಿಗುರುಂ ಪರೇಶಂ, ಚತುರ್ಮುಖಂ ತತ್ಸುತಮಪ್ರಮೇಯಮ್ ।**
**ಶ್ರೀಮದ್ವಸಿಷ್ಠಂ ಖಲು ಬ್ರಹ್ಮನಿಷ್ಠಂ , ಶ್ರೀರಾಮಭೂಪಂ ಹೃತಭಕ್ತತಾಪಮ್ ॥ 1 ॥**
**ಶ್ರೀರಾಮದಾಸಂ ಭವಬಂಧ ನಾಶಮ್, ಕಲ್ಯಾಣ ಮೀಡ್ಯಂ ಗುರುಬಾಲಕೃಷ್ಣಮ್ ।**
**ಚಿಂತಾಮಣಿಂ ರಾಮಪದಾಬ್ಜ ಭೃಂಗಮ್, ಶ್ರೀರಾಮಕೃಷ್ಣಂ ಪರತಃ ಪರಂ ಚ ॥ 2 ॥**
**ಶ್ರೀಮತ್ತುಕಾರಾಮಮನಂತಶಕ್ತಿಮ್, ಸಚ್ಚಿದ್‌ಘನಂ ಲೋಕಮಲಘ್ನಕೀರ್ತಿಮ್ ।**
**ಮತ್ಸದ್ಗುರುಂ ರಾಘವರೂಪಮೀಶಮ್, ಶ್ರೀಬ್ರಹ್ಮಚೈತನ್ಯಮಗಾಧ ಬೋಧಮ್ ॥ 3 ॥**
**ಅಖಂಡನಾಮಾಮೃತಪಾನ ತೃಪ್ತಮ್, ದಯಾರ್ಣವಂ ಪಾವಿತ ಶಿಷ್ಯ ವೃಂದಮ್ ।**
**ಶ್ರೀರಾಮಭಕ್ತಂ ಪ್ರಣಮಾಮಿ ನಿತ್ಯಮ್, ಅಖಂಡ ಭಕ್ತ್ಯಾಽಹಮಾನಂದ ಸಾಗರಮ್ ॥ 4 ॥**

ಎಲ್ಲರ ಸ್ವಾಮೀ ಆದಿಗುರು ಶ್ರೀನಾರಾಯಣ, ಶ್ರೀನಾರಾಯಣ ಶಿಷ್ಯ ಶ್ರೀಬ್ರಹ್ಮಾ, ಶ್ರೀಬ್ರಹ್ಮನ ಶಿಷ್ಯ ಶ್ರೀವಸಿಷ್ಠಮುನಿ, ಶ್ರೀವಸಿಷ್ಠಮುನಿಗಳ ಶಿಷ್ಯ ಶ್ರೀರಾಮಚಂದ್ರ, ಶ್ರೀರಾಮಶಿಷ್ಯ ಶ್ರೀಸಮರ್ಥರಾಮದಾಸ, ಶ್ರೀರಾಮದಾಸ ಶಿಷ್ಯ ಶ್ರೀಕಲ್ಯಾಣಸ್ವಾಮಿ, ಶ್ರೀ ಕಲ್ಯಾಣ ಶಿಷ್ಯ ಶ್ರೀಬಾಲಕೃಷ್ಣ, ಶ್ರೀಬಾಲಕೃಷ್ಣರ ಶಿಷ್ಯ ಶ್ರೀ ಚಿಂತಾಮಣಿ, ಶ್ರೀ ಚಿಂತಾಮಣಿಯವರ ಶಿಷ್ಯ ಶ್ರೀರಾಮಕೃಷ್ಣ, ಶ್ರೀರಾಮಕೃಷ್ಣರೇ ಶ್ರೀಬ್ರಹ್ಮಚೈತನ್ಯರನ್ನು ತುಕಾಮಾಯಿ ಕಡೆಗೆ ಕಳಿಸಿದರು, ಅವರು ಚಿನ್ಮಯಾನಂದರ ಶಿಷ್ಯರಾಗಿದ್ದರು. ಶ್ರೀಬ್ರಹ್ಮಚೈತನ್ಯರ ಶಿಷ್ಯ ಶ್ರೀಆನಂದಸಾಗರ, ಇವರೆಲ್ಲರಿಗೂ ನನ್ನ ಭಕ್ತಿಪೂರ್ವಕ ನಮಸ್ಕಾರ.

□□

-: ನಲವತ್ತು :-

# ದೇವಲೋಕಕ್ಕೆ ಮಹಾಪ್ರಸ್ಥಾನ

1913ರ ಡಿಸೆಂಬ ತಿಂಗಳು, ಭಾರತೀಯ ಮಾರ್ಗಶೀರ್ಷಮಾಸ, ಶ್ರೀಮಹಾರಾಜರು ನಿಜಧಾಮಕ್ಕೆ ಹೋಗುವ ದಿನ ನಿಶ್ಚಯಿಸಿದ್ದರು. ದೇವರೇ ಅವರನ್ನು ಮಹಾನ್ ಕಾರ್ಯಕ್ಕಾಗಿ ಈ ಲೋಕಕ್ಕೆ ಕಳಿಸಿದ್ದನು. ಶ್ರೀಮಹಾರಾಜರು ಸಾಕ್ಷಾತ್ ರಾಮದೂತರೇ ಆಗಿದ್ದರು. ರಾಮನಾಮಕ್ಕಾಗಿ ಅವರು ತಮ್ಮ ಸಂಪೂರ್ಣ ಜೀವನವನ್ನು ಅರ್ಪಿಸಿದ್ದರು. ಈಗ ಅವರು ಎಲ್ಲರಿಗೆ ಹೇಳುತ್ತಿದ್ದರು'', ಬೇಗನೇ ನಾನು ನೈಮಿಷಾರಣ್ಯಕ್ಕೆ ಹೋಗುವವನಿದ್ದೇನೆ.'' ಅರ್ಥಾತ್ ಜನರಿಗೆ ನಿಜವೆನಿಸುತ್ತಿರಲಿಲ್ಲ. ಡಾ।। ಜೋಶೀ ನಿತ್ಯವೂ ಅವರ ಶುಶ್ರೂಷೆ, ಪರೀಕ್ಷೆ ಮಾಡುತ್ತಿದ್ದರು. ಅವರಿಗೂ ಅವರ ಗಮನಕಾಲ ಇಷ್ಟು ಹತ್ತಿರವಿದೆ ಎಂಬುದರ ಕಲ್ಪನೆ ಬರಲಿಲ್ಲ. ಅವರ ಹೃದಯದ ಸ್ಥಿತಿ ಚೆನ್ನಾಗಿರಲಿಲ್ಲ, ಆದರೂ ಅವರೂ ನಿರಾಶರಾಗಿರಲಿಲ್ಲ. ಕೆಲವು ದಿನಗಳ ಹಿಂದೆಯೇ ಮಹಾರಾಜರ ಗಂಟಲಲ್ಲಿ ಅಚಾನಕ ಹುಣ್ಣು ಆಗಿತ್ತು, ಆದರೆ ಅದು ಆದಹಾಗೇ ಹೊರಟುಹೋಯಿತು. ಹಾಗೆಯೇ ಅವರ ಹೃದಯ ಹಿಂದಿನಂತೆ ಚೆನ್ನಾಗಬಹುದು ಎಂದು ಡಾ।। ಜೋಶಿಯವರಿಗೆ ಅನಿಸುತ್ತಿತ್ತು.

ಹದಿನೆಂಟು ಡಿಸೆಂಬರ, ಗುರುವಾರವಿತ್ತು , ಆ ದಿನ ಬೆಳಿಗ್ಗೆ ಶ್ರೀಮಹಾರಾಜರು ಹೆಚ್ಚು ಕಡಿಮೆ ಒಂದೂವರೆ ಗಂಟೆ ನಿರೂಪಣ ಮಾಡಿದರು - ಇದು ಮರ್ತ್ಯಲೋಕವಾಗಿದೆ, ಇಲ್ಲಿ ಏನು ಬರುತ್ತದೋ ಅದು ಹೋಗುತ್ತದೆ, ಎಲ್ಲವೂ ಭಗವಂತನ ಅಧೀನ, ಇದರ ಅರ್ಥ- ಇಲ್ಲಿ ನಡೆಯುವುದೆಲ್ಲವೂ ಭಗವಂತನ ಇಚ್ಛೆಯಿಂದಲೇ, ನಮ್ಮ ದೇಹ ಅವನೇ ಕೊಟ್ಟಿದ್ದು, ನಮ್ಮ ದೇಹದ ಒಡೆಯ ಅವನೇ, ಹುಟ್ಟಿದಂದಿನಿಂದ ಸಾಯುವವರೆಗೆ ಅದನ್ನು ಕಾಪಾಡಿಕೊಳ್ಳಲು ನಮಗೆ ಕೊಟ್ಟಿರುವನು. ಅವನು ನಮ್ಮ ಹೃದಯ ಸ್ಥಾನದಲ್ಲಿ ವಾಸಿಸುತ್ತಿರುವನು, ಅವನಲ್ಲಿ ಅನುಸಂಧಾನ ಇಡುವುದೇ ಈ ಮಾನವೀಜನ್ಮದ ಉದ್ದೇಶವಾಗಿದೆ. ಈ ಅನುಸಂಧಾನ

ನಾಮದಿಂದಲೇ ಸಾಧಿಸುತ್ತದೆ. ನಾಮದಲ್ಲಿ ತೊಡಗಿದಾಗ ದೇಹ ಪ್ರಾರಬ್ಧಾಧೀನ ವಾಗುತ್ತದೆ. ನಿತ್ಯ ವ್ಯವಹಾರ ಪ್ರಾಮಾಣಿಕತೆಯಿಂದ ಮಾಡಬೇಕು. ಆ ವ್ಯವಹಾರ ಈಶ್ವರ ಸಾಕ್ಷಿಯಿಂದ ಮಾಡಬೇಕು. ಸಂಸಾರದ ಕರ್ತವ್ಯ ಮಾಡುವಾಗ ಸತತ ನಾಮಸ್ಮರಣ ಮಾಡಬೇಕು, ಅವನು ಕೊಟ್ಟುದ್ದರಲ್ಲಿ ಸಂತುಷ್ಟನಾಗಿರಬೇಕು. ಆಚರಣೆ ಶುದ್ಧ ಮತ್ತು ಸಾತ್ವಿಕ ಇರಿಸಿಕೊಳ್ಳುವಾ, ವಾಮಮಾರ್ಗ ಹಿಡಿಯಬಾರದು, ಅತೀನಿಯಲ್ಲಿ ವರ್ತಿಸಬಾರದು, ಅಧರ್ಮಾಚರಣೆ ಮಾಡಬಾರದು, ಸಂತವಚನಗಳಲ್ಲಿ ಶ್ರದ್ಧೆ ಇರಿಸಬೇಕು, ರಾಮನಾಮ ಜಪಿಸಬೇಕು, ಹೀಗೆ ನಡೆಯುವರ ರಾಮನು ಕಲ್ಯಾಣ ಮಾಡುವನು.

ಸಂಜೆ ಶ್ರೀಮಹಾರಾಜರು ಸಣ್ಣ ರಾಮಮಂದಿರಕ್ಕೆ ಹೋದರು, ಶ್ರೀರಾಮನ ಚರಣದಲ್ಲಿ ಮಸ್ತಕವನ್ನಿಟ್ಟರು. ಅನಂತರ ಅವರು ಭಾವುರಾವ ಕೇತಕರ್‌ರವರಲ್ಲಿಗೆ ಹೋದರು. ಅವರ ಪತ್ನಿಯು ಅನ್ನ ಮಾಡಿದ್ದರು, ಮಕ್ಕಳು ಊಟ ಮಾಡುವವರಿದ್ದರು, ಶ್ರೀಮಹಾರಾಜರು ಬಂದುದನ್ನು ನೋಡಿ ಇಬ್ಬರಿಗೂ ಅತೀವ ಆನಂದವಾಯಿತು. ಮತ್ತೆ ಅತ್ತಿಗೆಯವರು ಝುಣಕಾ ಮಾಡಿದರು, ಶ್ರೀಮಹಾರಾಜರು ಒಂಟಿಯಾಗಿ ಎಂದೂ ಇರುತ್ತಿರಲಿಲ್ಲ, ಕನಿಷ್ಟ ಹತ್ತು ಹದಿನೈದು ಜನರು ಅವರೊಂದಿಗೆ ಇರುವುದೇ, ಈಗ ಮಾತ್ರ ಅವರು ಒಬ್ಬರೇ ಇದ್ದರು. ಊಟವಾದ ಮೇಲೆ ಭಾವುಸಾಹೇಬರು ಹೇಳಿದರು - ಮಹಾರಾಜ! ಸ್ವಲ್ಪ ವಿಶ್ರಾಂತಿ ಪಡೆಯಿರಿ, ಮಹಾರಾಜರು ಹೇಳಿದರು - ಭಾವುಸಾಹೇಬ! ನಿಜವೆಂದರೆ ರಾಮನು ಪ್ರತಿಯೊಬ್ಬನಿಗೂ ಬೇಕಾದಷ್ಟನ್ನು ಕೊಡುತ್ತಾನೆ, ದೇಹವು ಕಷ್ಟದ್ದು ಮತ್ತು ಮನಸ್ಸು ರಾಮನದ್ದು, ಮನುಷ್ಯನಿಗೆ ದೇವರು ಬೇಕು, ಆದರೆ ಅವನು ಪ್ರಪಂಚದ ಬೇಡಿಕೆಗಾಗಿ, ಎಲ್ಲರೂ ಇಂಗು ಸಾಸಿವೆಯ ಗಿರಾಕಿಗಳು. ದೇವರಿಗಾಗಿ ದೇವರು ನಾಮಕ್ಕಾಗಿ ನಾಮ ಯಾರಿಗೂ ಬೇಡ. ಜನರು ಸುಖ ಅನುಭವಿಸುತ್ತಾರೆ, ಅವರಿಗೆ ದುಃಖ ಬೇಡವಾಗಿದೆ; ಸುಖ-ದುಃಖ ಸಮಾನವಾಗಿ ತಿಳಿಯಬೇಕು.

ಮರುದಿನ ಅಂದರೆ ಶುಕ್ರವಾರ ಅವರು ಭಾವುಸಾಹೇಬರಿಗೆ ಹೇಳಿದರು - ಭಾವುಸಾಹೇಬ! ನಾನು ಸೋಮವಾರ ಹೋಗುವವನು, ಭಾವುಸಾಹೇಬರು ಭಾವಾವಿಷ್ಟರಾದರು, ಅವರು ಹೇಳಿದರು-ನನಗೆ ನಿಮ್ಮ ತೊಡೆಯಲ್ಲಿ ಮೃತ್ಯುಬರಬೇಕೆಂಬ ಇಚ್ಛೆ ಮನಃ ಪೂರ್ವಕವಾಗಿತ್ತು, ನಿಮ್ಮ ತೊಡೆಯಲ್ಲಿ ಮೃತ್ಯು ಬರುವುದು ನನ್ನ ಮನಸ್ಸಿನೊಳಗಿನ ಮಹೋತ್ಸವವಾಗಿತ್ತು, ನನ್ನ ಹಣೆಯಲ್ಲಿ ಆ ಯೋಗವಿಲ್ಲ ಎಂದು ಕಾಣುತ್ತದೆ. ಶ್ರೀಮಹಾರಾಜರು ಅವರಿಗೆ ಹೇಳಿದರು -

ಭಾವುಸಾಹೇಬ! ನನ್ನ ಬಳಿಕ ಹನ್ನೆರಡು ವರ್ಷ ನೀವು ಇಲ್ಲೇ ಇರಿ. ಶ್ರೀಮಹಾರಾಜರು ಭಾವು ಸಾಹೇಬರನ್ನು ಬೀಳ್ಕೊಂಡು ರಾಮ ಮಂದಿರಕ್ಕೆ ಬಂದರು. ಕರ್ನಾಡದ ಒಬ್ಬ ಭಕ್ತ ಶ್ರೀಮಹಾರಾಜರಿಗೆ ಉಡುಗೊರೆಯಾಗಿ ಒಂದು ಕಫನಿ ತೆಗೆದು ಕೊಂಡು ಬಂದಿದ್ದ, ಶ್ರೀಮಹಾರಾಜರು ಅವನ ಒತ್ತಾಯಕ್ಕೆ ತೊಟ್ಟುಕೊಂಡರು, ನಿಜವಾಗಿ ಆರೋಗ್ಯ ಕೆಟ್ಟಿತ್ತು , ಕಾಲು ಊದಿಕೊಂಡಿದ್ದವು, ಆದರೂ ಅವರು ಒಂದು ಕಾಲಿನ ಮೇಲೆ ನಿಂತು ಭಜನೆ ಮಾಡತೊಡಗಿದರು. ಶನಿವಾರ ಶ್ರೀಮಹಾರಾಜರು ಕಿರುರಾಮಮಂದಿರದ ಹತ್ತಿರದ ವೃಂದಾವನದ ಕಡೆಗೆ ಬಂದರು, ಅಲ್ಲಿ ಅವರ ಸಂನ್ಯಾಸಿ ಚಿಕ್ಕಪ್ಪನವರ ಸಮಾಧಿ ಇತ್ತು, ಶನಿವಾರ ಅವರ ಪುಣ್ಯತಿಥಿ ಇತ್ತು.

ಭಾನುವಾರ ಬೆಳಿಗ್ಗೆ ಹತ್ತರ ಸುಮಾರಿಗೆ ಅವರು ಆವುತಾಯಿಯವರನ್ನು ಕರೆಸಿಕೊಂಡರು. ಅವರು ಹೇಳಿದರು – ಆವುತಾಯಿ! ಎಲ್ಲರಿಗೆ ಹೇಳಿ, ಅನ್ನ ಊರಿಗೆ ಹೋಗಿದೆ, ಇದ್ದ ರೊಟ್ಟಿಪಲ್ಯ ತಿನ್ನಬೇಕು, ಆನಂದದಿಂದ ರಾಮನಾಮ ಜಪಿಸಬೇಕು. ಅನಂತರ ಅವರು ಸ್ವಲ್ಪಹೊತ್ತು ಕೋಣೆಯೊಳಗೆ ಹೋಗಿ ಮಲಗಿದರು. ಅಷ್ಟರಲ್ಲಿ ಜೋರಾಗಿ ವಾದ ವಿವಾದದ ಶಬ್ದ ಕೇಳಿ ಬಂತು. ಹೊರಗೆ ಅಂತಾಜೀಪಂತ ಮತ್ತು ಕಾಕಾ ಘಡಕೆ ಇದರಲ್ಲಿ ವಾದ ನಡೆಯುತ್ತಿತ್ತು. ಶ್ರೀಮಹಾರಾಜರು ಅವರಿಗೆ ಏಕೆ ಜಗಳವಾಡುತ್ತೀರಿ? ಎಂದು ಕೇಳಿದಾಗ ಘಡಕೆಯವರು ಹೇಳಿದರು– ನೀವು ಇಲ್ಲದಿದ್ದರೆ ಹೀಗೆ ಜಗಳಗಳು ಆಗುತ್ತವೆ, ಶ್ರೀಮಹಾರಾಜರು ಹೇಳಿದರು– ನಾಳೆ ಬೆಳಗ್ಗೆ ನಾನು ಇಲ್ಲಿ ಇರುವೆನೋ? ಇಲ್ಲವೋ, ನೀವು ರಾಮಗೃಹದಲ್ಲಿ ಇದ್ದೀರಿ, ಸಿಕ್ಕಿದ್ದನ್ನು ಸ್ವೀಕರಿಸಬೇಕು, ರಾಮಪ್ರಸಾದವೆಂದು ತಿಳಿಯಬೇಕು, ವಾದ ಮಾಡಬಾರದು, ಜಗಳವಾಡಬಾರದು. ಸಂಜೆ ಶ್ರೀಮಹಾರಾಜ ಗೋಶಾಲೆಗೆ ಹೋದರು, ಅವರಿಗೆ ಆ ಜಾಗ ತುಂಬಾ ಮೆಚ್ಚುತ್ತಿತ್ತು , ತಮ್ಮ ಕಾಲಿನ ಪಾದುಕೆ ಅವರು ಅಭ್ಯಂಕರ್‌ರವರಿಗೆ ಕೊಟ್ಟು ಹೇಳಿದರು– ಈ ಜಾಗ ಸುಂದರವಾಗಿದೆ, ನನಗೆ ಯಾವಾಗಲೂ ಇಲ್ಲೇ ಇರಬೇಕೆಂದು ಅನಿಸುತ್ತದೆ, ನಾನು ಇಲ್ಲಿಗೆ ಮರಳಿ ಬರುವವರೆಗೆ ಈಪಾದುಕೆಗಳನ್ನು ನಿಮ್ಮ ಬಳಿ ಸಂಭಾಳಿಸಿ ಇಡಿರಿ.

ರಾತ್ರೆಯಾಯಿತು, ಕತ್ತಲೆ ಆವರಿಸಿತು, ಆಪ್ಪಾಜರಂಡೀಕರರು ಉಪವಾಸ ಪ್ರಾರಂಭಿಸಿದ್ದರು, ಇಂದು ಉಪವಾಸದ ಮೂರನೆದಿನ, ಶ್ರೀಮಹಾರಾಜರು ಅಪ್ಪಾರವರ ಕಡೆಗೆ ಹೋದರು, ಶ್ರೀಮಹಾರಾಜರು ಕೇಳಿದರು – ಅಪ್ಪಾ ! ಏನಿದು ಹುಚ್ಚುತನ? ಉಪವಾಸ ಯಾತಕ್ಕೆ? ಅಪ್ಪಾ ಹೇಳಿದರು – ನಿಮ್ಮ ಆರೋಗ್ಯ ಸುಧಾರಿಸಬೇಕೆಂದು ಉಪವಾಸ ಮಾಡುತ್ತಿರುವೆನು, ಶ್ರೀಮಹಾರಾಜರು ಅವರನ್ನು

ಸಮಜಾಯಿಸುತ್ತಾ ಹೇಳಿದರು – ನಾನು ಒಂದೆರಡು ದಿನಗಳಲ್ಲಿ ಹುಷಾರಾಗುವೆ, ನಡೀ ಊಟ ಮಾಡು. ಶ್ರೀಮಹಾರಾಜರು ಅವನಿಗೆ ಒತ್ತಾಯ ಪೂರ್ವಕ ಊಟ ಹಾಕಿದರು ಆರೋಗ್ಯ ಚೆನ್ನಾಗಿರಲಿಲ್ಲ, ಆದರೂ ಅವರು ಶ್ರೀರಾಮ ರಾಯನ ಎದುರಿಗೆ ಭಜನ ನಿರೂಪಣೆಗಾಗಿ ನಿಂತುಕೊಂಡರು, ಒಂದರ ಹಿಂದೆ ಒಂದು ಅಭಂಗ ರಚನೆ ಅವರ ಬಾಯಿಂದ ಪ್ರಕಟವಾಗ ತೊಡಗಿದವು.

**ಆಜವರೀ ತುಮ್ಹಾ ಸಾಂಗಿತಲೀಮಾತ । ನಾಮಾವಿಣ ಹಿತ ಸಮಜೂ ನಕಾ ॥**
**ಮಾನೂನಕಾ ನಾಮ ಸಾಧನ ಹೇ ಲಹಾನ । ತುಮ್ಹಾಮಾಝೀ ಆಣ ಜೀವೇಭಾವೇ ॥**
**ಮಾನೂ ನಕಾ ಸಾರ ಸಂಸಾರ ಅಸಾರ । ದೃಶ್ಯ ಜೋಜಾರ ಮಾನೂ ನಕಾ ॥**
**ಸೋಡೂ ನಕಾ ನಾಮ ಧರೂನಕಾ ಕಾಮ । ನಾಹೀ ನಾಹೀ ನೇಮ ಆಯುಷ್ಯಾಚಾ ॥**
**ದೀನದಾಸಮ್ಹಣೇ ಸಾಂಗತೋ ತೇ ಐಕಾ । ಅಭ್ಯಾಸ ವೈಖರೀ ಸೋಡೂ ನಕಾ ॥**

ಶ್ರೀಮಹಾರಾಜರು ಭಾವ ವಿಭೋರರಾಗಿ ಹಾಡುತ್ತಿದ್ದರು, ಸ್ವತಃ ತನ್ನ ಆಣೆಯಿಟ್ಟು ನಾಮ ಮಹಾತ್ಮ್ಯ ಹೇಳುತ್ತಿದ್ದರು. ಕೇಳುವವರ ಕಣ್ಣುಗಳಿಂದ ನೀರು ಹರಿಯುತ್ತಿತ್ತು ,

**ಭಜನಾಚಾ ಶೇವಟ ಆಲಾ । ಏಕ ವೇಳ ರಾಮ ಬೋಲಾ ॥**
**ಆಜಿ ಪುಣ್ಯ ಪರ್ವಕಾಳ । ಪುನಃ ನಾಹೀ ಐಸೀ ವೇಳಾ ॥**
**ರಾಮನಾಮ ವಾಚೆ ಬೋಲಾ । ಆತ್ಮ ಸುಖಾ ಮಾಜೀ ಡೋಳಾ ॥**
**ದೀನದಾಸ ಸಾಂಗೇ ನಿಕಾ । ರಾಮನಾಮ ಸ್ವಾಮಿ ಶಿಕ್ಕಾ ॥**

ಭಜನೆಯ ಬಳಿಕ ಆರತಿ ಆಯಿತು. ಶ್ರೀಮಹಾರಾಜರು ಸಿಂಹಾಸನದಲ್ಲಿ ಕುಳಿತರು, ಜನರು ದರ್ಶನ ಪಡೆಯು ತೊಡಗಿದರು, ಚರಣ ವಂದನೆ ಮಾಡತೊಡಗಿದರು, ಆಗ ಓರ್ವ ಮಹಿಳೆ ನಮಸ್ಕರಿಸಿ ಹೇಳಿದಳು – ಮಹಾರಾಜ! ನೀವು ಒಂದರೆಡು ದಿನಗಳಲ್ಲಿ ಹೋಗುವಿರಿ... ಮುಂದೆ ಅವಳಿಂದ ಮಾತನಾಡಲು ಆಗಲಿಲ್ಲ. ಶ್ರೀಮಹಾರಾಜರು ಹೇಳಿದರು – ತಾಯಿ ! ಇದೆಲ್ಲವೂ ಈಶ್ವರಾಧೀನ ವಾಗಿದೆ, ದೇವರು ಇಟ್ಟಷ್ಟು ಇರಬೇಕು, ಅವನು ಕರೆದರೆ ಆನಂದದಿಂದ ಹೋಗಬೇಕು. ಅನಂತರ ಜನರು ಮಲಗಲಿಕ್ಕೆ ಹೋದರು, ಮತ್ತೆ ಶ್ರೀಮಹಾರಾಜರು ತಮ್ಮ ಕೋಣೆಗೆ ಬಂದರು, ಜೊತೆಗೆ ಹರಿಪಂತ ಮಾಸ್ತರ, ವಾಮನರಾವ ಜ್ಞಾನೇಶ್ವರೀ ಮತ್ತು ಅಮ್ಮಾ ಹೀಗೆ ಜನರಿದ್ದರು. ಮತ್ತೆ ಅವರನ್ನು ಬೀಳ್ಕೊಟ್ಟು ಶ್ರೀಮಹಾರಾಜರು ಶ್ರೀರಾಮ ನಾಮ ಸ್ಮರಿಸುತ್ತಾ ಅಡ್ಡಾದರು. ಆದರೂ ಅವರೆಲ್ಲ ಅಲ್ಲೇ ಇದ್ದರು. ಬೆಳಗಿನ ಝಾವ ಮಹಾರಾಜರು ಎದ್ದರು, ಶೌಚಮುಖ ಮಾರ್ಜನ ಮಾಡಿದರು, ಕೈಕಾಲು ತೊಳೆದು

ಶ್ರೀರಾಮರಾಯನ ಎದುರಿಗೆ ಕೈಮುಗಿದು ನಿಂತುಕೊಂಡರು, ಭಾವತುಂಬಿದ ಧನಿಯಲ್ಲಿ ಹೇಳಿದರು - ರಾಮರಾಯಾ ನನ್ನ ಜನರನ್ನು ಕಾಪಾಡು, ರಾಮರಾಯನಿಗೆ ಸಾಷ್ಟಾಂಗ ನಮಸ್ಕಾರ ಮಾಡಿ, ಅವರು ಅಮ್ಮಾನಿಗೆ ಹೇಳಿದರು - ನಾಮವಿರುವಲ್ಲಿ ನನ್ನ ಪ್ರಾಣ, ಈ ಗುರುತನ್ನು ಕಾಪಾಡಿಕೊಳ್ಳಿ. ಜೊತೆಗಿನ ಇತರರೂ ಶ್ರೀಮಹಾರಾಜರ ಚರಣಗಳಲ್ಲಿ ಮಸ್ತಕವನ್ನಿಟ್ಟು ನಮಸ್ಕರಿಸಿದರು.

ಉತ್ತಮವಾದ ಅಮೃತಗಳಿಗೆ ಶುರು ಆಯಿತು. ಶ್ರೀಮಹಾರಾಜರಿಗೆ ಉಸಿರು ಮೇಲೆ ಬಂತು, ಶ್ವಾಸೋಚ್ಛ್ವಾಸ ಜೋರಾಗ ತೊಡಗಿತು. ಜೇರೆ ಮಾಸ್ತರರು ಭಾವು ಸಾಹೇಬರನ್ನು ಕರೆ ಕಳಿಸಿ, ಸ್ವತಃ ತಾನು ಡಾ|| ಜೋಶಿಯವರನ್ನು ಕರೆಯಲು ಓಡಿದರು. ಡಾ|| ಜೋಶಿಯವರನ್ನು ಕರೆದುಕೊಂಡು ಬರುವ ಮೊದಲೇ ಆರಕ್ಕೆ ಹತ್ತು ನಿಮಿಷ ಇರುವಾಗಲೇ ಶ್ರೀಮಹಾರಾಜರು ದೇವಲೋಕಕ್ಕೆ ಗಮಿಸಿದರು. ವಾಮನರಾಯರು ಮಹಾರಾಜರನ್ನು ಗಟ್ಟಿಯಾಗಿ ಅಪ್ಪಿಕೊಂಡಿದ್ದರು. ಅವರು ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿತ್ತು . ಡಾ|| ಜೋಶಿಯವರನ್ನು ಭಾವುಸಾಹೇಬರು ಕರೆದುಕೊಂಡು ಬಂದರು, ಡಾ|| ಜೋಶಿಯವರು ಮುಂದೆ ಬಂದು, ಹೃದಯ ಪರೀಕ್ಷಿಸಿದರು, ನಾಡಿ ನೋಡಿದರು ನಾಮಾವತಾರೀ ಶ್ರೀಮಹಾರಾಜರು ಪರಲೋಕಕ್ಕೆ ಹೋಗಿದ್ದರು. ದುಃಖ ಪರಾಕಾಷ್ಟೆಗೆ ಮುಟ್ಟಿತು, ಭಾವುಸಾಹೇಬರು ಭಕ್ತರಿಗೆ ಈ ದುಃಖದ ವಾರ್ತೆ ತಿಳಿಸಲು ದಹಿವಡಿಗೆ ಜನ ಕಳಿಸಿದರು, ಪಂಢರಪುರ, ಪುಣೆ, ಗದಗ, ಕರ್ಹಾಡ, ಹೀಗೆ ಅನೇಕ ಊರುಗಳಿಗೆ ಅವರ ಭಕ್ತರಿಗೆ ತಂತಿ ಕಳಿಸಿದರು, ಮಹತ್ವದ ಪ್ರಮುಖ ಭಕ್ತರ ಪ್ರತೀಕ್ಷೆ ಶುರು ಆಗಿತ್ತು , ಗೋಶಾಲೆಯು ಅವರ ಮೆಚ್ಚಿದ ಜಾಗವಾಗಿತ್ತು , ಹಟ್ಟಿಯ ಬಳಿ ಅವರು ಕುಳಿತುಕೊಳ್ಳುತ್ತಿದ್ದ ಜಾಗವೇ ದಹನಭೂಮಿ ಎಂದು ನಿಶ್ಚಯಿಸಲಾಯಿತು. ಬ್ರಹ್ಮಾನಂದರು ಬರುವ ಯಾವುದೇ ಚಿಹ್ನೆ ಕಾಣಲಿಲ್ಲ. ಮಂಗಳವಾರ ಭಾವುಸಾಹೇಬರೇ ಮುಂದಾಳಾದರು, ಶ್ರೀಮಹಾರಾಜರ ಹಣೆಗೆ ಬುಕ್ಕಾ ಹಚ್ಚಲಾಯಿತು, ಕೊರಳಿಗೆ ತುಳಸೀ ಮಾಲೆ ಹಾಕಿದರು, ಪೂಜೆ, ಆರತಿ ಆಯಿತು, ಅವರ ದೇಹ ವಿಮಾನದಲ್ಲಿ ಇಡಲಾಯಿತು, 'ಜಾನಕೀ ಜೀವನ ಸ್ಮರಣ ಜಯ ಜಯ ರಾಮ' ಎಂದು ಹೇಳುತ್ತಾ ವಿಮಾನ ಎತ್ತಿದರು. 'ಜಯ ಜಯ ಶ್ರೀರಾಮ ಜಯ ಜಯ ಶ್ರೀರಾಮ' ಭಜನೆ ಮಾಡುತ್ತಾ ಗೊಂದವಲೆಯಲ್ಲಿ ಮೆರವಣಿಗೆ ಮಾಡಿ, ವಿಮಾನವನ್ನು ದಹನದ ಸ್ಥಳಕ್ಕೆ ತಂದರು. ದಾರಿಯಲ್ಲಿ ಅರವ ಮೇಲೆ ಹೂವು, ಗುಲಾಲ, ಬುಕ್ಕಾ ಎರಚಲಾಯಿತು.

ಸುಶೋಭಿತ ಸ್ಥಳದಲ್ಲಿ ಚಿತೆ ರಚಿಸಿದ್ದರು, ಚಿತೆಯ ಮೇಲೆ ಶ್ರೀಮಹಾರಾಜರ ದೇಹ ಇಡಲಾಯಿತು, ಶ್ರೀಮಹಾರಾಜರ ಚಿಕ್ಕಪ್ಪನ ಮಗ ಶ್ರೀಹರಿ ಅಂತ್ಯ ಸಂಸ್ಕಾರ ಮಾಡುತ್ತಿದ್ದರು, ಮಧ್ಯಾಹ್ನ ಮೂರರ ಸುಮಾರಿಗೆ ಚಿತೆ ಧಗಧಗನೆ ಉರಿಯಿತು, ಜ್ವಾಲೆ ಆಕಾಶದ ಕಡೆಗೆ ಮೇಲೆದ್ದವು, ಶ್ರೀಮಹಾರಾಜರ ಮುದ್ದಿನ ನಾಯಿ ಚಿತೆಗೆ ಪ್ರದಕ್ಷಿಣೆ ಮಾಡುತ್ತಿತ್ತು . ಚಿತೆಯು ಹೊತ್ತಿ ಉರಿಯುತ್ತಿರುವಾಗ ಭವಾನರಾವ ಉದ್ವಿಗ್ನರಾದರು, ದುಃಖಾತಿರೇಕದಿಂದ ಚಿತೆಯಲ್ಲಿ ಹಾರಲು ಪ್ರಯತ್ನಿಸುತ್ತಿದ್ದರು, ಇತರರು ಅವರನ್ನು ಮಹತ್ ಪ್ರಯಾಸದಿಂದ ತಡೆದರು, ಅವರನ್ನು ಸಮಾಧಾನ ಪಡಿಸಿದರು.

ನಿಜವೆಂದರೆ ಶ್ರೀಮಹಾರಾಜರದೇ ಶಬ್ದಗಳಿವೆ 'ಈ ದೇಹವೆಂದರೆ ನಾನಲ್ಲ, ನಾನು ಬಂದಿಲ್ಲ, ಹೋಗಲೂ ಇಲ್ಲ, ರಾಮನಾಮವಿರುವಲ್ಲಿ ನಾನು ಇದ್ದೇನೆ.'

**ಜೇಥೇ ನಾಮ ಅಖಂಡಿತ । ತೇಥೇ ವೇದ ಮೂರ್ತಿಮಂತ ॥**
**ಜೇಥೇ ನಾಮಾಚಾ ಹಾ ಚಾಳಾ । ತೇಥೇ ಪಾಪೇ ಜಳತೀ ಜ್ವಾಳಾ ॥**
**ನಿಷ್ಕಾಮನಾಮ ಘೇತಾ । ತೋಚಿ ಜಾಣಾ ಬ್ರಹ್ಮವೇತ್ತಾ ॥**
**ದಾಸಮ್ಹಣೇ ನಾಮರೂಪಚಿತ್ತ । ತೋಚಿ ಜಾಣಾ ಜೀವನ್ಮುಕ್ತ ॥**

ಶ್ರೀಬ್ರಹ್ಮಚೈತನ್ಯ ಗೊಂದವಲೆಕರ ಮಹಾರಾಜರ ಚರಿತ್ರವನ್ನು ಅವರ ಪವಿತ್ರ ಚರಣಗಳಲ್ಲಿ ಸಾದರ ಸವಿನಯ ಸಮರ್ಪಿತ.

□□

ದೇವಲೋಕಕ್ಕೆ ಮಹಾಪ್ರಸ್ಥಾನ

## ಇದೇ ಗುರುಗಳ ಸುಬೋಧ

ನಾಮ ಸದಾ ಬೋಲಾವೇ, ಗಾವೇ ಭಾವೇ ಜನಾಂಸಿ ಸಾಂಗಾವೆ ।
ಹಾಚ ನಿರೋಪ ಗುರೂಂಚಾ, ನಾಮಾ ಪರತೇ ನ ಸತ್ಯಮಾನಾವೇ ॥ 1 ॥
ನಾಮಾಂತ ರಂಗುನಿಯಾ ವ್ಯವಹಾರೀ ಸರ್ವ ಭೋಗ ಸೇವಾವೇ ।
ಹಾಚ ನಿರೋಪ ಗುರೂಂಚಾ, ಭೋಗಾಸಂಗೇ ಕುಠೇ ನ ಗುಂತಾವೇ ॥ 2 ॥
ಆನಂದಾಂತ ಅಸಾವೇ, ಆಳಸ ಭಯ ದ್ವೇಷ ದೂರ ತ್ಯಾಗಾವೇ ।
ಹಾಚ ನಿರೋಪ ಗುರೂಂಚಾ, ಅನುಸಂಧಾನಾ ಕಧೀನ ಚುಕವಾವೇ ॥ 3 ॥
ಗೋಡ ಸದಾ ಬೋಲಾವೆ, ನಮ್ರಪಣೆ ಸರ್ವಲೋಕ ಪ್ರಿಯ ವ್ಹಾವೆ ।
ಹಾಚ ನಿರೋಪ ಗುರೂಂಚಾ, ಭಕ್ತಿವೇ ರಘುಪತೀಸ ಆಳವಾವೇ ॥ 4 ॥
ಸ್ವಾಂತರ ಶುದ್ಧ ಅಸಾವೇ, ಕಪಟಾಚರಣಾ ಕಧೀ ನ ವಶವ್ಹಾವೇ ।
ಹಾಚ ನಿರೋಪ ಗುರೂಂಚಾ, ಮನ ಕೋಣಾಚೆ ಕುಧೀನ ದುಖವಾವೆ ॥ 5 ॥
ಮಾರುಥಾ ರಾಮ ಸಖಾ, ಮೀರಾ ಮಾಚಾದಾಸ, ನಿತ್ಯ ಬೋಲಾವೇ ।
ಹಾಚ ನಿರೋಪ ಗುರೂಂಚಾ, ರಾಮಾಪಾಶಿ ಅನನ್ಯ ವಾಗಾವೇ ॥ 6 ॥
ಯತ್ನ ಕಸೂನ ಕರೀನ ಮಿ ಯಶ ದೇ, ರಾಮಾ, ನ ದೇ ತುಝೀ ಸತ್ತಾ ।
ಹಾಚ ನಿರೋಪ ಗುರೂಂಚಾ, ಮಾನಾವಾ ರಾಮ ಸರ್ವಥಾ ಕರ್ತಾ ॥ 7 ॥
ಆಚಾರ ಸಂಯಮಾನೇ ಯುಕ್ತ ಅಸಾ ನೀತಿ ಧರ್ಮ ಪಾಳಾವಾ ।
ಹಾಚ ನಿರೋಪ ಗುರೂಂಚಾ, ಖೇಳಾಐಸಾ ಪ್ರಪಂಚ ಮಾನಾವಾ ॥ 8 ॥
ದಾತಾ ರಾಮ ಸುಖಾಚಾ, ಸಂಸಾರಾ ಮಾನ ತೂ ಪ್ರಭುಸೇವಾ ।
ಹಾಚ ನಿರೋಪ ಗುರೂಂಚಾ, ಸಂತೋಷಾ ಸರ್ವದಾ ಮನೀಠೇವಾ ॥ 9 ॥
ಸ್ವಾರ್ಥ ಖರಾ ಸಾಧಾರೇ, ನಿತ್ಯ ತುಮ್ಹೀ ನಾಮಗಾಯನೀ ಜಾಗಾ ।
ಹಾಚ ನಿರೋಪ ಗುರೂಂಚಾ, ಮೀಪಣ ಜಾಳೋನಿಯಾ ಜಗೀವಾಗಾ ॥ 10 ॥
ಅಭಿಮಾನ ಶತ್ರು, ಮೋಠಾ, ಸರ್ವಾಂನಾ ಜಾಚತೋ ಸುಖಾಶೇನೆ ।
ಹಾಚ ನಿರೋಪ ಗುರೂಂಚಾ, ಮಾರಾವಾ ತೋ ಸಮುಳ ನಾಮಾನೇ ॥ 11 ॥
ರಾಜ್ಯಾಧಿಕಾರ ಯೇವೋ, ಕಿಂವಾ ಜಾವೋ ಸಮಸ್ತಧನ ಮಾನಾ ।
ಹಾಚ ನಿರೋಪ ಗುರೂಂಚಾ, ಭಂಗಾವೇ ನ ಕದಾ ಸಮಾಧಾನ ॥ 12 ॥
ಪ್ರೇಮಾಂತ ರಾಮರಮತೋ, ಪ್ರೇಮಾಲಾ ಮೋಲ ನಾ ಜಗಾಮಾಜೀ ।
ಹಾಚಿ ಸುಬೋಧ ಗುರೂಂಚಾ, ಗುರುರಾಯಾಲಾ ತಹಾನ ಪ್ರೇಮಾಚೀ ॥ 13 ॥